# ಬಾದಾಮಿ ಚಲುಕ್ಯ ದೇವಾಲಯಗಳ ತಲ ವಿನ್ಯಾಸಗಳು

ಡಾ. ವಿರೂಪಾಕ್ಷ ಬಡಿಗೇರ



ಕರ್ನಾಟಕ ಶಿಲ್ಪಕಲಾ ಅಕಾಡೆಮಿ
ಬೆಂಗಳೂರು

# ಬಾದಾಮಿ ಚಲುಕ್ಯ ದೇವಾಲಯಗಳ ತಲವಿನ್ಯಾಸಗಳು

ಸಂಪಾದಕರು

ಶ್ರೀ ಎಲ್. ಶಿವಲಿಂಗಪ್ಪ

ಲೇಖಕರು

ಡಾ॥ ವಿರೂಪಾಕ್ಷ ಬಿ. ಬಡಿಗೇರ

**Badami Chalukya Devalayagala Tala Vinyasa**
Dr. Virupaksha Badigera

*Published by:*
**Smt. Indramma H.V.**
Registrar, Karnataka Shilpakala Academy
Kannada Bhavana, J.C. Road, BENGALURU-560 002.

First Edition : 2015

Pages : viii + 140+Colour pages 20
Price : Rs. 120/-
Copies : 1000

Printed at
M.S. Graphics, Bengaluru - 560 079. Ph. : 080-23580271

---

**ಬಾದಾಮಿ ಚಲುಕ್ಯ ದೇವಾಲಯಗಳ ತಲ ವಿನ್ಯಾಸಗಳು**
ಡಾ. ವಿರೂಪಾಕ್ಷ ಬಡಿಗೇರ

ಪ್ರಕಾಶಕರು
**ಶ್ರೀಮತಿ ಇಂದ್ರಮ್ಮ ಹೆಚ್.ವಿ.**
ರಿಜಿಸ್ಟ್ರಾರ್, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು-೫೬೦ ೦೦೨

ಮೊದಲ ಮುದ್ರಣ : ೨೦೧೫

ಪುಟಗಳು : viii + ೧೪೦ + ಛಾಯಾಚಿತ್ರಗಳು ೨೦
ಬೆಲೆ : ರೂ. ೧೨೦/-
ಪ್ರತಿಗಳು : ೧೦೦೦

ಮುದ್ರಣ
ಎಂ.ಎಸ್. ಗ್ರಾಫಿಕ್ಸ್, ಬೆಂಗಳೂರು - ೫೬೦ ೦೭೯, ದೂರವಾಣಿ: ೦೮೦-೨೩೫೮೦೨೭೧

# ಪರಿವಿಡಿ

# ಅಧ್ಯಕ್ಷರ ನುಡಿ

ಕರ್ನಾಟಕ ಶಿಲ್ಪಕಲಾ ಅಕಾಡೆಮಿಯು ಈಗಾಗಲೇ ಬಾದಾಮಿ ಚಲುಕ್ಯರ ದೇವಾಲಯಗಳ ಅಲಂಕಾರ ಶಿಲ್ಪಗಳು ಎಂಬ ಪುಸ್ತಕವನ್ನು ಹೊರತಂದಿದ್ದು, ಅದೇ ರೀತಿ ಬಾದಾಮಿ ಚಲುಕ್ಯ ದೇವಾಲಯಗಳ ತಲ ವಿನ್ಯಾಸಗಳು ಎಂಬ ಪುಸ್ತಕವನ್ನು ಹೊರತರುವ ಉದ್ದೇಶದಿಂದ ಶ್ರೀ ವಿರೂಪಾಕ್ಷ.ಬಿ.ಬಡಿಗೇರ ಇವರು ಬರೆದಿರುವ ಪುಸ್ತಕವನ್ನು ಹೊರತರಲು ನಿರ್ಧರಿಸಿದೆ. ಕರ್ನಾಟಕದಲ್ಲಿ ಕ್ರಿ.ಶ.6ನೇ ಶತಮಾನದ ಮಧ್ಯಭಾಗದಿಂದ ಮೊದಲುಗೊಂಡು ಸುಮಾರು ಎರಡು ಶತಮಾನಗಳಷ್ಟು ಕಾಲ ಚಾಲುಕ್ಯರು ಆಡಳಿತ ಮಾಡಿ ತಮ್ಮ ಕುರುಹುಗಳು ನಮ್ಮ ಕರುನಾಡಿನಲ್ಲಿ ಇಂದಿಗೂ ಉಳಿದಿವೆ. ಬಾದಾಮಿ ಚಾಲುಕ್ಯರು ತಮ್ಮ ಆಡಳಿತಾವಧಿಯಲ್ಲಿ ಭಾರತೀಯ ವಾಸ್ತುಕಲಾ ಕ್ಷೇತ್ರಕ್ಕೆ ನೀಡಿರುವ ಕೊಡುಗೆ ಅಪಾರವಾದುದು. ಚಾಲುಕ್ಯ ವಾಸ್ತುಕಲಾ ರಚನೆಯಲ್ಲಿ ಗುಹಾಲಯಗಳ ಪ್ರಯೋಗವು ಐಹೊಳೆ, ಬಾದಾಮಿಗಳಲ್ಲಿ ಮಾತ್ರ ಕಾಣಲು ಸಿಗುತ್ತವೆ. ಚಾಲುಕ್ಯರ ಕಾಲದ ಬಾದಾಮಿಯ ಕಲ್ಮನೆಗಳು(ಗುಹಾಲಯಗಳು), ಶೈವ, ವೈಷ್ಣವ, ಜೈನ ಮತಗಳ ಆಧಾರದ ವಾಸ್ತುಶಿಲ್ಪಗಳಾಗಿದ್ದು, ಇವುಗಳ ನಿರ್ಮಾಣ ಕೌಶಲ್ಯತೆಯಿಂದಾಗಿ ಹೆಚ್ಚಿನ ಪ್ರಾಮುಖ್ಯತೆ ಪಡೆದುಕೊಂಡಿದೆ. ಚಾಲುಕ್ಯ ಅರಸರ ಪ್ರಥಮ ರಾಜಧಾನಿಯಾಗಿದ್ದ ಐಹೊಳೆ(ಆರ್ಯಪುರ)ಯಂತೂ ಹಲವು ವಾಸ್ತುಶಿಲ್ಪ ಪ್ರಕಾರಗಳ ಪ್ರಯೋಗಶಾಲೆಯಾಗಿ ಕಾಣುತ್ತದೆ. ಇಲ್ಲಿ ನಿರ್ಮಾಣಗೊಂಡಿರುವ ಔತ್ತರೇಯ, ದಾಕ್ಷಣಾತ್ಯ ಹಾಗೂ ವೇಸರ ಶೈಲಿಯ ರಚನೆಗಳು ತಮ್ಮ ವೈವಿಧ್ಯಯ ಕಲಾ ವೈಖರಿಯಿಂದಾಗಿ ದೇಶ ವಿದೇಶದ ಲಕ್ಷಾಂತರ ಕಲಾ ರಸಿಕರ ಮನಗಳನ್ನು ಇಂದಿಗೂ ಸೆಳೆಯುತ್ತಿವೆ. ಈ ಸಂಬಂಧವಾಗಿ ಬಾದಾಮಿ ಚಲುಕ್ಯ ದೇವಾಲಯಗಳ ತಲ ವಿನ್ಯಾಸಗಳು ಎಂಬ ಪುಸ್ತಕವನ್ನು ಬರೆಯಲು ಅಕಾಡೆಮಿಯ ಪರವಾಗಿ ಅವರನ್ನು ಕೋರಿದಾಗ ಅವರು ತುಂಬು ಮನಸ್ಸಿನಿಂದ ಒಪ್ಪಿ ಶ್ರೀಯುತರು ಪುಸ್ತಕವನ್ನು ಬರೆದು ಪುಸ್ತಕಕ್ಕೆ ಒಂದು ರೂಪವನ್ನು ಕೊಟ್ಟಿರುತ್ತಾರೆ. ಅವರಿಗೆ ನಾನು ಹಾಗೂ ಅಕಾಡೆಮಿಯು ತುಂಬು ಹೃದಯದ ಧನ್ಯವಾದಗಳನ್ನು ಅರ್ಪಿಸುತ್ತದೆ.

ನಮ್ಮ ದೇಶದಲ್ಲಿ ದೇವಾಲಯಗಳೆಂದರೆ ಬರಿಯ ಕಟ್ಟಡವಲ್ಲ. ಆದೊಂದು ಸಂಕೇತ, ದೈವತ್ವದ ಕಲ್ಪನೆ, ಕಲ್ಪನೆಗೆ ಪ್ರಾದೇಶಿಕವಾದ ಒಂದು ಹರವನ್ನೂ, ಭೌತಿಕವಾದ ಒಂದು ರೂಪವನ್ನು ಒದಗಿಸುವುದು ಸಹಜ. ಇದರ ಅಗತ್ಯವೂ ಇದೆ. ಆದರೆ ಒಮ್ಮೆ ರೂಪ ತಳೆಯಿತೆಂದರೆ ಕಲ್ಪನೆಯು ಅದನ್ನೇ ಅವಲಂಬಿಸಿ ಅಷ್ಟಕ್ಕೇ ಸೀಮಿತವಾಗಿರಬೇಕೆಂಬ ನಿಯಮವಿಲ್ಲ. ಮೊದಲಿಗೆ ಕಲ್ಲು ಗುಂಡೆಗಳ ವೃತ್ತವಾಗಿದ್ದು, ಬರುಬುತ್ತ ಗುಡಿಗಳು, ಅಂಕಣಗಳು, ಮಂಟಪಗಳು, ಪ್ರದಕ್ಷಿಣಾ ಪಥಗಳು, ಪುಷ್ಕರಿಣಿಗಳು, ಮೊದಲಾಗಿ ಬೆಳೆಯಿತು. ದೇಗುಲಗಳ ಪರಿಸರದೊಳಗೆ ಹಲವು ಕಡೆ ಹಳ್ಳಿಗಳು, ನಗರಗಳು ಮೂಡಿ ಬಂದವು. ಬಾದಾಮಿ ಚಲುಕ್ಯರ ಬಗ್ಗೆ ಮತ್ತು ಅವರ ಕಾರ್ಯಕ್ಷಮತೆ ಬಗ್ಗೆ ಹೇಳುತ್ತ ಹೋದರೆ ಒಂದು ಹೊಸದಾಗಿ ಲೋಕವನ್ನೇ ಸೃಜಿಸಬಹುದಾಗಿದೆ. ಇಂತಹ ಮಾಹಿತಿಯುಳ್ಳ ಪುಸ್ತಕವನ್ನು ನನ್ನ ಅಧಿಕಾರಾವಧಿಯಲ್ಲಿ ಮುದಿಸುತ್ತಿರುವುದಕ್ಕೆ ಹೆಮ್ಮೆಯೆನಿಸುತ್ತದೆ. ಇಂತಹ ದೇವಾಲಯದ ವಿನ್ಯಾಸಗಳ ಪುಸ್ತಕವನ್ನು ಕಲಾಭಿಮಾನಿಗಳು ಬಹಳ ಆತ್ಮೀಯವಾಗಿ ಸ್ವಾಗತಿಸುತ್ತಾರೆ ಎಂಬ ಭರವಸೆ ಇದೆ. ಪುಸ್ತಕದ ಲೇಖಕರಾದ ಶ್ರೀ ವಿರೂಪಾಕ್ಷ.ಬಿ.ಬಡಿಗೇರ ಅವರಿಗೆ ಮತ್ತೊಮ್ಮೆ ಅಭಿನಂದನೆಗಳು. ಈ ಪುಸ್ತಕದ ಮುದ್ರಣಕ್ಕೆ ಸಹಕರಿಸಿದ ಅಕಾಡೆಮಿಯ ಕಾರ್ಯಕಾರಿ ಸಮಿತಿ ಸದಸ್ಯರಿಗೂ, ಅಕಾಡೆಮಿಯ ರಿಜಿಸ್ಟ್ರಾರ್ ಆದ ಶ್ರೀಮತಿ ಇಂದ್ರಮ್ಮ.ಹೆಚ್.ವಿ. ಅವರಿಗೂ ಅಕಾಡೆಮಿಯ ಸಿಬ್ಬಂದಿಗಳಿಗೂ, ಈ ಪುಸ್ತಕವನ್ನು ಅಂದವಾಗಿ ಮುದ್ರಣ ಮಾಡುತ್ತಿರುವ ಮಾಲೀಕರು, ಎಂ.ಎಸ್.ಗ್ರಾಫಿಕ್ಸ್, ಬೆಂಗಳೂರು ಇವರಿಗೂ ತುಂಬು ಹೃದಯದ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

**ಮಹಾದೇವಪ್ಪ ಶಂಭುಲಿಂಗಪ್ಪ ಶಿಲ್ಪಿ**
ಅಧ್ಯಕ್ಷರು
ಕರ್ನಾಟಕ ಶಿಲ್ಪಕಲಾ ಅಕಾಡೆಮಿ

# ಸಂಪಾದಕೀಯ

ಕವಿಯ ಕಾವ್ಯ-ಗೀತೆಯಂತಹವುಗಳನ್ನು ಎಷ್ಟೇ ಉತ್ಕೃಷ್ಟ್ಯವಾಗಿ ರಚಿಸಿದ್ದರೂ ಅವುಗಳನ್ನು ಗಮಕರೂಪದಲ್ಲಾಗಲಿ, ಅಥವಾ ಸ್ವರ ಸಂಯೋಜನೆ ಮಾಡಿ ಹಾಡಿದಾಗ ಶ್ರೋತೃವಿಗೆ ಕೊಡುವ ರಸಾನುಬವ ಶಬ್ದಾತೀತವಾದದ್ದು, ಆನಂದವನ್ನೀಯುವಂತಹದ್ದು. ಗೀತ ರಚನಕಾರರ ಮನದ ಮಿಡಿತ, ತುಡಿತ ಮತ್ತು ಸಂವೇದನೆಗಳಿಗನುಗುಣವಾಗಿ ಅವನು ಶಬ್ದಗಳಲ್ಲಿ ದಾಖಲಿಸಿದುದನ್ನು ಅರ್ಥೈಸಿಕೊಂಡು ಯಾವ ರಾಗದಲ್ಲಿ ಹಾಡಿದರೇ ಹೊಂದಾಣಿಕೆ ಆಗುವುದರೊಂದಿಗೆ ಕೇಳುಗಳ ಮನತಟ್ಟುತ್ತದೆಂಬ ವಿವೇಚನಾ ಕ್ರಿಯೆ ಮೂಲಕ ಗೀತ ರಚನಾಕಾರರ ಮತ್ತು ಸಂಗೀತಗಾರ ಈರ್ವರೂ ಮಾನ್ಯರಾಗುತ್ತಾರೆ. ಯಾರು ಮುಖ್ಯರು? ಯಾರು ಆಮುಖ್ಯರು ಪ್ರಶ್ನೆ ಬರುವುದಿಲ್ಲ.

ಅಂತೆಯೆ ಪುರಾಣಿಕ ಮತ್ತು ಶಿಲ್ಪಿಯ ಸಂಬಂಧವು ಕೂಡಾ. ಪುರಾಣೀಕ ತನ್ನ ಇಚ್ಛೆಯಂತೆ ದೇವ ದೇವತೆಗಳನ್ನು ಸಹಜವಾದ ಮಾನವ ರೂಪಕ್ಕಿಂತ ಅತೀತವಾದ ಆಕಾರ ವಿಕಾರಗಳನ್ನು (ಮಾನವ ದೇಹ ಪ್ರಾಣಿ ತಲೆ ಸೇರಿಸಿದ ರೂಪಗಳು, ನಾಲ್ಕು ಹದಿನೆಂಟು, ಮೂವತ್ತಾರು ಕೈಗಳವರೆವಿಗೂ ಒಂದೇ ದೇಹಕ್ಕೆ ಅಳವಡಿಕೆ, ಹತ್ತೂ ತಲೆಗಳುಳ್ಳ ಒಂದೇ ದೇಹ ಇತ್ಯಾದಿ) ತನ್ನ ಕಲ್ಪನಾ ಮೂಸೆಯಿಂದ ಶಬ್ದಗಳ್ನು ಸೃಷ್ಟಿಸಿದುದನ್ನು ಶಿಲ್ಪಿ ಅಥವಾ ಕರಕುಶಲಗಾರ ಕಲ್ಲು, ಮರ, ಲೋಹ, ಮಣ್ಣು ಮತ್ತಿತರ ಮಾಧ್ಯಮಗಳಲ್ಲಿ ಸೃಷ್ಟಿಸುವುದು ಸುಲಭ ಮಾತಲ್ಲ. ಈ ಉಬಯತ್ರರಿಂದಾಗಿ ಭಾರತದ ದೇವಾಲಯಗಳನ್ನು ದೇವರುಗಳ ಸಂಖ್ಯೆಯು ಅಗಣೀತವಾಗಿ ರೂಪ ತಾಳಿವೆ. ಅದುವೆ ಕಲಾ ಸಂಸ್ಕೃತಿಯಾಗಿ ನಾಡಿನ ಹೆಗ್ಗುರುತುಗಳಾಗಿವೆ. (ಹಾಗೆಯೇ ಆರಾಧಕರ ಸಂಖ್ಯೆಯು ಅಪರಿಮಿತವಾಗಿ ಬೆಳೆದು ತಮ್ಮ ತಮ್ಮ ಆರಾಧನ ದೇವರುಗಳೇ ಶ್ರೇಷ್ಠವೆಂಬ ಭಾವನೆ ಬೆಳೆದು ಅಸಂಘಟನೆಗೆ ಹಾದಿಯಾಗಿರುವುದು ಉಂಟು)

ಆದರೆ ಪುರಾಣಿಕರ ಹೆಸರು ಅಕ್ಷರಗಳಲ್ಲಿ ದಾಖಲಾಗಿ ಸರ್ವ ಸಾಮಾನ್ಯನಾಗಿದ್ದಾರೆ. ಅದಕ್ಕೆ ದೃಶ್ಯರೂಪ ನೀಡಿದ ಶಿಲ್ಪಿ ಮಾತ್ರ ಗೌಣವಾಗಿದ್ದಾನೆ. ಈರ್ವರಿಗಿಂತ ಮಿಗಿಲಾಗಿ ದೇವಾಲಯವನ್ನು ನಿರ್ಮಿಸಲು ಪ್ರೋತ್ಸಾಹಿಸಿದ ರಾಜ ಮಹಾರಾಜರುಗಳು ಚರಿತ್ರೆಯ ಪುಟಗಳನ್ನು ಸರ್ವ ಕಾಲಕ್ಕೂ ಇಂತಹವರ ಕಾಲದಲ್ಲಾಯಿತೆಂಬ ಅಗ್ಗಳಿಕೆಗೆ ಪಾತ್ರರಾಗುತ್ತಾರೆ. (ಗಂಗರು- ಕದಂಬರು, ಹೊಯ್ಸಳರು, ಚೋಳರು, ಚಾಲುಕ್ಯರು, ಪಲ್ಲವರು, ರಾಷ್ಟ್ರಕೂಟರು ಇತ್ಯಾದಿ)

ಈ ಅಗ್ಗಳಿಕೆಯೇ ಮತ್ತೋರ್ವ ರಾಜನ ವೈಶ್ಯಮ್ಯಕ್ಕೆ ಕಾರಣವಾಗಿ ಅವಸಾನದ ಅಂಚನ್ನು ತಲುಪಿರುವುದಕ್ಕೆ ಅನೇಕ ಉದಾಹರಣೆಗಳುಂಟು. ಅವುಗಳೇ ಇಂದು ಭಾರತ ಸರ್ಕಾರದಿಂದ ಸಂರಕ್ಷಿಸಲ್ಪಡುತ್ತಿರುವ ಪ್ರದೇಶಗಳಾಗಿ ಯಥಾರೀತಿಯಲ್ಲಿಯೇ ಕಾಪಾಡಿಕೊಂಡು ಬರುವುದೇ ಗುರಿಯಾಗಿಸಿ ಕೊಂಡಿರುವುದನ್ನು ನಾವು ಕಾಣಬಹುದಾಗಿದೆ. ಇದರೊಂದಿಗೆ ಆ ದೇವಾಲಯದ ಸ್ವರೂಪಗಳನ್ನು ಸಂಶೋಧನಾ ರೂಪದಲ್ಲಿ ವಿಮರ್ಶಿಸಿ, ವಿಶ್ಲೇಷಿಸಿ, ಅನ್ಯಶೈಲಿಯೊಂದಿಗಿನ ಸಾಮ್ಯ-ಹೋಲಿಕೆಗಳೊಂದಿಗೆ ವಿಚಾರ ಪೂರ್ಣಬರಹದ ಮೂಲಕ ಇಂದು ಪುಸ್ತಕ ರೂಪ ತಾಳುತ್ತಿರುವುದು ಮಹತ್ತರ ಬೆಳವಣಿಗೆ ಅನ್ನಬಹುದು.

ಡಾ.ವಿರೂಪಾಕ್ಷ ಬಡಿಗೇರ ಅವರು ಬರೆದಿರುವ ಈ ಪುಸ್ತಕದಲ್ಲಿ ಬಾದಾಮಿ ಚಾಲುಕ್ಯರ ದೇವಾಲಯಗಳಲ್ಲಿನ ತಲ ವಿನ್ಯಾಸಗಳನ್ನು ಕುರಿತಂತೆ ಚಿತ್ರ ಸಹಿತವಾಗಿ ವಿವರಿಸಿ ಸಹೃದಯ ಓದುಗರಿಗೆ

ಒಂದು ಹೊಸ ಆಯಾಮವನ್ನು ನೀಡಿರುವುದು ಹೆಮ್ಮೆಯ ಸಂಗತಿ, ಚಾಲುಕ್ಯ ದೇವಾಲಯಗಳ ರೂಪ, ಸ್ವರೂಪ, ನಿರೂಪಗಳೊಂದಿಗೆ ಪ್ರವೇಶ ದ್ವಾರದಿಂದಿಡಿದು ಧ್ವಜಸ್ತಂಭ, ಪ್ರದಕ್ಷಿಣೆ ಪಥ, ಏಕಕೂಟ, ದ್ವಿಕೂಟ, ತ್ರಿಕೂಟಾಚುಗಳೆಂಬ ವಿಂಗಡಣೆಯೊಂದಿಗೆ, ಮುಖಮಂಟಪ, ಸುಖಾನಾಶಿ, ಗರ್ಭಗುಡಿ, ಗೂಪಿರ, ಕಳಸ ಇವುಗಳ ವಿವರಗಳೊಂದಿಗೆ 'ದೇಹವೇ ದೇವಾಲಯ'ವೆಂಬ ನುಡಿಗೆ ಅನುಗುಣವಾಗಿ ತಲವಿನ್ಯಾಸವನ್ನು ಅಂಗಾತನಾಗಿ ಮಲಗಿರುವ ಮಾನವನ ದೇಹಕ್ಕೆ ಹೋಲಿಸಿ ಓದುಗನ ಮನಸ್ಸನ್ನು ತಕ್ಷಷಣ ಆಕರ್ಷಿಸುವಂತೆ ಮಾಡಿದ್ದಾರೆ.

ವಿದ್ವತ್ ಪೂರ್ಣವಾದ ಈ ಪುಸ್ತಕದಲ್ಲಿ ಹಳೆಯ ಸಂಗತಿಗಳ ಮೇಲೆ ಹೊಸ ಬೆಳಕನ್ನು, ಹೊಸ ಸಂಗತಿಗಳ ಅನಾವರಣದ ಸಂಶೋಧನೆಯನ್ನು ಇಲ್ಲಿ ಕಾಣಬಹುದಾಗಿದೆ. ಪಂಡಿತ ಮತ್ತು ಪಾಮರರಿಬ್ಬರಿಗೂ ಅದರಲ್ಲೂ ವಿಶೇಷವಾಗಿ ಶಿಲ್ಪಕಲಾ ಅಧ್ಯಯನ ಮಾಡುವವರಿಗೆ ಮಾರ್ಗಸೂಚಿ ಗ್ರಂಥವಾಗಿದೆಯೆಂದರೆ ತಪ್ಪಾಗಲಿಕ್ಕಿಲಲ. ಪ್ರತಿಪಾದಿಸುವ ವಿಷಯಕ್ಕನುಗುಣವಾಗಿ ಛಾಯಾಚಿತ್ರಗಳನ್ನು ಹಾಗೂ ರೇಖಾಚಿತ್ರಗಳನ್ನು ಅಳವಡಿಸಿ ಪುಸ್ತಕದ ಮೌಲ್ಯವನ್ನು ಹೆಚ್ಚಸಿದ್ದಾರೆ. ಕೊನೆಯಲ್ಲಿ 'ವಿಷಯಸೂಚಿ'ಯನ್ನು ಬರೆದಿದ್ದರೇ ಓದುಗನ ಹುಡುಕಾಟಕ್ಕೆ ಸಹಾಯವಾಗುತ್ತಿತ್ತು.

ಬಹುತೇಕ ಗ್ರಂಥಗಳಲ್ಲಿ ದಾಖಲಿಸಿರುವಂತೆ ಹಾಗೂ ಚಾಲನೆಯಲ್ಲಿರುವ ಚಾಲುಕ್ಯ-ಪುಲಕೇಶಿ ಎಂಬ ನಾಮಾಂಕಿತಗಳು ಈ ಪುಸ್ತಕದಲ್ಲಿ ಚಲುಕ್ಯ-ಪೊಲಕೇಶಿ ಎಂದು ಮೂಲ ನಾಮಾಂಕಿತವನ್ನು ಬಳಸಿ ಸಮರ್ಥವಾದ ವಿವರಣೆಯನ್ನು ಸಹ ನೀಡಿದ್ದಾರೆ. ಕಾಲದಿಂದ ಕಾಲಕ್ಕೆ ಹೆಸರು ಬದಲಾಗುತ್ತಾ ಮೂಲ ಹೆಸರೇ ಮರೆಯಾಗುತ್ತಿರುವುದಕ್ಕೆ ಬಾಂಬೆ-ಬೊಂಬಾಯಿ ಈಗ ಮುಂಬೈ ಆಗಿಯೂ ದೆಹಲಿಯು ಡೆಲ್ಲಿ ಎಂತಲೂ ಚಾಲನೆಯಲ್ಲಿರುವುದನ್ನು ಗಮನಿಸಬಹುದಾಗಿದೆ. ಕನ್ನಡ ಅಕ್ಷರ ಮಾಲಿಕೆಯಲ್ಲಿ ಋ ಕಾರಗಳು ಮರೆಯಾಗುತ್ತಾ ಬಂದು ರು, ರೂ ಎಂದು ಬದಲಿ ಪದ ಪ್ರಯೋಗವಾಗುತ್ತಿದೆ. ಇಂತಹ ಬದಲಾವಣೆಗಳು ಸಹಜ. ಅನ್ಯ ಭಾಷೆಯಿಂದ ಬರುವ ಪದಗಳನ್ನೇ ಕನ್ನಡಿಕರಿಸಲು ಹೋಗಿ ಅರ್ಥ ಅನರ್ಥವಾಗಿರುವುದುಂಟು. ಓದುಗರು ಲೇಖಕರ ಮೂಲ ಆಶಯವನ್ನು ಅರಿತು ಸ್ವೀಕರಿಸುವಂತಾಗಬೇಕು.

ಲಲಿತಕಲಾ ಕ್ಷೇತ್ರದಲ್ಲಿ ಅದರಲ್ಲೂ ಸಾಹಿತ್ಯ ಕ್ಷೇತ್ರದಲ್ಲಿ ಪ್ರಕಟವಾಗಿರುವ ಪುಸ್ತಕಗಳ ಸಂಖ್ಯೆಗೆ ಹೋಲಿಸಿದರೆ ಶಿಲ್ಪಕಲೆಗೆ ಸಂಬಂಧಿಸಿದ ಪ್ರಕಟಿತ ಪುಸ್ತಕಗಳ ಸಂಖ್ಯೆಗೆ ಅತ್ಯಂತ ಕಡಿಮೆ ಎನ್ನಬಹುದು. ಈ ದಿಸೆಯಲ್ಲಿ ಕರ್ನಾಟ ಶಿಲ್ಪಕಲಾ ಅಕಾಡೆಮಿ ಜಾಗ್ರತೆ ವಹಿಸಿ ಸಂಶೋಧನಾತ್ಮಕವಾದ ವಿಷಯಗಳನ್ನು ಪ್ರಕಟಿಸುವ ಯೋಜನೆ ಮಾಡಿರುವುದು ಸ್ತುತ್ಸಾರ್ಹ. ಹಾಗೆಯೇ ಪುಸ್ತಕ ಪ್ರಕಟವಾಗಲು ಸಹಕಾರ ನೀಡಿದ ಅಕಾಡೆಮಿಯ ಅಧ್ಯಕ್ಷರು ಮತ್ತು ರಿಜಿಸ್ಟ್ರಾರ್ ಅವರಿಗೂ ಹಾಗೂ ಪುಸ್ತಕ ಸಂಪಾದನೆಯ ಜವಾಬ್ದಾರಿಯನ್ನು ನನಗೆ ವಹಿಸಿಕೊಟ್ಟು ಸಹಕರಿಸಿದ ನನ್ನ ಜೊತೆಗಿನ ಎಲ್ಲಾ ಅಕಾಡೆಮಿಯ ಸದಸ್ಯರಿಗೂ ಹಾಗೂ ಲೇಖಕರಿಗೂ ನನ್ನ ಅಭಿನಂದನೆಗಳು.

**ಎಲ್.ಶಿವಲಿಂಗಪ್ಪ**
ಸಂಪಾದಕರು

# 1 ಐತಿಹಾಸಿಕ ಹಿನ್ನೋಟ

## ಪ್ರಸ್ತಾವನೆ

ನಮ್ಮ ದೇಶದ ವಾಸ್ತುಕಲಾ ಇತಿಹಾಸದಲ್ಲಿ ಬಾದಾಮಿ ಚಾಲುಕ್ಯರ ಕಾಲದ ಸ್ಮಾರಕಗಳನ್ನು ವಿಶಿಷ್ಟ ರೀತಿಯಲ್ಲಿ ವರ್ಗೀಕರಿಸಲಾಗುತ್ತದೆ. ದಕ್ಷಿಣ ಭಾರತದಲ್ಲಿ ಮೊಟ್ಟ ಮೊದಲ ಪ್ರಯೋಗಗಳಿಗಾಗಿ ಚಾಲುಕ್ಯ ಅರಸರು ಹಿಂದೂ ಗುಹಾಲಯ ಹಾಗೂ ದೇವಾಲಯಗಳ ನಿರ್ಮಾಣಕ್ಕೆ ಕಾರಣೀಭೂತರಾಗಿದ್ದಾರೆ. ಈ ಎಲ್ಲ ಸ್ಮಾರಕಗಳು ಪಲ್ಲವ, ಪಾಂಡ್ಯ ಮುಂತಾದ ಈ ಎಲ್ಲ ಅರಸರಿಗೆ ಸ್ಫೂರ್ತಿ ನೀಡಿವೆ ಎಂದರೆ ತಪ್ಪಿಲ್ಲ. ಚಾಲುಕ್ಯ ಶಿಲ್ಪಿಗಳು ತಮ್ಮ ವಿವಿಧ ಶೈಲಿಯಲ್ಲಿ ದೇವಾಲಯ ನಿರ್ಮಾಣ ಮಾಡುವುದರೊಂದಿಗೆ ಅವುಗಳ ತಲವಿನ್ಯಾಸವನ್ನು ರೂಪಿಸುವಲ್ಲಿಯೂ ಹಲವು ಪ್ರಯೋಗಗಳನ್ನು ಮಾಡಿದ ಶ್ರೇಯಸ್ಸು ಪಡೆಯುತ್ತಾರೆ. ಇಡೀ ಭಾರತ ದೇಶದಲ್ಲಿ ವಾಸ್ತುಕಲಾ ಪ್ರಯೋಗಗಳನ್ನು ಐಹೊಳೆ, ಪಟ್ಟದಕಲ್ಲು, ಬಾದಾಮಿಗಳಲ್ಲಿ ಕಂಡು ಬರುವಂತಹ ಭಿನ್ನ ಭಿನ್ನ ಶೈಲಿ ಹಾಗೂ ವಿಭಿನ್ನ ತಲವಿನ್ಯಾಸ ಪ್ರಕಾರಗಳನ್ನು ಹೊಂದಿರುವ ದೇವಾಲಯಗಳನ್ನು ನಾವು ಮತ್ತಾವುದೇ ಪ್ರದೇಶದಲ್ಲಿ ಕಾಣಲು ಸಾಧ್ಯವಿಲ್ಲ. ದೇವಾಲಯಗಳ ತಲವಿನ್ಯಾಸ ಕುರಿತಂತೆ ಸವಿವರವಾಗಿ ಪರಿಚಯವನ್ನು ಅಧ್ಯಯನ ಮಾಡಬಯಸುವವರಿಗೆ ಸಮೃದ್ಧ ವಿಷಯ ನೀಡುವುದೇ ಈ ಸಂಪ್ರಬಂಧದ ಮೂಲ ಉದ್ದೇಶವಾಗಿದೆ. ಬಾದಾಮಿ ಚಾಲುಕ್ಯ ಅರಸರ ಕಾಲದ ವಾಸ್ತು ಪ್ರಕಾರಗಳಿರುವ ಉತ್ತರ ಕರ್ನಾಟಕದ ಬಾದಾಮಿ, ಐಹೊಳೆ, ಪಟ್ಟದಕಲ್ಲು ಸುತ್ತ ಮುತ್ತಲಿನ ಪ್ರದೇಶವೇ ಈ ಆಧ್ಯಯನಕ್ಕಾಗಿರುವ ವ್ಯಾಪ್ತಿಯಾಗಿದೆ.

### ಅ) ಇತಿಹಾಸದ ಪುಟಗಳಲ್ಲಿ ಚಾಲುಕ್ಯರ ರಾಜಕೀಯ ಹಿನ್ನೆಲೆ :

ಬಾದಾಮಿ ಚಾಲುಕ್ಯ ಅರಸರ ಕಾಲವನ್ನು ಕರ್ನಾಟಕದ ಸಮಗ್ರ ಇತಿಹಾಸದಲ್ಲಿ "ಸುವರ್ಣಯುಗ"ವೆಂದು ಡಾ. ಶಿವರಾಮ ಕಾರಂತರು ಒಂದೆಡೆ ಬಣ್ಣಿಸುತ್ತಾರೆ. ನೋಡಲು ಬರುವ ಕಲಾರಸಿಕರ ಕಣ್ಮನಗಳಿಗೆ ಸಂಭ್ರಮ, ಸುಖ ನೀಡುವ ಚಾಲುಕ್ಯರ ಕಲಾಸ್ಮಾರಕಗಳ ವೈಭವವು ಅವರ್ಣನೀಯ. ಕದಂಬರ ನಂತರ ಪ್ರವರ್ಧಮಾನಕ್ಕೆ ಬಂದ ಚಾಲುಕ್ಯರು ಮಹತ್ತರ ಸಾಮ್ರಾಟರಾಗಿ ಮೆರೆದದ್ದು, ಪೃಥ್ವಿ ವಲ್ಲಭರಾಗಿ ಕೀರ್ತಿ ಧ್ವಜವೆತ್ತಿರುವುದು ಅಭಿಮಾನದ ಸಂಗತಿಯಾಗಿದೆ.

ಶಾಸನಗಳಲ್ಲಿ ಚಾಲುಕ್ಯ ಅರಸರನ್ನು ಚುಲುಕಿ, ಚಳಿಕ, ಚಲ್ಕ ಹಾಗೂ ಚಾಳುಕ್ಯರೆಂದು ಬಗೆ ಬಗೆಯಲ್ಲಿ ಕರೆಯಲಾಗಿದೆ. ಕೆಲವು ಇತಿಹಾಸ ತಜ್ಞರ ಆಭಿಪ್ರಾಯದಂತೆ, ಚಾಲುಕ್ಯ ವಂಶದ ಮೂಲ ಪುರುಷನ ಬಗೆಗೆ ಸ್ವಾರಸ್ಯಪೂರ್ಣವಾದ ಸಂಗತಿಗಳು ನಮಗೆ ದೊರೆಯುತ್ತವೆ. ಅವುಗಳಂತೆ ಒಂದು ಶಾಸನದಲ್ಲಿ ಹಾರಿತ ಪಂಚಶಿಖಿಯೆಂಬ ಮುನಿಯು ದೇವರಿಗೆ ಆರ್ಘ್ಯ ಕೊಡುವಾಗ ಅವನ ಚುಲಕದಿಂದ (ಬೊಗಸೆ) ಚಾಲುಕ್ಯ ಮೂಲ ಪುರುಷನು ಜನಿಸಿದನೆಂದು ತಿಳಿಸಿದರೆ, ಇನ್ನೊಂದರಲ್ಲಿ (ಬಿಲ್ಹಣ ಕವಿಯ

ವಿಕ್ರಮಾಂಕದೇವ ಚರಿತೆಯಂತೆ) ಚಾಲುಕ್ಯ ಮೂಲ ಪುರುಷನ ಸೃಷ್ಟಿಯು ಬ್ರಹ್ಮದೇವರಿಂದಾಯಿತೆಂದು ತಿಳಿಯುತ್ತದೆ. ಮಾನವ್ಯ ಗೋತ್ರದ ಈ ಚಾಲುಕ್ಯರಿಗೆ ವಿಷ್ಣು ಕುಲದೇವತೆಯಾಗಿದ್ದ ಬಗೆಗೂ ಸಹ ಮಾಹಿತಿ ದೊರೆಯುತ್ತದೆ. ಚಾಲುಕ್ಯ ಅರಸರ ವಂಶಾವಳಿಯ ಕುರಿತು ಮಹಾಕೂಟದ ಸ್ತಂಭಶಾಸನ ಹಾಗೂ ಐಹೊಳೆಯ ಮೇಗುತಿ ಜಿನಾಲಯದಲ್ಲಿರುವ ಪ್ರಶಸ್ತಿ ಶಾಸನಗಳು ಮಹತ್ವದ ವಿಷಯ ಸಾಮಗ್ರಿಯನ್ನೊದಗಿಸುತ್ತವೆ. ಇವುಗಳ ಆಧಾರದಿಂದ ಜಯಸಿಂಹನೆಂಬುವನೇ ಚಾಲುಕ್ಯ ಅರಸೊತ್ತಿಗೆಯ ಮೂಲ ಪುರುಷನು. ಕದಂಬರ ಮಾಂಡಲೀಕರಾಗಿದ್ದ ಚಾಲುಕ್ಯರು ತಮ್ಮ ಭುಜಬಲ ಸಾಮರ್ಥ್ಯದಿಂದ ಭವ್ಯ ಸಾಮ್ರಾಜ್ಯವನ್ನು ಕಟ್ಟಿ ಮೆರೆದದ್ದು ಕರ್ನಾಟಕದ ಇತಿಹಾಸದಲ್ಲಿ ಚರಿತ್ರಾರ್ಹವಾದ ವಿಷಯ. ಚಾಲುಕ್ಯ ರಾಜವಂಶದಲ್ಲಿ ಮೊದಲನೆಯ ಪುಲಿಕೇಶಿ (ಪೊಲೆಕೇಶಿ) ಸತ್ಯಾಶ್ರಯನೆಂಬ ಬಿರುದನ್ನು ಪಡೆದುಕೊಂಡು ಅಶ್ವಮೇಧಯಾಗ ಮಾಡಿ ವಿಜಯೋತ್ಸವವನ್ನಾಚರಿಸಿದರೆ, ಇಮ್ಮಡಿ ಪೊಲೆಕೇಶಿಯು ಕನೋಜದ ಹರ್ಷವರ್ಧನನನ್ನು ಪರಾಜಿತಗೊಳಿಸಿ "ದಕ್ಷಿಣಾಪಥೇಶ್ವರ"ನೆಂಬ ಬಿರುದು ಪಡೆದು ಚಾಲುಕ್ಯ ವಂಶದ ಘನತೆ ಗೌರವಗಳನ್ನು ಹೆಚ್ಚಿಸಿದ್ದು ಒಂದು ಹೆಗ್ಗಳಿಕೆ.

ಕರ್ನಾಟಕದಲ್ಲಿ ಕ್ರಿ.ಶ. 6ನೇಯ ಶತಮಾನದ ಮಧ್ಯಭಾಗದಿಂದ ಮೊದಲುಗೊಂಡು ಸುಮಾರು ಎರಡು ಶತಮಾನಗಳಷ್ಟು ಕಾಲ (ಕ್ರಿ.ಶ. 543 – 757) ಚಾಲುಕ್ಯರು ಆಡಳಿತ ಮಾಡಿ ತಮ್ಮ ವಂಶದ ಕುರುಹನ್ನು ಈ ನಾಡಿನಲ್ಲಿ ಉಳಿಸಿ ಹೋಗಿದ್ದಾರೆ. ಈ ರಾಜ ವಂಶದಲ್ಲಿ ಒಂಭತ್ತು ಅರಸರು, ಮಹಾಜನರು, ವರ್ತಕರು, ಮೊದಲಾದವರ ನೆರವಿನಿಂದ ಅನೇಕ ದೇವಾಲಯಗಳನ್ನು ಸೃಷ್ಟಿಸುವಂತಾಯಿತು. ದೇವಾಲಯಗಳ ನಿರ್ಮಾಣದ ಜತೆಯಲ್ಲಿಯೇ ಸುಂದರ ಶಿಲ್ಪಗಳೂ ಮೂಡಿಬಂದವು. ವಾಸ್ತು ನಿರ್ಮಿತಿಗಳು ವಿಕಾಸಗೊಂಡಂತೆ ಅವುಗಳ ಅಲಂಕರಣವಾಗಿದ್ದ ಶಿಲ್ಪಗಳೂ ವೈವಿಧ್ಯಮಯವಾಗಿ ಕಾಣಿಸಿಕೊಂಡವು. ಇದು ಶಿಲ್ಪಕಲೆಯ ವಿಕಾಸಕ್ಕೆ ಎಡೆ ಮಾಡಿಕೊಟ್ಟಿತು. (ಡಾ. ಶೀಲಾಕಾಂತ ಪತ್ತಾರ, ಬಾದಾಮಿ ಚಾಲುಕ್ಯ ಶಿಲ್ಪಕಲೆ ಪು. 11–12).

ಕರ್ನಾಟಕದಲ್ಲಿ ಶಿಲ್ಪಕಲೆಯ ಉಗಮವಾದದ್ದು ಕದಂಬ ಅರಸರ ಕಾಲದಲ್ಲಿ. ಆಗ ಮೊಳಕೆಗೊಂಡ ಈ ಕಲಾಸಸಿಯು ಹೆಮ್ಮರವಾಗಿ ಬೆಳೆದದ್ದು ಚಾಲುಕ್ಯರ ಕಾಲದಲ್ಲಿ. ಕಲಾಪ್ರೇಮಿಗಳಾಗಿದ್ದ ಚಾಲುಕ್ಯ ಅರಸು, ಅರಸಿಯರೊಂದಿಗೆ ಆ ಕಾಲದಲ್ಲಿನ ವರ್ತಕರು, ಅಧಿಕಾರಿಗಳು, ನರ್ತಕಿಯರು, ಜನಸಾಮಾನ್ಯರೂ ಸಹ ಕಲಾನಿರ್ಮಾಣಕ್ಕಾಗಿ ಪ್ರೇರಿತರಾಗಿ ಧನಸಹಾಯ ಮಾಡಿದ್ದನ್ನು ನೂರಾರು ಶಾಸನಗಳು ತಿಳಿಯಪಡಿಸುತ್ತವೆ.


ಚಾಲುಕ್ಯ ರಾಜ್ಯಲಾಂಛನ

ಚಾಲುಕ್ಯ ಅರಸರ ರಾಜಲಾಂಛನ 'ವರಾಹ'. ವೈಷ್ಣವ ಮತದ ಇವರು ಪರಮ ಭಾಗವತರೆಂದೂ ಕರೆಸಿಕೊಂಡಿದ್ದಾರೆ. 1ನೇಯ ವಿಕ್ರಮಾದಿತ್ಯನು 'ಶಿವಮಂಡಲ' ದೀಕ್ಷೆ ಪಡೆದ ನಂತರದ ಎಲ್ಲಾ ಚಾಲುಕ್ಯ ಆಧಿಪತಿಗಳು ಶೈವಧರ್ಮೀಯರಾದರು. ಈ ಕಾರಣಕ್ಕಾಗಿಯೇ ಹೆಚ್ಚಿನ ಸಂಖ್ಯೆಯಲ್ಲಿ ಶೈವ ದೇವಾಲಯಗಳು ನಿರ್ಮಾಣಗೊಂಡವು. ಚಾಲುಕ್ಯರು ಕಾರ್ತಿಕೇಯನನ್ನು ಸ್ಮರಿಸಿದ್ದಾರೆ. ಸಪ್ತ ಮಾತೃಕೆಯನ್ನು ಆರಾಧಿಸಿದ್ದಾರೆ. ಸೂರ್ಯದೇವನನ್ನು ಗೌರವಿಸಿದ್ದಾರೆ. ಚಾಲುಕ್ಯರಲ್ಲಿ ಧಾರ್ಮಿಕ ವೈಶಾಲ್ಯತೆಗೆ ಸಾಟಿಯೇ

ಇರಲಿಲ್ಲ. ಅವರು ಜೈನಧರ್ಮ ಪ್ರೋತ್ಸಾಹಿಸಿ ತಮ್ಮ ಸರ್ವಧರ್ಮ ಸಮನ್ವಯತೆಯನ್ನು ಮೆರೆಸಿದ್ದು ಕಂಡು ಬರುತ್ತದೆ.

**ಚಾಲುಕ್ಯರ ವಂಶಾವಳಿ :**

ಚಾಲುಕ್ಯ ವಂಶದ ಮೂಲ ಪುರುಷ ಜಯಸಿಂಹ (ಕ್ರಿ,ಶ. 500–520) ಆಳ್ವಿಕೆ ಮಾಡಿದ ನಂತರ ಇವನ ಮಗ ರಣರಾಗ (ಕ್ರಿ.ಶ. 520–540)ನು ತನ್ನ ರಾಜ್ಯಾಡಳಿತವನ್ನು ಕದಂಬರ ಮಾಂಡಲೀಕನಾಗಿ ಐಹೊಳೆ(ಆರ್ಯಪುರ)ಯಲ್ಲಿ ಆಡಳಿತ ನಡೆಸಿದನೆಂದು ತಿಳಿಯುತ್ತದೆ. ಚಾಲುಕ್ಯ ಅರಸರ ಕಾಲದ ಮೊದಲನೆಯ ದೊರೆಯೆಂದರೆ ರಣರಾಗನ ಮಗನಾದ ಪೊಲೆಕೇಶಿ. ಇವನು ಕ್ರಿ.ಶ. 540ರಲ್ಲಿ ಬಾದಾಮಿ(ವಾತಾಪಿ)ಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯಾಡಳಿತ ನಡೆಸಿದ್ದಾಗಿ ಅಶ್ವಮೇಧ ಮಹಾಯಾಗ ಮಾಡಿದ್ದಾಗಿಯೂ ತಿಳಿಯುತ್ತದೆ. ಬಾದಾಮಿಯಲ್ಲಿ ಕ್ರಿ.ಶ. 543ರಲ್ಲಿ ಪೊಲೆಕೇಶಿ ಕಟ್ಟಿಸಿದ ಕೋಟೆಯು ದಕ್ಷಿಣ ಭಾರತದ ರಕ್ಷಣಾ ವಾಸ್ತುಗಳಲ್ಲೇ ಮೊದಲಿನದಾಗಿದೆ. ಇದೆ ಕಾಲದಲ್ಲಿ ಬಾದಾಮಿಯಲ್ಲಿ ನಿರ್ಮಿಸಿದ ಅಗಸ್ತ್ಯತೀರ್ಥವು (ಭೂತನಾಥ ಕೆರೆ) ಇಂದಿಗೂ ಆ ನಗರಕ್ಕಿರುವ ಜೀವಜಲ.

ಮೊದಲನೆಯ ಪೊಲೆಕೇಶಿಯ ಪುತ್ರರಾದ ಕೀರ್ತಿವರ್ಮ ಹಾಗೂ ಮಂಗಲೀಶರು ಚಾಲುಕ್ಯ ರಾಜ್ಯ ವಿಸ್ತಾರಗೈದ ಮಹಾಮೇಧಾವಿಗಳು. ಇವರಲ್ಲಿ ಕೀರ್ತಿವರ್ಮ (ಕ್ರಿ.ಶ.566 ರಿಂದ 599ರವರೆಗೆ)ನು ಸಾಮ್ರಾಜ್ಯದ ಘನತೆ ಹೆಚ್ಚಿಸಿದ್ದಲ್ಲದೇ ವಾತಾಪಿಯನ್ನು ವಾಸ್ತು ಮತ್ತು ಶಿಲ್ಪಗಳಿಂದ ಅಲಂಕರಿಸಿದನೆಂಬುದಾಗಿ ತಿಳಿಯುತ್ತದೆ. ಒಂದನೆಯ ಕೀರ್ತಿವರ್ಮನು ಗತಿಸಿದಾಗ ಅವನ ಪುತ್ರ ಇಮ್ಮಡಿ ಪೊಲೆಕೇಶಿಯು ಇನ್ನೂ ಚಿಕ್ಕವನಾಗಿದ್ದುದರಿಂದ ಕೀರ್ತಿವರ್ಮನ ಸಹೋದರ ಮಂಗಲೀಶನು ಚಾಲುಕ್ಯ ಸಾಮ್ರಾಜ್ಯದ ಆಡಳಿತದ ಭಾರವನ್ನು ಹೊತ್ತು ರಾಜ್ಯ ವಿಸ್ತಾರವನ್ನು ಮಾಡಿದ್ದಾಗಿ ತಿಳಿಯುತ್ತದೆ. ಕಳಚೂರಿ ಅರಸನನ್ನು ಸೋಲಿಸಿ ಅವನ ಸಂಪತ್ತನ್ನು ಮಹಾಕೂಟದ ಮುಕುಟೇಶ್ವರನಿಗೆ ಅರ್ಪಿಸಿ ಅಲ್ಲಿ ಧರ್ಮಸ್ತಂಭವನ್ನು ನಿಲ್ಲಿಸಿದ್ದಾಗಿ ತಿಳಿಯುತ್ತದೆ. ಅಣ್ಣ ಕೀರ್ತಿವರ್ಮನಿಗೆ ಪುಣ್ಯ ಲಭಿಸಲೆಂದು ಬಾದಾಮಿಯ ಅದ್ಭುತ ಗುಹಾಲಯವನ್ನು ನಿರ್ಮಿಸಿದ್ದಾಗಿ ಅಲ್ಲಿಯ ಶಾಸನ (ಕ್ರಿ.ಶ. 578) ತಿಳಿಸುತ್ತದೆ. ಅಣ್ಣನ ಮಗ ಇಮ್ಮಡಿ ಪೊಲೆಕೇಶಿಯು ವಯಸ್ಸಿಗೆ ಬಂದರೂ ಸಿಂಹಾಸನ ಬಿಟ್ಟು ಕೊಡದ ಕಾರಣ ತರುಣ ಯುವರಾಜ ಪೊಲೆಕೇಶಿಯು ಸೈನ್ಯವನ್ನು ಸಂಘಟಿಸಿ ದಂಗೆಯೆದ್ದು ಚಿಕ್ಕಪ್ಪನಾದ ಮಂಗಲೀಶನನ್ನು ಕೊಂದು ಸಿಂಹಾಸನವನ್ನು (ಕ್ರಿ.ಶ. 610) ಏರಿದ್ದಾನೆ.

ಐಹೊಳೆಯ ಆಗ್ನೇಯ ದಿಕ್ಕಿಗೆ ಪುಟ್ಟ ಬೆಟ್ಟದ ಮೇಲೆ ನಿರ್ಮಾಣಗೊಂಡ ಮೇಗುತಿ ಜಿನಾಲಯದಲ್ಲಿನ ಪ್ರಶಸ್ತಿ ಶಾಸನದಲ್ಲಿ ಇಮ್ಮಡಿ ಪೊಲೆಕೇಶಿಯ ಪರಾಕ್ರಮ, ದಿಗ್ವಿಜಯಗಳನ್ನು ವಿವರವಾಗಿ ಬಣ್ಣಿಸಲಾಗಿದೆ. ಚಾಲುಕ್ಯ ಪೊಲೆಕೇಶಿಯ ಆಸ್ಥಾನ ಕವಿ ರವಿಕೀರ್ತಿ ವಿರಚಿತ ಸಂಸ್ಕೃತ ಕಾವ್ಯಶೈಲಿಯಲ್ಲಿಯ ಈ ಕನ್ನಡ ಶಾಸನದಲ್ಲಿ ಚಾಲುಕ್ಯರ ರಾಜ್ಯವಿಸ್ತಾರ, ಘನತೆ ಗೌರವಗಳನ್ನು ಕೊಂಡಾಡಲಾಗಿದೆ. ಬಾದಾಮಿಯ ಇಮ್ಮಡಿ ಪೊಲೆಕೇಶಿಯು ತನ್ನ ಪರಾಕ್ರಮಗಳಿಂದ ಉತ್ತರಾಪಥೇಶ್ವರನಾಗಿದ್ದ ಹರ್ಷವರ್ಧನನನ್ನು, ಪಲ್ಲವರಾಜ ಮಹೇಂದ್ರವರ್ಮನನ್ನೂ ಸೋಲಿಸಿ 99000 ಗ್ರಾಮಗಳನ್ನೊಳಗೊಂಡ "ಮಹಾರಾಷ್ಟ್ರಕತ್ರಯ" ಎಂದು ಕರೆಯಲ್ಪಟ್ಟ ವಿಶಾಲ ಸಾಮ್ರಾಜ್ಯದ ಮಹಾಸಾಮ್ರಾಟನಾಗಿ ಕ್ರಿ.ಶ. 642ರವರೆಗೆ ಮೆರೆದಿದ್ದಾನೆ.

ಕಲಾ ಪ್ರೇಮಿಯಾಗಿದ್ದ ಪೊಲೆಕೇಶಿಯು ತನ್ನ ನಾಡಿನಲ್ಲಿ ಅನೇಕ ದೇವಾಲಯಗಳ ರಚನೆಗೆ ಪ್ರೋತ್ಸಾಹಿಸಿದ್ದಾನೆ. ಇವನ ಆಸ್ಥಾನದ ಕವಿ ಹಾಗೂ ಸೇನಾಧಿಪತಿಯಾಗಿದ್ದ ರವಿಕೀರ್ತಿ ಐಹೊಳೆಯಲ್ಲಿ ಜಿನಾಲಯವನ್ನು ಕ್ರಿ.ಶ. 634ರಲ್ಲಿ ನಿರ್ಮಿಸಿ ವಾಸ್ತುಕಲೆಯ ವಿಶಿಷ್ಟ ಕಲಾಕೃತಿಯನ್ನು ಕಾಣಿಕೆಯಾಗಿ

ನೀಡಿದ್ದಾನೆ. ಈ ಪೊಲೆಕೇಶಿಯ ಕಾಲದಲ್ಲಿಯೇ ಚೀನಾದೇಶದ ಯಾತ್ರಿಕ ಹುಯೆನ್‌ತ್ಸಾಂಗನು ಚಾಲುಕ್ಯ ನಾಡಿಗೆ ಭೇಟಿ ನೀಡಿ ತನ್ನ ಪ್ರವಾಸಕಥನದಲ್ಲಿ ಈ ಪ್ರದೇಶವನ್ನು ಮನಸಾರೆ ಬಣ್ಣಿಸಿದ್ದಾನೆ.




ಬಾದಾಮಿ ಚಾಲುಕ್ಯರ ಸಾಮ್ರಾಜ್ಯ

ಪಲ್ಲವ ಅರಸ ನರಸಿಂಹವರ್ಮನು ತನ್ನ ತಂದೆಗೆ ಆದ ಅವಮಾನದ ಸೇಡನ್ನು ತೀರಿಸಲೆಂದು ಕ್ರಿ.ಶ. 642ರಲ್ಲಿ ಯುದ್ಧಕ್ಕಿಳಿದಾಗ ಅದರಲ್ಲಿ ಪೊಲೆಕೇಶಿ ಪರಾಭವಗೊಳ್ಳುತ್ತಾನೆ. ಪಲ್ಲವ ಸೈನ್ಯವು ವಾತಾಪಿಯನ್ನು ನುಗ್ಗಿ ನಾಶ ಮಾಡುತ್ತದೆ. ಈ ಸಂದರ್ಭದಲ್ಲಿ ಬಾದಾಮಿಯು 13 ವರ್ಷಗಳ ಕಾಲ ಪಲ್ಲವ ದೊರೆಗಳ ಅಧೀನವಾಗುತ್ತದೆ. ಚಾಲುಕ್ಯರ ಆಡಳಿತಕ್ಕೆ ಗ್ರಹಣ ಹಿಡಿಯುತ್ತದೆ. ಕ್ರಿ.ಶ. 655ರಲ್ಲಿ ಇಮ್ಮಡಿಪುಲಕೇಶಿಯ ಪುತ್ರ ಒಂದನೆಯ ವಿಕ್ರಮಾದಿತ್ಯನ ಶೌರ್ಯದಿಂದಾಗಿ ವಾತಾಪಿ ಮತ್ತೆ ಚಾಲುಕ್ಯರ ಕೈವಶವಾಗುತ್ತದೆ. ಪಲ್ಲವರನ್ನು ಸದೆಬಡೆದು ಚಾಲುಕ್ಯಸಾಮ್ರಾಜ್ಯಕ್ಕೆ ಜೀವಕಳೆಯನ್ನು ತರುತ್ತಾನೆ. 1ನೆಯ ವಿಕ್ರಮಾದಿತ್ಯನು ತನ್ನ ಆಡಳಿತಾವಧಿಯಲ್ಲಿ ಧಾರ್ಮಿಕ ಇತಿಹಾಸದಲ್ಲಿ ಚರಿತ್ರಾರ್ಹವಾದ ಬದಲಾವಣೆ ತರುತ್ತಾನೆ. 'ಪರಮ ಭಾಗವತ'ರೆನಿಸಿದ್ದ ಚಾಲುಕ್ಯರು ಈತನ ಕಾಲದಲ್ಲಿ ಶೈವರಾಗಿ ಮತಾಂತರ ಹೊಂದಿದ್ದಾಗಿ ತಿಳಿಯುತ್ತದೆ. ವಿಕ್ರಮಾದಿತ್ಯನ ಆಳ್ವಿಕೆಯ ಐದನೆಯ ವರ್ಷದಲ್ಲಿ (ಕ್ರಿ.ಶ. 659) ಆಗಮ ವಿಧಿಗೆ ಅನುಗುಣವಾಗಿ ಸುದರ್ಶನಾಚಾರ್ಯನಿಂದ 'ಶಿವಮಂಡಲ ದೀಕ್ಷೆ' ಪಡೆದು ಪರಮ ಮಾಹೇಶ್ವರ ಶೈವನಾದನೆಂಬ ದೃಷ್ಟಾಂತವಿದೆ. ಈತನ ಕಾಲದಲ್ಲಿಯೇ ಪಾಶುಪತ ಮತ ಪ್ರಾಬಲ್ಯ ಪಡೆಯಿತೆಂಬುದಾಗಿ ತಿಳಿಯುತ್ತದೆ. (ಪ್ರೊ. ಶ್ರೀನಿವಾಸ ಪಾಡಿಗಾರ – ಬಾದಾಮಿಯ ಚಾಲುಕ್ಯರ ಶಾಸನಗಳು, ವಾಸ್ತು ಮತ್ತು ಶಿಲ್ಪಕಲೆ ಪುಟ – 4) ಇವನ ಕಾಲದಲ್ಲಿ ಹಲವಾರು ಶೈವ ಶಿಲಾಸ್ಮಾರಕಗಳು ಈ ಪ್ರದೇಶದಲ್ಲಿ ನಿರ್ಮಾಣಗೊಂಡವು.

ವಿಕ್ರಮಾದಿತ್ಯನ ಅವಸಾನದ ನಂತರದಲ್ಲಿ ಇವನ ಪುತ್ರ ವಿನಯಾದಿತ್ಯನು ಸಿಂಹಾಸನವನ್ನೇರಿದಾಗ ಚಾಲುಕ್ಯ ಅರಸೊತ್ತಿಗೆಯ ಕಲಾವೈಭವ ಪುನಃ ಮೆರೆಯುತ್ತದೆ. (ಕ್ರಿ.ಶ. 681–696) ವಿನಯಾದಿತ್ಯನ ಕಾಲದಲ್ಲಿ ಆಂಧ್ರಪ್ರದೇಶದ ಮೆಹಬೂಬನಗರ ಜಿಲ್ಲೆಯ ಆಲಂಪುರದಲ್ಲಿ ಸ್ವರ್ಗ ಬ್ರಹ್ಮದೇವಾಲಯದ ಜತೆಗೆ ಅಪರೂಪದ ಶಿಲಾಸ್ಮಾರಕಗಳು ಕಲಾಶ್ರೀಮಂತಿಕೆಯ ಆಗರವಾಗಿ ನಿರ್ಮಾಣಗೊಂಡಿವೆ. ಇಟಗಿಯ ದೇವಾಲಯದಲ್ಲಿ ವ್ಯಕ್ತಪಡಿಸಿದ ಕಲಾಕೌಶಲ್ಯವು ಬಾದಾಮಿ, ಐಹೊಳೆ, ಪಟ್ಟದಕಲ್ಲುಗಳ ಹಲವು ಸ್ಮಾರಕಗಳು ಉಚ್ಛ್ರಾಯ ಸ್ಥಿತಿಗೇರಿದ್ದು ತಿಳಿಯುತ್ತದೆ. ಅವನ ಆಲಂಪುರ ದೇವಾಲಯದ ಪ್ರಶಸ್ತಿ ಶಾಸನ ತಿಳಿಸುವಂತೆ ಶೈವ, ವೈಷ್ಣವ, ಜೈನ, ಬೌದ್ಧ ದೇವಾಲಯಗಳ ನಿರ್ಮಾಣಕ್ಕೆ ಪ್ರೇರಣೆ ದೊರೆತದ್ದಾಗಿ ತಿಳಿಯುತ್ತದೆ.

ಚಾಲುಕ್ಯ ವಿನಯಾದಿತ್ಯನ ಮಗನಾದ ವಿಜಯಾದಿತ್ಯನು ಕ್ರಿ.ಶ. 697ರಲ್ಲಿ ಅಧಿಕಾರ ವಹಿಸಿಕೊಂಡು 733ರವರೆಗೆ ಸುದೀರ್ಘವಾದ ಆಡಳಿತ ನಡೆಸಿದ್ದಾಗಿ ತಿಳಿಯುತ್ತದೆ. ವಿಜಯಾದಿತ್ಯನ ತಾಯಿಯಾದ ವಿನಯವತಿ ಕ್ರಿ.ಶ. 699ರಲ್ಲಿ ಬಾದಾಮಿಯಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರಿಗಾಗಿ ನಿರ್ಮಿಸಿದ ತ್ರಿಕೂಟಾಚಲವು ದಕ್ಷಿಣ ಭಾರತದಲ್ಲಿಯೇ ಕಟ್ಟಿದ ಪ್ರಪ್ರಥಮ ತ್ರಿಕೂಟಾಚಲ ದೇವಾಲಯವೆಂಬುದಾಗಿ ತಿಳಿದು ಬರುತ್ತದೆ. ಕಿಸುವೊಳಲ್(ಪಟ್ಟದಕಲ್ಲು)ದಲ್ಲಿ ವಿಜಯಾದಿತ್ಯನಿಂದ ನಿರ್ಮಿಸಲ್ಪಟ್ಟ ವಿಜಯೇಶ್ವರ ದೇವಾಲಯ (ಸಂಗಮೇಶ್ವರ)ವು ಒಂದು ಸುಂದರ ಕಲಾ ಸ್ಮಾರಕವಾಗಿದೆ. ಈತನ ಸರ್ವಧರ್ಮ ಸಮನ್ವಯ ಭಾವವನ್ನು ಶಾಸನದಲ್ಲಿ ಬಣ್ಣಿಸಲಾಗಿದೆ. ವಿಜಯಾದಿತ್ಯನ ಪ್ರಾಣವಲ್ಲಭೆಯಾಗಿದ್ದ ವಿನಾಪೋಟಿಯು ಮಹಾಕೂಟೇಶ್ವರನಿಗೆ ರತ್ನಪೀಠ, ರಜತಛತ್ರದಿಂದ ಭೂಮಿ ದಾನ ಮಾಡಿದಳೆಂದೂ ಈ ಚಾಲುಕ್ಯ ಅರಸನು ತನ್ನ ಆಡಳಿತದಲ್ಲಿ ನೃತ್ಯ, ಸಂಗೀತ ಕಲಾವಿದರಿಗೆ ಮಾನ ಸನ್ಮಾನಗೈದು ಪ್ರೋತ್ಸಾಹಿಸಿದ್ದಾಗಿಯೂ ಅಲ್ಲಿನ ಶಾಸನವೊಂದು ದಾಖಲೆಯನ್ನೊದಗಿಸುತ್ತದೆ.

ವಿಜಯಾದಿತ್ಯನ ಕಾಲದ ನಂತರದಲ್ಲಿ ಈತನ ಪುತ್ರನಾದ ಇಮ್ಮಡಿ ವಿಕ್ರಮಾದಿತ್ಯನು ಕ್ರಿ.ಶ. 733ರಲ್ಲಿ ಅಧಿಕಾರ ಸೂತ್ರವನ್ನು ಪಡೆದುಕೊಂಡು ಕ್ರಿ.ಶ. 744ರವರೆಗೆ ರಾಜ್ಯವಾಳಿದ್ದಾಗಿ ತಿಳಿಯುತ್ತದೆ. ಶ್ರೇಷ್ಠ ಕಲಾರಾಧಕನಾಗಿದ್ದ ಇಮ್ಮಡಿ ವಿಕ್ರಮಾದಿತ್ಯನು ತನ್ನ ಅಧಿಕಾರಾವಧಿಯಲ್ಲಿ ಕಲೆಯನ್ನೂ, ಕಲಾವಿದರನ್ನು ತುಂಬಾ ಗೌರವಿಸಿದ್ದು ಕಂಡು ಬರುತ್ತದೆ. ಪಲ್ಲವರ ರಾಜಧಾನಿಯನ್ನೂ ವಶಪಡಿಸಿಕೊಂಡಾಗ ಕಾಂಚಿ ನಗರದ ರಾಜಸಿಂಹೇಶ್ವರ ದೇವಾಲಯದ ಕಲಾವೈಭವವನ್ನು ಕಂಡು ಮೋಹಿತನಾಗಿ ಆ ದೇವಾಲಯದ ನಿರ್ವಹಣೆಗೆ ಯುದ್ಧ ಸಂಪತ್ತನ್ನೆಲ್ಲ ಬಿಟ್ಟುಕೊಟ್ಟ ಉದಾಹರಣೆಯಿದೆ. ವಿಕ್ರಮಾದಿತ್ಯನ ಔದಾರ್ಯ, ಶಿಲ್ಪಕಲೆಯ ಬಗೆಗಿನ ಗೌರವವು ಇವನ ವ್ಯಕ್ತಿತ್ವಕ್ಕೆ ವಿಶೇಷ ಹಿರಿಮೆಯನ್ನೊದಗಿಸಿದೆ. ಈತನಿಗೆ ತಕ್ಕ ಮಡದಿಯರಾಗಿದ್ದ ಲೋಕಮಹಾದೇವಿ ಮತ್ತು ತ್ರೈಲೋಕ್ಯಮಹಾದೇವಿಯರು ತಮ್ಮ ಪತಿ ಮೂರು ಸಲ ಕಂಚಿಯನ್ನು ಗೆದ್ದ ಸವಿನೆನಪಿಗಾಗಿ ಪಟ್ಟದಕಲ್ಲಿನಲ್ಲಿ ಲೋಕೇಶ್ವರ (ವಿರೂಪಾಕ್ಷ ದೇವಾಲಯ) ಮತ್ತು ತ್ರೈಲೋಕೇಶ್ವರ (ಮಲ್ಲಿಕಾರ್ಜುನ ದೇವಾಲಯ) ದೇವಾಲಯಗಳನ್ನು ಕಟ್ಟಿಸಿ ತಮ್ಮ ಕಲಾಭಿಮಾನವನ್ನು ಮೆರೆಸಿದ್ದಾರೆ. ಈ ದೇವಾಲಯಗಳ ಸ್ಥಪತಿಗಳಾದ ಸರ್ವಸಿದ್ಧಿ ಆಚಾರಿ ಮತ್ತು ಗುಂಡ ಅನಿವಾರಿತಾಚಾರಿಗೆ "ಪೆರ್ಜೆರೆಪು" ಎಂಬ ಹಿರಿದಾದ ಪದವಿ ಗೌರವ ನೀಡಿ ಗೌರವಿಸಿದ್ದಾರೆ. ದ್ರಾವಿಡ ಶಿಖರ ವಿನ್ಯಾಸ ಹೊಂದಿದ ಈ ದೇವಾಲಯಗಳ ಜತೆಗೆ ರೇಖಾನಾಗರ ಶಿಖರ ವಿನ್ಯಾಸ ಶೈಲಿಯ ಹಲವು ದೇವಾಲಯಗಳ ಉಗಮವು ಇಮ್ಮಡಿ ವಿಕ್ರಮಾದಿತ್ಯನ ಕಾಲದಲ್ಲಾಗಿದೆ. ಪಟ್ಟದಕಲ್ಲಿನ ಪಾಪನಾಥ ದೇಗುಲ, ಐಹೊಳೆಯ ದುರ್ಗಾ ದೇವಾಲಯಗಳ ನಿರ್ಮಾಣವು ಇದೇ ಕಾಲದಲ್ಲಾದ ಕಾರ್ಯಗಳು. ದಾಕ್ಷಿಣಾತ್ಯ ಮತ್ತು ಔತ್ತರೇಯ ದೇಗುಲ ವಾಸ್ತು ಲಕ್ಷಣಗಳ ಯಶಸ್ವೀ ಪ್ರಯೋಗಗಳೂ ಈ ಕಾಲದಲ್ಲಿ ನಡೆದವು. ಇಂದು ಪಟ್ಟದಕಲ್ಲು ವಿಶ್ವಪರಂಪರೆಯ ತಾಣವಾಗಲು ಇವೆಲ್ಲ ಕಾರಣವಾದವು.

ಇಮ್ಮಡಿ ವಿಕ್ರಮಾದಿತ್ಯನ ತರುವಾಯ ಅವನ ಪುತ್ರ ಇಮ್ಮಡಿ ಕೀರ್ತಿವರ್ಮನು ಕ್ರಿ.ಶ. 744ರಲ್ಲಿ ಚಾಲುಕ್ಯ ಅಧಿಪತಿಯಾಗಿ ಸಿಂಹಾಸವನ್ನೇರಿ ಆಡಳಿತ ನಡೆಸಿದನು. ಪಲ್ಲವರನ್ನು ಸೋಲಿಸಿದ ಈ ಅರಸನು ರಾಷ್ಟ್ರಕೂಟ ದಂತಿದುರ್ಗನಿಂದ ಪರಾಜಿತನಾಗಿ ಚಾಲುಕ್ಯ ವಂಶದ ಕೊನೆಯ ಅರಸನಾಗಿದ್ದಾನೆ. ಮೊದಲನೆಯ ಪೊಲೆಕೇಶಿಯ ಪರಾಕ್ರಮದಿಂದ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿದ ಚಾಲುಕ್ಯ ದೊರೆಗಳು ರಾಜ್ಯವನ್ನು ಹಂತ ಹಂತವಾಗಿ ಬೆಳೆಸಿ ವಿಸ್ತರಿಸಿಕೊಂಡು ವಿಶಾಲ ಸಾಮ್ರಾಜ್ಯವನ್ನೇ ನಿರ್ಮಿಸಿ ಶಿಲ್ಪಕಲಾ

ಕ್ಷೇತ್ರಕ್ಕೆ ಅಮೋಘ ಕೊಡುಗೆ ನೀಡಿದ್ದ ಚಾಲುಕ್ಯ ದೊರೆಗಳು ನಮ್ಮ ಭಾರತೀಯ ಐತಿಹಾಸಿಕ ಪುಟಗಳಲ್ಲಿ ಅಜರಾಮರವಾಗಿದ್ದಾರೆಂಬುದನ್ನು ನಾವು ಯಾವತ್ತು ಮರೆಯುವಂತಿಲ್ಲ.

**ಚಾಲುಕ್ಯರ ಸಾಂಸ್ಕೃತಿಕ ವೈಭವ :**

ಬಾದಾಮಿ ಚಾಲುಕ್ಯ ಅರಸರು ತಮ್ಮ ಇನ್ನೂರು ವರ್ಷಕ್ಕೂ ಮೀರಿದ ಆಡಳಿತಾವಧಿಯಲ್ಲಿ ಭಾರತೀಯ ವಾಸ್ತುಕಲಾ ಕ್ಷೇತ್ರಕ್ಕೆ ನೀಡಿರುವ ಕೊಡುಗೆ ಅಪಾರವಾದದ್ದಾಗಿದೆ. ಬಾದಾಮಿಯಲ್ಲಿ ನಾಲ್ಕು ಗುಹೆಗಳನ್ನು, ಐಹೊಳೆಯಲ್ಲಿ ರಾವಳಫಡಿ ಶೈವ ಗುಹೆ, ಮೇಣಬಸದಿ ಹಾಗೂ ಬೌದ್ಧ ಗುಹೆ ನಿರ್ಮಿಸಿ ಗುಹಾಲಯಗಳ ವಾಸ್ತುವಿಗೆ ಹೆಸರಾದಂತೆ ಕೆಲವು ವೈವಿಧ್ಯ ಶೈಲಿಯ ರಾಚನಿಕ ದೇವಾಲಯಗಳ ನಿರ್ಮಾಣಕ್ಕೂ ಕಾರಣರಾಗಿದ್ದಾರೆ. ನಸುಗೆಂಪು ಮರಳುಗಲ್ಲಿನ ಗುಡ್ಡಗಳಲ್ಲಿ ಕೊರೆಯಲ್ಪಟ್ಟ ಗುಹಾಲಯಗಳು ವಿಶ್ವದ ಕಲಾರಸಿಕರನ್ನು ವಿಸ್ಮಯ ಪಡಿಸುತ್ತವೆ. ಚಾಲುಕ್ಯ ನಾಡಿನ ಈ ಕಲಾಕೃತಿಗಳು ತಮ್ಮ ವಿಶೇಷತೆಗಳಿಂದಾಗಿ ಇಡೀ ಪ್ರಪಂಚದಲ್ಲಿಯೇ ಖ್ಯಾತಿ ಹೊಂದಿವೆ.

ಬಾದಾಮಿಯ ಚಾಲುಕ್ಯ ವಾಸ್ತು ಶಿಲ್ಪಗಳನ್ನು ಎರಡು ಪ್ರಕಾರಗಳಾಗಿ ವಿಂಗಡಿಸಬಹುದು. ಮೊದಲನೆಯದಾಗಿ ಗುಹಾಲಯಗಳು ಹಾಗೂ ಎರಡನೆಯದಾಗಿ ರಾಚನಿಕ ದೇವಾಲಯಗಳೆಂಬುದಾಗಿ ವಾಸ್ತು ತಜ್ಞರು ಕಲಾ ದೃಷ್ಟಿಯಿಂದ ವಿಭಾಗಿಸುತ್ತಾರೆ.

**ಗುಹಾದೇವಾಲಯಗಳು :**



ಬೃಹತ್ತಾದ ಬಂಡೆಯನ್ನೇ ಕೊರೆದು ನಿರ್ಮಿಸಲ್ಪಟ್ಟಿರುವ ಲಯನಗಳೆಂದು ಹೆಸರಿಸಿಕೊಂಡ ಈ ಗುಹಾಲಯುಗಳು ಭಾರತೀಯು ವಾಸ್ತುಕಲೆಂಯುಲ್ಲಿ ವಿಶಿಷ್ಟ ನಿರ್ಮಿತಿಗಳಾಗಿವೆ. ಕಲ್ಲಿನಲ್ಲಿ ಶಿಲ್ಪಿಗಳು ಬೇಡದ ಅಂಶವನ್ನೆಲ್ಲ ತೆಗೆದುಹಾಕಿ ಅವಶ್ಯಕವಾದುದನ್ನು ತಮ್ಮ ಕಲಾತ್ಮಕ ಶೈಲಿಯ ಮೂಲಕ ಕೆತ್ತಿರುವ ಗುಹಾಲಯುಗಳಲ್ಲಿಯ ಶಿಲ್ಪಿಗಳ ಕೌಶಲ್ಯವು ಕಲಾರಸಿಕರನ್ನು ಬೆರಗು ಪಡಿಸುತ್ತವೆ. ನಮ್ಮ ಭಾರತೀಯ ವಾಸ್ತುಕಲೆಯ ಚರಿತ್ರೆಯಲ್ಲಿ ಗುಹಾಲಯ ನಿರ್ಮಾಣಕಾರ್ಯ ಆರಂಭವಾದದ್ದು ಸಾಮ್ರಾಟ ಅಶೋಕನ ಕಾಲದಲ್ಲಿ (ಕ್ರಿ.ಶ. 3ನೇಯ ಶತಮಾನ) ಎಂಬುದಾಗಿ ದಾಖಲೆಯಿದೆ. (ಡಾ. ಶೀಲಾಕಾಂತ ಪತ್ತಾರ– ಬಾದಾಮಿ ಚಾಲುಕ್ಯರು ಪುಟ–18) ಕ್ರಮೇಣ ದಕ್ಷಿಣ ಭಾರತಕ್ಕೂ ಈ ಕಲಾ ಸಂಪ್ರದಾಯವು ಪ್ರಯೋಗಿಸಲ್ಪಟ್ಟಿತು. ಪ್ರಾರಂಭದಲ್ಲಿ ಬೌದ್ಧಧರ್ಮ ಹಾಗೂ ಜೈನಧರ್ಮಗಳಿಗೆ ಸಂಬಂಧಿಸಿದ ವಾಸ್ತು ನಿರ್ಮಾಣ ಕಾರ್ಯವು ಬರುಬರುತ್ತ ಹಿಂದೂ ಗುಹಾದೇವಾಲಯಗಳ ನಿರ್ಮಾಣವನ್ನು ಗುಪ್ತರ ಕಾಲದಲ್ಲಿ ಕ್ರಿ.ಶ. 5ನೇಯ ಶತಮಾನದಲ್ಲಿ ಪ್ರಾರಂಭಿಸಿದ್ದಾಗಿ ಡಾ. ಶೀಲಾಕಾಂತ ಪತ್ತಾರ ದಾಖಲಿಸುತ್ತಾರೆ.

ಚಾಲುಕ್ಯ ವಾಸ್ತುಕಲಾ ರಚನೆಯಲ್ಲಿ ಗುಹಾಲಯಗಳ ಪ್ರಯೋಗವು ಐಹೊಳೆ, ಬಾದಾಮಿಗಳಲ್ಲಿ ಮಾತ್ರ ಕಾಣಲು ಸಿಗುತ್ತವೆ. ಐಹೊಳೆಯ ರಾವಳಫಡಿ ಹೆಸರಿನ ಶೈವ ಗುಹೆಯಲ್ಲಿ, ಮೇಣಬಸದಿಯ ನಿರ್ಮಾಣದಲ್ಲಿ ಜೈನ ಧರ್ಮದ ಅಂಶವನ್ನೂ, ಇನ್ನೊಂದು ಬೌದ್ಧ ಚೈತ್ಯಾಲಯವಿದ್ದರೆ ಬಾದಾಮಿಯಲ್ಲಿ ಕೊರೆದಿರುವ ನಾಲ್ಕು ಲಯನಗಳಲ್ಲಿ ವಿವಿಧ ಧರ್ಮಗಳ ಶಿಲ್ಪಗಳ ಸಂಯೋಜನೆ ನಡೆದಿದೆ. ಇಲ್ಲಿ ಮೊದಲನೆಯದು ಶೈವ ಗುಹೆಯಾಗಿದ್ದರೆ, ಎರಡನೆಯ ಹಾಗೂ ಮೂರನೆಯ ಗುಹೆಗಳು ವೈಷ್ಣವ ಪಂಥದ ಉದಾಹರಣೆಗಳಾಗಿವೆ. ನಾಲ್ಕನೆಯ ಗುಹೆಯು ಜೈನಧರ್ಮಕ್ಕೆ ಸಂಬಂಧಿಸಿದ ಶಿಲ್ಪಕ್ಕೆ ಹೆಸರಾಗಿದೆ. ಈ ಎಲ್ಲ ಗುಹಾಲಯಗಳನ್ನು ನಸುಗೆಂಪು ಮರಳುಗಲ್ಲುಗಳಲ್ಲಿ ಬೆಟ್ಟಗಳ ಕಡಿದಾದ ಪ್ರದೇಶದಲ್ಲಿ ಕೊರೆಯಲ್ಪಟ್ಟಿದ್ದು ಇವೆಲ್ಲವುಗಳ ನಿರ್ಮಾಣ ಕಾರ್ಯ ಅದ್ಭುತವೆನಿಸುತ್ತದೆ. ಬಾದಾಮಿಯ 3ನೆಯ ಗುಹಾಲಯದಲ್ಲಿ ಕಂಡು ಬರುವ ಕ್ರಿ.ಶ. 578ರ ಸಂಸ್ಕೃತ ಶಾಸನದಲ್ಲಿ ಈ ಕಲಾ ಪ್ರಯೋಗಗಳನ್ನು 'ಲಯನ' ವೆಂದೂ ಅದೇ ವಾಸ್ತು ಶಿಲ್ಪದಲ್ಲಿನ ಬಂಡೆಯಲ್ಲಿನ ಮಂಗಲೀಶನ ಕನ್ನಡ ಶಾಸನದಲ್ಲಿ 'ಕಲ್ಮನೆ' ಎಂಬುದಾಗಿ ಕರೆಯಲಾಗಿದೆ. ಇಲ್ಲಿನ ನಾಲ್ಕು ಗುಹಾಲಯಗಳಲ್ಲಿರುವ ಅದ್ಭುತ ಶಿಲ್ಪಗಳು ಕಲಾರಸಿಕರಿಗೆ ಹಬ್ಬದೂಟ ನೀಡುತ್ತವೆ. ಇಲ್ಲಿ ಸ್ಥಪತಿಗಳು ರೂಪಿಸಿದ ವಾಸ್ತುಕಲಾ ವಿನ್ಯಾಸಗಳು ವೈವಿಧ್ಯ ಕಲಾ ಪ್ರಯೋಗಕ್ಕೆ ಸಾಕ್ಷಿಯೆನಿಸುತ್ತವೆ. ಈ ಕುರಿತ ವಿವರ ಪರಿಚಯ ಮುಂದಿನ ಅಧ್ಯಾಯದಲ್ಲಿದೆ.

**ರಾಚನಿಕ ದೇವಾಲಯಗಳು :**



ಬಾದಾಮಿ ಚಾಲುಕ್ಯರು ನೂರಾರು ದೇವಾಲಯಗಳಲ್ಲಿ ವಿಶೇಷ ಪ್ರಯೋಗಗಳನ್ನು ನಡೆಸಿದ್ದು ಕಂಡು ಬರುತ್ತದೆ. ಇವರ ಅಧಿಕಾರಾವಧಿಯಲ್ಲಿ ದೇವಾಲಯ ನಿರ್ಮಾಣ ಕಾರ್ಯವು ಕರ್ನಾಟಕ ಹಾಗೂ ಆಂಧ್ರಪ್ರದೇಶದ ಹಲವಾರು ಸ್ಥಳಗಳಲ್ಲಿ ನಡೆದಿದೆ. ಚಾಲುಕ್ಯರ ವಾಸ್ತುಶಿಲ್ಪಗಳ ಪ್ರಯೋಗಗಳು ಬಾದಾಮಿ, ಐಹೊಳೆ, ಮಹಾಕೂಟ, ಪಟ್ಟದಕಲ್ಲುಗಳಲ್ಲಿ ಹೇರಳವಾಗಿ ನಿರ್ಮಾಣಗೊಂಡಿವೆ. ಇದೇ ಕಾಲದಲ್ಲಿ ಬಾದಾಮಿಯ ಸುತ್ತಮುತ್ತಲ ಪ್ರದೇಶದಲ್ಲಿಯೂ ಚಾಲುಕ್ಯರ ರಾಚನಿಕ ದೇವಾಲಯಗಳು ಕಟ್ಟಲ್ಪಟ್ಟಿವೆ. ಈ ಎಲ್ಲ ದೇವಾಲಯಗಳಲ್ಲಿ ಚಾಲುಕ್ಯ ಶಿಲ್ಪಿಗಳು ವಿವಿಧ ವಾಸ್ತು ಶೈಲಿಗಳನ್ನು ಬಳಕೆ ಮಾಡಿ ವಾಸ್ತುಶಿಲ್ಪಕಲೆಗೆ ವಿನೂತನ ಕಾಣಿಕೆ ನೀಡಿದ ಉದಾಹರಣೆಗಳಿವೆ. ಇಲ್ಲಿ ನಿರ್ಮಾಣಗೊಂಡ ರಾಚನಿಕ ದೇಗುಲಗಳನ್ನು ದ್ರಾವಿಡ ಶೈಲಿಯ ದೇವಾಲಯಗಳೆಂದೂ ನಾಗರ ರೇಖಾ ಶೈಲಿಯ ದೇಗುಲಗಳೆಂದೂ, ಫಾಂಸನಾ ಶೈಲಿಯ ದೇವಾಲಯಗಳೆಂದೂ, ಮಂಟಪ ಶೈಲಿಯ ಶಿಲ್ಪಗಳೆಂದೂ ಕೊನೆಯದಾಗಿ ಗಜಪೃಷ್ಠಾಕಾರದ ವೇಸರಶೈಲಿಯ ದೇವಾಲಯಗಳೆಂದೂ ವರ್ಗೀಕರಿಸಲಾಗುತ್ತದೆ.

ಬಾದಾಮಿಯ ಚಾಲುಕ್ಯ ವಾಸ್ತುಶಿಲ್ಪಗಳು ಬಾದಾಮಿ, ಐಹೊಳೆ, ಪಟ್ಟದಕಲ್ಲು ಹಾಗೂ ಮಹಾಕೂಟ, ಆಂಧ್ರಪ್ರದೇಶದ ಆಲಂಪುರಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ನಿರ್ಮಿತಗೊಂಡಿವೆ. ಕ್ರಿ.ಶ. 6 ರಿಂದ 8ನೆಯ ಶತಮಾನದವರೆಗೆ ವಿವಿಧ ಉತ್ಕೃಷ್ಟ ಮಟ್ಟದ ರಚನೆಗಳಾಗಿವೆ. ಈ ಸ್ಮಾರಕಗಳಲ್ಲಿ ಕಂಡು ಬರುವ

ವಾಸ್ತುವಿಶೇಷಗಳು, ವಿನ್ಯಾಸಗಳು, ವಿಭಿನ್ನ ಶೈಲಿಯ ಶಿಖರಗಳು ವಿವಿಧ ಗಾತ್ರದ ದೇಗುಲಗಳು ಆ ಕಾಲದ ಸ್ಥಪತಿಗಳ, ಶಿಲ್ಪಿಗಳ ಕಲಾಕೌಶಲ್ಯಗಳ ಉದಾಹರಣೆಗಳಾಗಿವೆ. ಚಾಲುಕ್ಯರ ಸಮೃದ್ಧವಾದ ವಾಸ್ತುಕಲಾ ವೈಭವವು ಇಡೀ ಭಾರತದಲ್ಲಿಯೇ ಮಹತ್ವದ ಸ್ಥಾನವನ್ನು ಅದು ಪಡೆದುಕೊಂಡಿದೆ.



ಬಾದಾಮಿಯ ಚಾಲುಕ್ಯರ ವಾಸ್ತುಕಲೆಯು ಐಹೊಳೆ ಬಾದಾಮಿಗಳಲ್ಲಿ ಮೊಳಕೆಗೊಂಡು ಪಟ್ಟದಕಲ್ಲು ಪರಿಸರದಲ್ಲಿಯ ಸ್ಮಾರಕಗಳಲ್ಲಿ ಪರಿಪೂರ್ಣತೆಗೊಂಡಿದ್ದು ಕಂಡು ಬರುತ್ತದೆ. ಇಲ್ಲಿ ಸ್ಮಾರಕಗಳನ್ನು ನಿರ್ಮಾಣ ಮಾಡಿದ ಸ್ಥಪತಿಗಳ, ರೂವಾರಿಗಳ ಮೇಲೆ ಅಜಂತಾ, ಎಲ್ಲೋರ ಗುಹಾಲಯಗಳು ಹೆಚ್ಚಿನ ಪ್ರಭಾವ ಬೀರಿರಬೇಕು. ವಾಕಾಟಕರ ಕಲಾ ಪರಂಪರೆಯಿಂದ ಪ್ರಭಾವಿತರಾದ ಇಲ್ಲಿನ ಸ್ಥಪತಿಗಳು, ರೂವಾರಿಗಳು ಗುಹಾಲಯಗಳಲ್ಲಿ, ರಾಚನಿಕ ಮಂದಿರಗಳಲ್ಲಿ ತಮ್ಮದೇ ಆದ ಕಲಾ ವೈಶಿಷ್ಟ್ಯವನ್ನು ಸ್ಥಾಪಿಸಿದ್ದಾರೆ. ಪ್ರಯೋಗಶೀಲ ಗುಣವಿಶೇಷದಿಂದಾಗಿ ವೈವಿಧ್ಯವನ್ನು, ಸಂಕೀರ್ಣತೆಯನ್ನು ಮತ್ತು ಪರಿಪೂರ್ಣತೆಯನ್ನು ಸಾಧಿಸಿದ್ದಾರೆ. (ಶೀಲಾಕಾಂತ ಪತ್ತಾರ – ಬಾದಾಮಿ ಚಾಲುಕ್ಯರು ಲೇಖನ ಸಂಪುಟ ಪುಟ – 30).

ಚಾಲುಕ್ಯರ ವಾಸ್ತುಶಿಲ್ಪಗಳನ್ನು ಗುಹಾಲಯಗಳೆಂದೂ, ರಾಚನಿಕ ಮಂದಿರಗಳೆಂದೂ ವಿಭಾಗಿಸಬಹುದು. ಗುಹಾಲಯಗಳ ನಿರ್ಮಾಣಕಾರ್ಯ ಮೊದಲು ಮೇಲ್ಭಾವಣಿಯಿಂದ ಆರಂಭಗೊಂಡರೆ ರಾಚನಿಕ ದೇವಾಲಯಗಳ ಕಾರ್ಯವು ಕಟ್ಟಡದ ತಲವಿನ್ಯಾಸದಿಂದ ಮೊದಲಾಗುತ್ತದೆ. ಅಧಿಷ್ಠಾನ, ಗೋಡೆ, ಶಿಖರ ವಿನ್ಯಾಸ ರೂಪು ತಳೆಯುತ್ತವೆ. ಗುಹಾಲಯ ನಿರ್ಮಾಣದಲ್ಲಿ ಶಿಲ್ಪಿಯು ಬೇಡಾದ ಭಾಗವನ್ನು ಕತ್ತರಿಸಿ ಹೊರತೆಗೆದು ಲಯನಗಳನ್ನು ರಚಿಸಿದ ಸೂತ್ರ ವ್ಯವಕಲನವೆನಿಸಿದರೆ ರಾಚನಿಕ ಮಂದಿರಗಳಲ್ಲಿ ಅದೇ ಶಿಲ್ಪಿಯು ಬೇಕಿರುವ ಭಾಗಗಳನ್ನು ತಂದು ಸಂಯೋಜಿಸುವ ತಂತ್ರಗಾರಿಕೆಯನ್ನು ಅನುಸರಿಸುವುದರಿಂದ ಇದನ್ನು ಸಂಕಲನ ಸೂತ್ರವೆಂದು ಹೆಸರಿಸಬಹುದು. ಚಾಲುಕ್ಯ– ರೂವಾರಿಗಳು ಬಾದಾಮಿ ಹಾಗೂ ಐಹೊಳೆ ಪರಿಸರದಲ್ಲಿ ಗುಹಾಲಯಗಳನ್ನು ನಿರ್ಮಿಸಿದ್ದು, ಅವುಗಳಲ್ಲಿ ಕಂಡು ಬರುವ ವಾಸ್ತುಕಲಾ ತಾಂತ್ರಿಕತೆಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಬಹುದಾಗಿದೆ.

ಗುಹಾಲಯಗಳ ತಲವಿನ್ಯಾಸವು ಸಾಮಾನ್ಯವಾಗಿ ಚಿಕ್ಕ ಗರ್ಭಗೃಹ, ಸಭಾಮಂಟಪ ಮತ್ತು ಮುಖಮಂಟಪವನ್ನು ಮಾತ್ರ ಹೊಂದಿದ್ದು ಇಲ್ಲಿ ಪ್ರದಕ್ಷಿಣಾ ಪಥವಿರುವುದಿಲ್ಲ. ಈ ಗುಹಾಲಯಗಳಲ್ಲಿ ಅಧಿಷ್ಠಾನದ ಕಲ್ಪನೆಯಿದ್ದು, ಅದರಲ್ಲಿ ಗಣಗಳ ಸಾಲನ್ನು ಕೆತ್ತಲಾಗಿರುತ್ತದೆ. ಗರ್ಭಗೃಹವು ಎತ್ತರದಲ್ಲಿದ್ದು ಅದಕ್ಕೆ ಪ್ರತ್ಯೇಕ ಮೆಟ್ಟಿಲುಗಳಿರುತ್ತವೆ. ಮುಖಮಂಟಪದ ಮುಂಭಾಗದಲ್ಲಿ ಸಾಮಾನ್ಯವಾಗಿ ನಾಲ್ಕು ಕಂಬಗಳನ್ನು ಸಂಯೋಜಿಸಲಾಗಿರುತ್ತದೆ. ಕೆಲವೆಡೆ ಹೆಚ್ಚು ಕಡಿಮೆಯೂ ಇರಬಹುದು. ಚೌಕಾಕಾರದ ಕಂಬಗಳು, ಗೋಡೆಗಳಲ್ಲಿ ಬೃಹತ್ತಾದ ವಿಗ್ರಹಗಳು, ಮೇಲ್ಛತ್ತಿನಲ್ಲಿ ವಿವಿಧ ಜ್ಯಾಮಿತಿ, ಪುಷ್ಪ ನಕ್ಷೆಗಳ ಕೆತ್ತನೆಗಳು ನಮ್ಮ ಗಮನವನ್ನು ಸೆಳೆಯುತ್ತವೆ. ಗುಹಾಲಯದ ತೊಲೆಗಳು ಕಲಾತ್ಮಕವಾಗಿದ್ದು, ಅವುಗಳು ಕಥಾನಕ

ಕೆತ್ತಲ್ಪಟ್ಟಿವೆ. ಈ ಗುಹಾಲಯಗಳಲ್ಲಿ ಮುಖ ಮಂಟಪ ಹಾಗೂ ಸಭಾ ಮಂಟಪಗಳನ್ನು ಸಂಯೋಜಿಸುವಲ್ಲಿ ರೂವಾರಿಗಳು ಮಧ್ಯದಲ್ಲಿ ಎರಡು ಅಥವಾ ನಾಲ್ಕು ಕಂಬಗಳನ್ನು ಕೆತ್ತಿ ಪ್ರಯೋಗಿಸಿದ್ದು ಕಾಣುತ್ತೇವೆ. ಗುಹಾಲಯಗಳೆಂದೇ ಕರೆಯಲ್ಪಟ್ಟ ಚಾಲುಕ್ಯರ ಈ ಕಲ್ಮನೆಗಳು ಬಾದಾಮಿ ಹಾಗೂ ಐಹೊಳೆಗಳಲ್ಲಿ ಮಾತ್ರ ರೂಪಿಸಲ್ಪಟ್ಟಿದ್ದು ರಾಜ್ಯದ ಇನ್ನಾವುದೇ ಪ್ರದೇಶದಲ್ಲಿ ನಮಗೆ ಕಾಣಸಿಗುವುದಿಲ್ಲ.

ಚಾಲುಕ್ಯ ಅರಸ ಅರಸಿಯರು ಹಾಗೂ ಧನಿಕರು ಕರ್ನಾಟಕ ಹಾಗೂ ಆಂಧ್ರಪ್ರದೇಶ ರಾಜ್ಯದ ಹಲವೆಡೆಗಳಲ್ಲಿ ಸುಂದರವಾದ ಸ್ಮಾರಕಗಳನ್ನು ನಿರ್ಮಿಸಿ ತಮ್ಮ ಕಲಾ ಪ್ರೇಮವನ್ನು ಅಭಿವ್ಯಕ್ತ ಪಡಿಸಿದ್ದಾರೆ. ನೂರಾರು ರಾಚನಿಕ ದೇವಾಲಯಗಳು ಇದಕ್ಕೆ ಸಾಕ್ಷಿಯಾಗಿವೆ. ಬಾದಾಮಿ ಸುತ್ತ ಮುತ್ತಲ ಪ್ರದೇಶದಲ್ಲಿ ವಿಶೇಷವಾಗಿ ಐಹೊಳೆ, ಮಹಾಕೂಟ ಹಾಗೂ ಪಟ್ಟದಕಲ್ಲುಗಳಲ್ಲಿ ಸುಂದರ ಶೈಲಿಯ ದೇವಾಲಯಗಳನ್ನು ನಿರ್ಮಿಸಿದ್ದು ನಮಗೆ ಕಂಡು ಬರುತ್ತದೆ. ಆಂಧ್ರಪ್ರದೇಶದ ಆಲಂಪೂರದಲ್ಲೂ ಸಹ ನಾವು ಕೆಲವು ಚಾಲುಕ್ಯ ಸ್ಮಾರಕಗಳನ್ನು ನೋಡಬಹುದು. ಈ ರಾಜ್ಯದಲ್ಲಿಯ ಸತ್ಯಾವೋಲ, ಮಹಾನಂದಿ, ಕುಡವೇಲಿ ಮುಂತಾದೆಡೆಯಲ್ಲೂ ಕೂಡಾ ಚಾಲುಕ್ಯ ಸ್ಮಾರಕಗಳುಂಟು. ಈ ಎಲ್ಲ ಸ್ಥಳಗಳಲ್ಲಿರುವ ರಾಚನಿಕ ಸ್ಮಾರಕಗಳಲ್ಲಿ ವಾಸ್ತು ವಿಶೇಷತೆಗಳನ್ನು, ವೈವಿಧ್ಯತೆಗಳನ್ನು ಅವಲೋಕಿಸಲು ಸಾಧ್ಯವಿದೆ. ಇಲ್ಲಿ ಪ್ರಯೋಗಿಸಲ್ಪಟ್ಟ ದೇವಾಲಯಗಳ ತಲವಿನ್ಯಾಸಗಳು ವಿಶೇಷವೆನಿಸುತ್ತವೆ.

ಚಾಲುಕ್ಯ ರೂವಾರಿಗಳು ವಿಭಿನ್ನ ಪ್ರಕಾರದ ತಲವಿನ್ಯಾಸಗಳನ್ನು ಹೊಂದಿದ ದೇವಾಲಯಗಳನ್ನು ನಿರ್ಮಿಸಿದ್ದಾರೆ. ಹೆಚ್ಚಿನವು ಸರಳವಾದ ತಲವಿನ್ಯಾಸದವು. ಇವುಗಳಲ್ಲಿ ಚೌಕಾಕಾರದ ಗರ್ಭಗೃಹವಿದ್ದು ಸಭಾಮಂಟಪ, ಮುಖ ಮಂಟಪ ಭಾಗಗಳನ್ನು ಮಾತ್ರ ಹೊಂದಿದ್ದು ಇಲ್ಲಿ ಪ್ರದಕ್ಷಿಣಾ ಪಥವಿರುವುದಿಲ್ಲ. ಇಂಥವನ್ನು ನಿರಂಧಾರ ಸ್ಮಾರಕಗಳೆಂದು ಕರೆಯಲಾಗುತ್ತದೆ. ಪ್ರದಕ್ಷಿಣಾ ಪಥ ಸಂಯೋಜನೆಗೊಂಡ ದೇವಾಲಯಗಳನ್ನು ಸಾಂಧಾರವೆಂದು ಹೆಸರಿಸಲಾಗಿದೆ. ಗರ್ಭಗೃಹದಲ್ಲಿ ದೇವತಾ ಶಿಲ್ಪವನ್ನು ಸ್ಥಾಪಿಸಿ ಅದನ್ನು ಸುತ್ತು ಹಾಕಲು ಸಾಧ್ಯವಾಗುವಂತೆ ಗರ್ಭಗೃಹದ ಸುತ್ತಲೂ ಪ್ರದಕ್ಷಿಣಾ ಪಥವನ್ನು ನಿರ್ಮಿಸಲಾಗಿರುತ್ತದೆ. ಇಂಥ ಸ್ಮಾರಕಗಳಿಗೆ ಉದಾಹರಣೆಗಳೆಂದರೆ ಐಹೊಳೆಯ ಹುಚ್ಚಿಮಲ್ಲಿ ಗುಡಿ, ದುರ್ಗಾದೇವಾಲಯ, ಪಟ್ಟದಕಲ್ಲಿನ ಸಂಗಮೇಶ್ವರ, ಮಹಾಕೂಟದ ಮಲ್ಲಿಕಾರ್ಜುನ ದೇವಾಲಯಗಳಾಗಿವೆ. ಐಹೊಳೆಯ ಮಂಟಪ ಶೈಲಿಯಲ್ಲಿ ರಚಿತಗೊಂಡ ಲಾಡಖಾನ್ ದೇವಾಲಯ ಇನ್ನೊಂದು ತಲವಿನ್ಯಾಸದ ಪ್ರಯೋಗವಾಗಿದೆ. ಇಲ್ಲಿ ಗರ್ಭಗೃಹವು ಸಭಾಮಂಟಪದ ಭಾಗವೆನಿಸುತ್ತದೆ. ಅವೆರಡಕ್ಕೂ ಒಂದೇ ಗೋಡೆಯನ್ನು ಸಂಯೋಜಿಸಿ ಗರ್ಭಗೃಹವನ್ನು ನಿರ್ಮಿಸಿದ್ದು ಸಭಾಮಂಟಪವು ಈ ಸ್ಮಾರಕದಲ್ಲಿ ವಿಶಾಲವಾಗಿ ರೂಪಿತಗೊಂಡಿದೆ.

ಚಾಲುಕ್ಯ ಸ್ಥಪತಿಗಳು ಐಹೊಳೆ, ಹಳೇಮಹಾಕೂಟ, ಪಾಪನಾಶಿ ಮತ್ತು ಸತ್ಯಾವೋಲುಗಳಲ್ಲಿ ಅಪರೂಪದ ತಲವಿನ್ಯಾಸದ ಪ್ರಯೋಗಗಳನ್ನು ಮಾಡಿದ್ದು ಕಂಡು ಬರುತ್ತದೆ. ಗಜಪೃಷ್ಟ ತಲವಿನ್ಯಾಸವುಳ್ಳ ವಿಭಿನ್ನ ಕಲಾ ಪ್ರಯೋಗ ಮಾಡಿದ ಉದಾಹರಣೆಗಳಿಲ್ಲಿವೆ. ದೇವಾಲಯದ ಹಿಂಭಾಗ ಗಜಪೃಷ್ಟಾಕಾರವಾಗಿದ್ದು, ಇವು ಬೌದ್ಧರ ಚೈತ್ಯಾಲಯಗಳ ತಲವಿನ್ಯಾಸ ಹೊಂದಿವೆ. ಐಹೊಳೆಯ ದುರ್ಗಾದೇವಾಲಯವು ಈ ಪ್ರಕಾರದ ತಲವಿನ್ಯಾಸದಲ್ಲಿ ಸಂಯೋಜನೆಗೊಂಡಿದ್ದು ಇದಕ್ಕೆ ಎರಡು ಪ್ರದಕ್ಷಿಣಾ ಪಥ, ಚೌಕಾಕಾರದ ಗರ್ಭಗೃಹ, ಸಭಾಮಂಟಪ ಹಾಗೂ ಮುಖಮಂಟಪಗಳನ್ನು ರೂಪಿಸಲಾಗಿದೆ. ಇದೊಂದು ಉತ್ಕೃಷ್ಟ ಮಟ್ಟದ್ದಾದ ದೇವಾಲಯವಾಗಿದೆ.

"ರಾಜಕೀಯ ಇತಿಹಾಸದಂತೆಯೇ ಚಾಲುಕ್ಯರ ವಾಸ್ತುಶಿಲ್ಪ ಚಟುವಟಿಕೆಯೂ ಎರಡು ನಿರ್ದಿಷ್ಟ ಹಂತಗಳನ್ನು ಕಂಡಿತು. ಮೊದಲನೆಯ ಹಂತವು ಕ್ರಿ.ಶ. 535ರಲ್ಲಿ ಚಾಲುಕ್ಯ ಆಳ್ವಿಕೆಯ ಸ್ಥಾಪನೆಗೆ ಸಂವಾದಿಯಾಯಿತು. ಕ್ರಿ.ಶ. 642ರಲ್ಲಿ ತಾತ್ಕಾಲಿಕ ಗ್ರಹಣದವರೆಗೆ ಬಹು ದೊಡ್ಡ ರಾಜಕೀಯ ಶಕ್ತಿಯಾಗಿ ಅವರು ಬೆಳೆದರು. ಎರಡನೆಯ ಹಂತವು ಕ್ರಿ.ಶ. 635ರಲ್ಲಿ ಮತ್ತೆ ಚಾಲುಕ್ಯ ಆಳ್ವಿಕೆಯು ಸ್ಥಾಪನೆಗೊಳ್ಳುವುದರಿಂದ ಪ್ರಾರಂಭವಾಗಿ ಕ್ರಿ.ಶ. 657ರಲ್ಲಿ ಮುಗಿಯುವವರೆಗೂ ಮುಂದುವರೆಯುತ್ತದೆ". (ಡಾ. ಎಸ್.ರಾಜಶೇಖರ, ಬಾದಾಮಿ ಚಾಲುಕ್ಯರು ಲೇಖನ ಸಂಪುಟ ಪುಟ-298) ಈ ಹಿನ್ನೆಲೆಯಲ್ಲಿ ಬಾದಾಮಿ ಚಾಲುಕ್ಯ ವಾಸ್ತುಶಿಲ್ಪಗಳ ಸ್ಮಾರಕಗಳಲ್ಲಿ ಬಾದಾಮಿಯ ಗುಹಾಲಯಗಳು ವಿಶೇಷವಾದವುಗಳು. ಇವುಗಳನ್ನು ಲಯಣ ಹಾಗೂ ಕಲ್ಮನೆಗಳೆಂದೂ ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ಬಾದಾಮಿಯ ಕಲ್ಬೆಟ್ಟದಲ್ಲಿ ನಾಲ್ಕು ಗುಹಾಲಯಗಳನ್ನು, ಐಹೊಳೆಯ ರಾವಳಫಡೆ, ಮೀನಬಸದಿ ಹಾಗೂ ಚೈತ್ಯಾಲಯಗಳನ್ನು ಚಾಲುಕ್ಯ ವಾಸ್ತುಶಿಲ್ಪಿಗಳು ನಿರ್ಮಿಸಿದ್ದು ನಮ್ಮ ಗಮನಕ್ಕೆ ಬರುತ್ತದೆ. ಬಾದಾಮಿ ದಕ್ಷಿಣ ದಿಕ್ಕಿನಲ್ಲಿರುವ ರಣಮಂಡಲ ಬೆಟ್ಟದಲ್ಲಿ ಕೊರೆದಿರುವ ಈಗ ಮೇಣಬಸದಿಗಳೆಂಬ ಹೆಸರಿನಲ್ಲಿರುವ ನಾಲ್ಕು ಗುಹಾಲಯಗಳು ವೈವಿಧ್ಯ ಶಿಲ್ಪಕಲಾ ಪ್ರಯೋಗದ ನಿರ್ಮಿತಿಗಳಾಗಿವೆ.

# 2. ದೇವಾಲಯಗಳ ತಲವಿನ್ಯಾಸ ಪ್ರಯೋಗಗಳು

ಭಾರತೀಯ ದೇವಾಲಯಗಳ ಹಿನ್ನೆಲೆಯ ಕುರಿತು ವಿಚಾರಿಸುವ ಸಂದರ್ಭದಲ್ಲಿ ಕೆಲವು ವಿದ್ವಾಂಸರ ಮಾತುಗಳು ನೆನಪಿಗೆ ಬರುತ್ತವೆ. ಗುಡಿಯೇ ಪವಿತ್ರವಾದ ತಾಣವೆಂಬ ನಂಬಿಕೆಯಿದೆ. ಗುಡಿಯಲ್ಲಿರುವ ಮುಖ್ಯ ಭಾಗ ಗರ್ಭಗೃಹ. ಇದನ್ನು ಆಗಮದಲ್ಲಿ 'ಗೃಹಗರ್ಭ' ಎಂದು ಕರೆಯಲ್ಪಟ್ಟಿದೆ. ಸಂಸ್ಕೃತದಲ್ಲಿ ಗುಡಿ ಅಥವಾ ದೇಗುಲಕ್ಕೆ 'ಆಯತನ'ವೆಂದು ಹೆಸರಿದೆ. ಈ ಆಯತನವು ಬಿಂಬ ಅಥವಾ ಬೇರವೂ ಆಗಿರಬಹುದು, ಮಂದಿರವೂ ಆಗಿರಬಹುದು.

"ವಾಸ್ತವವಾಗಿ ಗುಡಿಯನ್ನು ಮನುಷ್ಯ ದೇಹದಂತೆಯೇ ಶಾಸ್ತ್ರಗಳ ಒಂದು ವ್ಯೂಹವೆಂದು ಭಾವಿಸುವುದಿದೆ. ಶಕ್ತಿಗಳ ವ್ಯವಸ್ಥೆಗೆ ಮಂಡಲವೆಂದು ಹೆಸರು. ಮನುಷ್ಯ ದೇಹವು ಅಡ್ಡಾಡುವ (ಚರ ಅಥವಾ ಜಂಗಮ) ಮಂಡಲವಾದರೆ ಗುಡಿ ಒಂದೆಡೆ ನಿಂತಿರುವ (ಅಚಲ ಅಥವಾ ಸ್ಥಾವರ) ಮಂಡಲ ಇವೆರಡರ ನಡುವೆ ಇರುವ ಸಾಂಕೇತಿಕವಾದ ಪರ್ಯಾಯ ಸಂಬಂಧಗಳೆಂದರೆ ತಂತ್ರದಲ್ಲಿ ಮನುಷ್ಯ ದೇಹದ ಮಂಡಲ ಮುಖ್ಯವಾದರೆ, ಆಗಮದಲ್ಲಿ ದೈವೀ ಶಕ್ತಿಗಳ ಮಂಡಲ ಮುಖ್ಯವಾಗುತ್ತದೆ. ಗುಡಿಯಲ್ಲಿರುವ ಬೇರ (ಅರ್ಚಾಮೂರ್ತಿ) ಮನುಷ್ಯ ದೇಹದಲ್ಲಿರುವ ಜೀವದಂತೆ, ಅದೇ ದೈವೀಶಕ್ತಿಗಳ ಸಂಗ್ರಹರೂಪ. 'ದೇಹೋ ದೇವಾಲಯ: ಪ್ರೋಕ್ತ: ಜೀವೋ ದೇವ: ಸನಾತನ:' ಎಂಬ ಮಾತು (ಪ್ರೊ. ಎಸ್.ಕೆ.ರಾಮಚಂದ್ರರಾವ್, ಭಾರತದ ದೇವಾಲಯ, ನೆಲೆ, ಹಿನ್ನೆಲೆ, ಪು–141–142). ಅರ್ಥಪೂರ್ಣವಾಗಿದೆ.

**ಶಿಲ್ಪಶಾಸ್ತ್ರದಲ್ಲಿ ವಾಸ್ತುಮಂಡಲ :**




**ವಾಸ್ತು ಮಂಡಲದಿಂದ ರೂಪುಗೊಂಡಿರುವ ಏಕ ಬೇರಾಲಯ**

ವಾಸ್ತು ಪುರುಷನ ಆರಾಧನೆಯನ್ನು ಮಂಡಲ ಅಥವಾ ಚಕ್ರ (ಯಂತ್ರ) ರೂಪದಲ್ಲಿ ನಡೆಸಲಾಗುತ್ತದೆ. ಮಾನಸಾರ, ವಿಶ್ವಕರ್ಮ ವಾಸ್ತುಶಾಸ್ತ್ರ, ಮಯಮತ, ಮುಂತಾದ ಶಿಲ್ಪ ಶಾಸ್ತ್ರಗಳಲ್ಲಿ ಹಲವು ಬಗೆಯ ವಾಸ್ತು ಮಂಡಲಗಳ ಕುರಿತು ಹೇಳಲಾಗಿದೆ ಎಂದು ಡಾ. ಜಿ.ಜ್ಞಾನಾನಂದ "ವಾಸ್ತು ಪುರುಷ ನೆಲೆ – ಹಿನ್ನೆಲೆ"ಯಲ್ಲಿ ಉಲ್ಲೇಖಿಸುತ್ತಾರೆ. ಮುಖ್ಯವಾದ ವಾಸ್ತುಮಂಡಲಗಳೆಂದರೆ ಐದು ಪ್ರಕಾರಗಳೆಂದು ತಿಳಿಯಲಾಗುತ್ತದೆ. 1) ಸ್ಥಂಡಿಲ 2) ಸ್ಥಾನೀಯ 3) ಚಂಡಿತ 4) ಪರಮಶಾಯಿಕ 5) ಆಸನ. ಸ್ಥಂಡಿಲವೆಂದರೆ, ನಲವತ್ತೊಂಬತ್ತು ಚೌಕವುಳ್ಳದ್ದು, ಸ್ಥಾನೀಯವೆಂದರೆ ಒಂದು ನೂರ ಇಪ್ಪತ್ತೊಂದು ಚೌಕಗಳಲ್ಲಿ ಇರುವುದು. ಇದನ್ನು ಕೋಟೆಗಳ ನಿರ್ಮಾಣದಲ್ಲಿ

ಬಳಸಲಾಗುವುದು. ಚಂಡಿತ ಎಂದರೆ ಇದು ಅರವತ್ನಾಲ್ಕು ಚೌಕಗಳುಳ್ಳದ್ದು, ಇದನ್ನು ದೇವಾಲಯ ನಿರ್ಮಾಣಕ್ಕೆ ಬಳಸಲಾಗುತ್ತದೆ. ಪರಮಶಾಯಿಕ ಎಂದರೆ ಎಂಭತ್ತೊಂದು ಚೌಕಗಳು ಇರುವುದು. ಗೃಹ ನಿರ್ಮಾಣಕ್ಕೆ ಬಳಸಲಾಗುತ್ತದೆ. ಆಸನವೆಂದರೆ ನೂರು ಚೌಕಗಳು ಇರುವುದು. ಕೊನೆಯ ಮೂರು ಬಹುವಾಗಿ ರೂಢಿಯಲ್ಲಿವೆ. ಈ ಚಕ್ರಗಳೆಲ್ಲಾ ಚತುರ್ಭುಜಾಕಾರ, ವೃತ್ತ, ತ್ರಿಭುಜಾಕೃತಿಗಳಲ್ಲಿ ಪ್ರತ್ಯೇಕವಾಗಿರುವುದೂ ಉಂಟು. (ಡಾ. ಜಿ.ಜ್ಞಾನಾನಂದ ವಾಸ್ತು ಪುರುಷ ನೆಲೆ – ಹಿನ್ನೆಲೆ, ಪು. 19).

**ದೇವಾಲಯಗಳ ನಿವೇಶನ ಆಯ್ಕೆ :**

ವಾಸ್ತುಪದ ಮಂಡಲಗಳನ್ನು ಬಳಸಿ ಕೇವಲ ಕಟ್ಟಡ ರಚನೆಯೇಅಲ್ಲ. ಗ್ರಾಮ, ನಗರ ಯೋಜನೆಯನ್ನು ಮಾಡಲಾಗುತ್ತದೆ. ಇದನ್ನು ವಾಸ್ತುಪದ ವಿನ್ಯಾಸವೆಂದು ಕರೆಯಲಾಗುತ್ತದೆ. ಎಲ್ಲಾ ಕಟ್ಟಡಗಳಿಗೂ ಮೊದಲು ವಾಸ್ತುಪದ ವಿನ್ಯಾಸ ನಡೆಸಬೇಕೆಂಬುದು ಶಿಲ್ಪಶಾಸ್ತ್ರದ ನಿಯಮವಿದೆ.

ಶಿಲ್ಪಿಯಾದವನು ಭೂಮಿಯ ಮೇಲೆ ದೇವಾಲಯ ನಿರ್ಮಾಣದ ಪೂರ್ವದಲ್ಲಿ ಸೂಕ್ತವಾದ ವಾಸ್ತುಪದ ವಿನ್ಯಾಸವನ್ನು ರೂಪಿಸಿದ ನಂತರ ಅದರಲ್ಲಿ ಸೂಚಿಸಿದ ದೇವತೆ ಅಥವಾ ಶಕ್ತಿಗಳನ್ನು ಪೂಜಿಸಿ ಬಲಿ ಅರ್ಪಿಸಿ ಖಚಿತಗೊಳಿಸಿದಾಗ ಪ್ರತಿ ಚೌಕದಲ್ಲಿಯ ವೈಶಿಷ್ಟ್ಯವನ್ನು ಗುರುತಿಸಿದ್ದುದಾಗಿ ಡಾ. ಜಿ ಜ್ಞಾನಾನಂದ ಹೇಳುತ್ತಾರೆ. ಇದರೊಂದಿಗೆ ಶಾಸ್ತ್ರದಲ್ಲಿ ಯಾವ ಭಾಗದಲ್ಲಿ ಏನಿರಬೇಕೆಂಬುದನ್ನು ಕಲ್ಪಿಸಿಕೊಳ್ಳುತ್ತಿದ್ದದೆಂಬುದಾಗಿಯೂ ತಿಳಿಯುತ್ತದೆ.

**ವಾಸ್ತು ಮಂಡಲವನ್ನು ಭೂಮಿಯ ಮೇಲೆ ಗುರುತಿಸುವ ಕ್ರಮ**

ಗ್ರಾಮದ ಎಂಟು ದಿಕ್ಕುಗಳಲ್ಲಿ ದೇವಾಲಯ ನಿರ್ಮಿಸಬಹುದೆಂದೂ ಗ್ರಾಮದ ಪೈಶಾಚಿಕ ವಲಯದಲ್ಲಿ ಈ ದೇವಾಲಯವನ್ನು ಗ್ರಾಮವನ್ನು ನೋಡದಿರುವಂತೆ ನಿರ್ಮಾಣ ಮಾಡಬೇಕೆಂದು "ಶ್ರೀ ಕಾಶ್ಯಪ" ಶಿಲ್ಪ ಶಾಸ್ತ್ರದಲ್ಲಿ ಉಲ್ಲೇಖವಿದೆ. ಪೈಶಾಚಿಕ ವಲಯವೆಂಬುದು ವಾಸ್ತು ಮಂಡಲದ ಸುತ್ತಲೂ ಇರುವ ಅಂತಿಮ ಚೌಕಗಳ ಪ್ರದೇಶ ಈ ವಾಸ್ತುಮಂಡಲವನ್ನು ದೈವ, ಮಾನುಷಾ, ಪೈಶಾಚ ವಲಯುಗಳೆಂದು ವಿಭಜಿಸಿದ್ದು ದೇವಾಲಯ ನಿರ್ಮಾಣ ಕ್ಷೇತ್ರವನ್ನು ಪೂರ್ಣವಾಗಿ ಪರಿಗಣಿಸಿ ಈ ವಿಭಾಗಗಳನ್ನು ಹೇಳುವುದುಂಟು. ಕೆಲವು ಸ್ಥಪತಿಗಳು ಈ ಅರ್ಥವನ್ನು ಅಂಗೀಕರಿಸುವುದಿಲ್ಲವೆಂಬ ವಿಚಾರವೂ ಇದೆ. ಇದೇ ಕಾಶ್ಯಪ ಶಿಲ್ಪಶಾಸ್ತ್ರಂದ ಇನ್ನೊಂದು ಶ್ಲೋಕದಲ್ಲಿ ದೇವಾಲಯುವು "ಪಾರಿಖಾಭ್ಯಂತರೆ ವ್ಯಾಪಿ ಪೈಶಾಚಿಕ ಪದೆ ಕುರು ಮಾನಷೇ ತು ಪದೇ ವಾಥ ಕರ್ತವ್ಯ ಶಿವಮಂದಿರಂ" ಎಂದು ಅದೇ ಗ್ರಂಥದಲ್ಲಿ



ವಾಸ್ತುಪದ ಮಂಡಲ ವೀಥಿ

ಉಲ್ಲೇಖಿಗೊಂಡಿದೆ. ಅಂದರೆ ಅದು ಗ್ರಾಮ ಅಥವಾ ನಗರದ ಸುತ್ತಲೂ ಇರಬಹುದಾದ ಕಂದಕ (ಪಾರಿಖಾ)ವನ್ನು ಸೂಚಿಸುವುದರಿಂದ ಇಲ್ಲಿ ಕಂದಕದಿಂದ ಶಿವಾಲಯವು ನಗರದ ಒಳಭಾಗಕ್ಕೆ ಇರಬೇಕು. ಶಿವಾಲಯ ಮತ್ತು ಕಂದಕದ ಒಳ ಅಂಚಿನ ಮಧ್ಯೆ ಮೂರರಿಂದ ಮೂವತ್ತು ಕೋಲುಗಳ ಅಂತರ ಇರಬೇಕೆಂದು ಹೇಳುತ್ತಾರೆ. ಇಂತಹ ಸಂದರ್ಭದಲ್ಲಿ ಆಲಯವು ಮಾನುಷ ಪದದಲ್ಲೂ ಇರಬಹುದು ಎಂದೂ ಸೂಚಿಸಲಾಗಿದೆ. ಆಲಯ ನಿರ್ಮಾಣಕ್ಕಾಗಿಯಾಗಲಿ, ಗ್ರಾಮಾದಿ ಇತರ ಮಾನವ ವಾಸಕ್ಕಾಗಿಯಾಗಲಿ ಕೇವಲ ಶ್ರೇಷ್ಠ ವರ್ಗದ ಭೂಮಿಯನ್ನು ಮಾತ್ರವೇ ಆಯ್ಕೆ ಮಾಡಿಕೊಳ್ಳಬೇಕೆಂದೂ, ಮಧ್ಯಮ ವರ್ಗದ ಭೂಮಿಯು ಮಧ್ಯಮವಾದುದೆಂದೂ ಯಾವುದೇ ಕಾರಣಕ್ಕೂ ಕನಿಷ್ಠ ವರ್ಗದ ಭೂಮಿಯನ್ನು ಆಯ್ಕೆ ಮಾಡಿಕೊಳ್ಳಲೇಬಾರದೆಂಬುದಾಗಿ ತಿಳಿಯುತ್ತದೆ.

ದೇವಾಲಯ ನಿರ್ಮಾಣದಲ್ಲಿ ಭೂಮಿಯಲ್ಲಿಯ ಮಣ್ಣು ಬಿಳುಪು (ಶ್ವೇತ), ಕೆಂಪು (ರಕ್ತ), ಹಳದಿ (ಪೀತ) ಮತ್ತು ಕಪ್ಪು (ಕೃಷ್ಣ) ಎಂಬ ನಾಲ್ಕು ಪ್ರಕಾರದ ಬಣ್ಣಗಳಿಂದ ವರ್ಗೀಕೃತಗೊಂಡಿದ್ದು ಈ ನಾಲ್ಕು ವರ್ಣಗಳ ಭೂಮಿಗಳು ವರ್ಣಾನುಕ್ರಮದಲ್ಲಿಯೇ ಆಯಾ ವರ್ಣಗಳವರಿಗೆ ಶುಭ ಕೊಡುತ್ತವೆಂತಲೂ ಶ್ವೇತ ವರ್ಣದಭೂಮಿ ಬ್ರಾಹ್ಮಣ ವರ್ಗಕ್ಕೆ, ರಕ್ತ ವರ್ಣದ ಭೂಮಿಯು ಕ್ಷತ್ರೀಯ ವರ್ಣಕ್ಕೆ, ಪೀತ ವರ್ಣದ ಭೂಮಿ ವೈಶ್ಯ ವರ್ಣಕ್ಕೆ ಹಾಗೂ ಕೃಷ್ಣ ವರ್ಣದ ಭೂಮಿಯು ಶೂದ್ರ ವರ್ಣಕ್ಕೆ ಶುಭ ಫಲಗಳನ್ನು ಕೊಡುತ್ತವೆಯೆಂದು ಉಲ್ಲೇಖಿವಿದೆ. ಆಯಾ ವರ್ಣಕ್ಕೆ ಅನ್ವಯವಾಗುವಂತೆ ಭೂಮಿಯನ್ನು ಆಯ್ಕೆ ಮಾಡಬೇಕೆಂದೂ, ಈ ಆಯ್ಕೆ ಮಾಡಿದ ಭೂಮಿಯಲ್ಲಿ ತಮ್ಮ ಅರ್ಹತೆಗೆ ಅನುಗುಣವಾಗಿ ಮನುಷ್ಯರು ದೇವಾಲಯ ನಿರ್ಮಾಣ ಮಾಡಬೇಕೆಂದು "ಶ್ರೀ ಕಾಶ್ಯಪ ಶಿಲ್ಪಶಾಸ್ತ್ರಂ" ಗ್ರಂಥ ಹೇಳುತ್ತದೆ. ಎಲ್ಲಾ ವಿಧಗಳಿಂದಲೂ ವರ್ಣದ ದೃಷ್ಟಿಯಿಂದಲೂ ಪ್ರಶಸ್ತವಾಗಿರುವ, ದೇವತೆಗಳ ದೃಷ್ಟಿಯಿಂದಲೂ ಸಮರ್ಪಕವಾಗಿರುವ ಸೂಕ್ತವಾದ ಶಾಸ್ತ್ರ ಸಮ್ಮತ ರೀತಿಯಲ್ಲಿ ದೇವಾಲಯವನ್ನು ನಿರ್ಮಿಸಬೇಕು. ಇದಕ್ಕೆ ಮೊದಲು ಆ ಸ್ಥಳದಲ್ಲಿರಬಹುದಾದ ಭೂತ, ಪ್ರೇತ, ಪಿಶಾಚಾದಿಗಳಿಗೆ ಮತ್ತು ಗಾಳಿಗಳಿಗೆ ಶಾಸ್ತ್ರೋಕ್ತವಾಗಿ ಪೂಜಿಸಿ ಪಾಯಸಾನ್ನ ಬಲಿಯನ್ನು ಅರ್ಪಿಸಬೇಕೆಂದೂ ಈ ಗ್ರಂಥದ ಒಂದು ಶ್ಲೋಕ ಉದ್ಧರಿಸುತ್ತದೆ. (ಡಾ. ಜಿ. ಜ್ಞಾನಾನಂದ – ಶ್ರೀ ಕಾಶ್ಯಪ ಶಿಲ್ಪಶಾಸ್ತ್ರಂ ಪು.–16).

ದೇವಾಲಯ ಕಟ್ಟಡ ನಿರ್ಮಾಣಕ್ಕಾಗಿ ಭೂಪರೀಕ್ಷೆಯ ನಂತರದಲ್ಲಿ ಭೂಮಿ ಸಂಗ್ರಹಣೆ (ಸ್ವೀಕಾರ) ದಿಕ್ ಸಾಧನೆ (ಪೂರ್ವ ದಿಕ್ಕಿನ ನಿರ್ಣಯ) ಹಲಕರ್ಷಣೆ (ಉಳುಮೆ ಮಾಡುವುದು) ಅಂಕುರಾರೋಪಣದ ನಂತರದ ಹಂತವೇ ವಾಸ್ತುಪದ ವಿನ್ಯಾಸ.

**ವಾಸ್ತು ಪದಮಂಡಲ :**

ಭಾರತೀಯ ಕಟ್ಟಡ ರಚನಾ ವಿನ್ಯಾಸದ ಮೂಲ ಸ್ವರೂಪವು ಚಚ್ಚೌಕಾಕೃತಿ. ಇದನ್ನು ವಾಸ್ತು ಪುರುಷ ಮಂಡಲ ಅಥವಾ ವಾಸ್ತು ಪದ ಮಂಡಲ ಎಂದು ಕರೆಯುತ್ತಾರೆ. ಈ ಪದದಲ್ಲಿ ವಾಸ್ತು ಪುರುಷ ಪದ ಮತ್ತು ಮಂಡಲ ಈ ನಾಲ್ಕು ಅಂಶಗಳು ಬಹುಪ್ರಧಾನವಾದುವು. ವಾಸ್ತುವನ್ನು ಪುರುಷನೊಂದಿಗೆ ಸಮೀಕರಿಸಿರುವ ತತ್ವಶಾಸ್ತ್ರದ ಬಹುಮುಖ್ಯ ವಿಶೇಷವನ್ನು ಶಿಲ್ಪಶಾಸ್ತ್ರವು ಒಳಗೊಂಡಿದೆ. ಈ ಸಂಕೇತವು ದೇವಾಲಯ ಶಿಲ್ಪದಲ್ಲಿ ಇನ್ನೂ ಮಹತ್ವದ ಸ್ಥಾನವನ್ನು ಗಳಿಸಿಕೊಂಡು ಪ್ರಧಾನವಾಗಿ ವರ್ಧಿಸಿ ಹೆಚ್ಚಿನ ಗಾಂಭೀರ್ಯ ಮತ್ತು ಗಹನತೆಯನ್ನು ಪಡೆದುಕೊಳ್ಳುವ ವಿಚಾರವನ್ನು ಶಿಲ್ಪಶಾಸ್ತ್ರಜ್ಞರು ಗುರುತಿಸುತ್ತಾರೆ. ನಗರ ಅಥವಾ ಗ್ರಾಮ ಯೋಜನೆಗೆ ಸಂಪೂರ್ಣವಾಗಿರುವ ವಾಸ್ತು ಮಂಡಲವನ್ನು ರಚಿಸಬೇಕು. ಅದರಲ್ಲಿ

ದೇವಾಲಯ ಮತ್ತು ಇತರ ಸ್ಥಳಗಳನ್ನು ಗುರುತಿಸಬೇಕೆಂದು ವಾಸ್ತು ತಜ್ಞರು ಹೇಳುತ್ತಾರೆ. ಬಹು ಬಳಕೆಯಲ್ಲಿರುವ ಮೂರು ವಾಸ್ತು ಪದ ಮಂಡಲಗಳೆಂದರೆ, ಚಂಡಿತ ಅಥವಾ ಮಂಡೂಕ ಎಂದು ಕರೆಯಲ್ಪಡುವ 64 ಕೋಷ್ಟಕಗಳಿರುವ ವಾಸ್ತು ಪುರುಷ ಮಂಡಲ. ಎರಡನೆಯದು ಎಂಭತ್ತೊಂದು ಕೋಷ್ಟಕಗಳಿರುವ ಪರಮ ಶಾಯಿಕ ಮಂಡಲ ಮತ್ತು 256 ಕೋಷ್ಟಕಗಳಿರುವ ಪದ್ಮಗರ್ಭ ಮಂಡಲ ಮೂರನೆಯದು. ಒಂಭತ್ತು ಮತ್ತು ಹದಿನಾರು ಪದಗಳು (ಕೋಷ್ಟಕಗಳು) ಇರುವ ಪೀಠ ಮತ್ತು ಮಹಾಪೀಠ ವಾಸ್ತುಪದ ಮಂಡಲಗಳೂ ಕೂಡ ಯಜ್ಞಮಂಟಪ ರಚನೆ ಮತ್ತು ಪ್ರತಿಮಾಶಿಲ್ಪ ನಿರ್ಮಾಣಗಳಲ್ಲಿ ಬಳಸುತ್ತಾರೆಂದು ಡಾ. ಜಿ. ಜ್ಞಾನಾನಂದರು ಶ್ರೀ ಕಾಶ್ಯಪ ಶಿಲ್ಪಶಾಸ್ತ್ರಂದಲ್ಲಿ ಉಲ್ಲೇಖಿಸುತ್ತಾರೆ.

**ವಾಸ್ತುಪದ ಮತ್ತು ದೇವಾಲಯ ಯೋಜನೆ :**

ವಾಸ್ತುಪದ ಮಂಡಲಗಳಲ್ಲಿ ಸಂಪೂರ್ಣವಾಗಿ ವಾಸ್ತುಪುರುಷನು ಇರುತ್ತಾನೆ ಎಂದು ಎಲ್ಲಾ ಶಾಸ್ತ್ರಗಳೂ ಹೇಳುತ್ತವೆ. ಆತನ ಅಂಗಾಂಗಗಳನ್ನು ಗುರುತಿಸಿ ವಾಸ್ತುಪುರುಷನ ಮರ್ಮಸ್ಥಾನಗಳೆಂದು ವಿವರಿಸುತ್ತವೆ. ಇದರಿಂದ ದೇವತೆಗಳ ಸ್ಥಾಪನೆ, ಆವಾಹನೆ, ಇತ್ಯಾದಿಗಳು ಭೂಮಿಯ ಮೇಲೆ ನಿಖರವಾದ ಸ್ಥಾನ ನಿರ್ದೇಶನಕ್ಕಾಗಿ ಏರ್ಪಡಿಸಿರುವ ವ್ಯವಸ್ಥೆ ಎಂಬುದನ್ನು ನಾವು ತಿಳಿಯಬೇಕು. ದೇವಾಲಯ ನಿರ್ಮಾಣದ ಸಂದರ್ಭದಲ್ಲಂತೂ ವಾಸ್ತು ಶಾಸ್ತ್ರದ ಆಧಾರದಲ್ಲಿ ದೇವಾಲಯ ಯೋಜನೆಯಲ್ಲಿ ಈ ವಿಷಯಗಳಿರಬೇಕೆನ್ನುತ್ತಾರೆ ವಾಸ್ತುತಜ್ಞರು.

| **ವಾಸ್ತುಪದ** | **ಕಟ್ಟಡದ ಭಾಗ ವಿಶೇಷ** |
|---|---|
| ಗಂಧರ್ವ | ಭೋಜನ ಶಾಲೆ |
| ಅಗ್ನಿ ಅಥವಾ ರೋಗ | ಯಜ್ಞಶಾಲೆ |
| ಮಿತ್ರ ಅಥವಾ ಶೋಷ | ಕಲ್ಯಾಣಮಂಟಪ |
| ಭಾಸ್ಕರ ಅಥವಾ ಭೂಧರ | ದೇವೀ ದೇವಾಲಯ |
| ಭುಜಂಗ | ಪರಿವಾರ ದೇವತಾಲಯ |
| ಮಿತ್ರ ಮತ್ತು ದೌರಾರಿಕರ ಮಧ್ಯೆ ಅಥವಾ | ಕೋಶಾಗಾರ ಅಥವಾ ತೋಟ |
| ಬ್ರಹ್ಮ ಭಾಗದಲ್ಲಿ | ಮುಖ್ಯ ದೇವಾಲಯ |

ದೇವಾಲಯ ನಿರ್ಮಾಣದಲ್ಲಿ ಶಿಲ್ಪಿಯು ಅನುಸರಿಸುವ ಮೋಜಣಿಕ್ರಮ (Method of Survey) ವನ್ನು ವಾಸ್ತುಮಂಡಲ ವಿನ್ಯಾಸವೆಂದು ಶ್ರೀ ಕಾಶ್ಯಪಶಿಲ್ಪಶಾಸ್ತ್ರ ಹೇಳುತ್ತದೆ.

ವಾಸ್ತುಪದ ಮಂಡಲಗಳಲ್ಲಿಯೇ ವೀಥಿ ವಿಧಾನವೆಂದು ಒಂದು ಪದ್ಧತಿಯುಂಟು. ಇದರಲ್ಲಿ ಸಮಾನ ಕೇಂದ್ರವುಳ್ಳ ಹಲವು ಚೌಕಗಳನ್ನು ವಿಭಜಿಸಲಾಗುತ್ತದೆ. ಈ ಕ್ರಮದಲ್ಲಿ ಕೇಂದ್ರದಲ್ಲಿ ಬ್ರಹ್ಮ ಸ್ಥಾನವಿದ್ದು ಅದರ ಸುತ್ತಲೂ ಇರುವ ಮೊದಲ ಚೌಕಟ್ಟು ದೈವಿಕ ವೀಥಿಯಾಗಿರುತ್ತದೆ. ಅದರ ನಂತರದ ಚೌಕಟ್ಟು ಮಾನುಷವೀಥಿ ನಂತರದ್ದು ಪೈಶಾಚಿಕ ವೀಥಿ ಈ ವಿಭಾಗಗಳು ಎಲ್ಲಾ ವಾಸ್ತುಪದ ಮಂಡಲಗಳಲ್ಲೂ ಇರುತ್ತವೆ ಎಂಬ ಬಗೆಗೆ ವಿವರಗಳು ದೊರೆಯುತ್ತವೆ.

**ದೇವಾಲಯ ತಂತ್ರ :**

ಪ್ರಮುಖವಾದ ದೇವಾಲಯ ತಂತ್ರವು ದೇವಾಲಯ ನಿರ್ಮಾಣದಲ್ಲಿ ಮಹತ್ವದ ಪಾತ್ರ ವಹಿಸುತ್ತದೆ. ವಾಸ್ತು ಮಂಡಲದ ಆಧಾರದಲ್ಲಿ ದೇವಾಲಯದ ಪದ ವಿನ್ಯಾಸವನ್ನು ಸಿದ್ಧಪಡಿಸಿದ ನಂತರ ಸಾಧಾರಣವಾಗಿ ಬ್ರಹ್ಮಸ್ಥಾನದಲ್ಲಿ ಗರ್ಭಗುಡಿಯನ್ನು ರೂಪಿಸಲಾಗುತ್ತದೆ. ಇಲ್ಲಿ ಪ್ರಥಮತ: ವಾಸ್ತು ಪುರುಷನನ್ನು ಪ್ರತಿಷ್ಠಾಪಿಸಿ ಮುಂದಿನ ಕಾರ್ಯ ನಡೆಸಬೇಕು. ಒಂದೊಂದು ಸಂದರ್ಭದಲ್ಲಿ ಈ ನಿಯಮದಲ್ಲಿ ವ್ಯತ್ಯಾಸವನ್ನೂ ಕಾಣಬಹುದು. ಆಗ ಗರ್ಭಗುಡಿಯ ಸ್ಥಾನವನ್ನು ಚತುರಸ್ರವೆಂದು ಭಾವಿಸಿ ಅಲ್ಲಿ ವಾಸ್ತು ಮಂಡಲವನ್ನು ಪ್ರತಿಷ್ಠಾಪಿಸಿದ ನಂತರ ವಾಸ್ತು ಪುರುಷನನ್ನು ಪ್ರತಿಷ್ಠಾಪಿಸಲಾಗುವುದು. ಅದರೊಂದಿಗೆ ನಿಧಿ ಕಲಶದ ಸ್ಥಾಪನೆಯನ್ನು ಮಾಡಲಾಗುವುದು. ಪ್ರಾಸಾದ ಕಾರ್ಯ ಮೇಲೇರುತ್ತಿರುವಂತೆ ಹಲವು ಲೋಕಗಳನ್ನು ಚಿತ್ರೀಕರಿಸಲಾಗುವುದು. ಮೂಲಸ್ಥಾನದ ಮೇಲಣ ವಿಮಾನವು ಅದರ ಸಂಕೇತ. ದೇವಾಲಯದ ಒಂದೊಂದು ಅಂತಸ್ತು ಒಂದೊಂದು ಲೋಕವನ್ನು ಸೂಚಿಸುತ್ತವೆ. ಶಿಲ್ಪಶಾಸ್ತ್ರಾನುಸಾರವಾಗಿ ಈ ರೀತಿಯ ಹದಿನಾರು ಅಂತಸ್ತುಗಳು ಇರಬಹುದು ಎನ್ನುತ್ತಾರೆ ಶಿಲ್ಪ ಶಾಸ್ತ್ರಜ್ಞರು.

ದೇವಾಲಯಕ್ಕೂ ಚಕ್ರ (ಯಂತ್ರ)ಕ್ಕೂ ಅವಿನಾಭಾವ ಸಂಬಂಧವಿದೆ. ಚಕ್ರವೆಂದರೆ ಸಾಧಾರಣವಾಗಿ ಒಂದು ಬಿಂದು, ಎರಡು ತ್ರಿಕೋನ, ಎರಡು ಅಥವಾ ಮೂರು ವೃತ್ತಗಳು, ಅಷ್ಟ ಕಮಲ ದಳಗಳು, ಒಂದು ಎರಡು ಅಥವಾ ಮೂರು ರೇಖೆಗಳ ಚತುಷ್ಕೋಣಗಳು ಇರುತ್ತವೆ. ಇದೇ ಸಿದ್ಧಾಂತದ ಅನುಸಾರವಾಗಿಯೇ ಆಲಯ, ಸ್ತೂಪಿ, ಮೂಲ ವಿರಾಟ್ ನಿರ್ಮಿಸಲಾಗುತ್ತದೆ. ಯಂತ್ರದಂತೆಯೇ ನಾವು ದೇವಾಲಯವನ್ನು ಪರಿಶೀಲಿಸಬೇಕು. ಇದು ತಂತ್ರ ಶಾಸ್ತ್ರದ ದೃಷ್ಟಿಯೂ ಕೂಡ.

ದೇವಾಲಯದ ವಾಸ್ತು ವಿನ್ಯಾಸವನ್ನು ನಾವು ವಿಶ್ಲೇಷಿಸಿದಾಗ ಅದು ದೇಹರಚನೆಯ ಕಲ್ಪನೆಗೆ ಉದಾಹರಣೆಯಾಗುತ್ತದೆ. ಮನುಷ್ಯನ ದೇಹ ರಚನೆಯಲ್ಲಿ ಕಂಡು ಬರುವ ಅಂಗಾಂಗಗಳಂತೆಯೇ ದೇವಾಲಯದ ಭಾಗಗಳು ಸಾಮ್ಯತೆ ಕಲ್ಪಿಸುತ್ತವೆ. “ದೇಹವೇ ದೇಗುಲ”ವೆಂಬ ಈ ಕಲ್ಪನೆಯು ಇನ್ನೂ ಸ್ವಾರಸ್ಯಕರವಾದದ್ದಾಗಿದೆ. “ದೇಹ ದೇವಾಲಯ: ಪ್ರೋಕ್ತ:, ಜೀವೋ ದೇವ: ಸನಾತನ:” ಎಂಬ ವಾಕ್ಯವು ಹಲವು ಶಿಲ್ಪ ಶಾಸ್ತ್ರಗಳಲ್ಲಿ ಉದ್ಧೃತಗೊಳ್ಳುತ್ತದೆ. ಶಿಲ್ಪಶಾಸ್ತ್ರದಲ್ಲಿ ದೇವಾಲಯದ ಬೇರೆ ಬೇರೆ ಭಾಗಗಳನ್ನು ಗುರುತಿಸಲು ಬಳಸುವ ಪಾರಿಭಾಷಿಕ ಪದಗಳು ಮನುಷ್ಯನ ದೇಹದ ವಿವಿಧಾಂಗಗಳ ಹೆಸರುಗಳೇ ಆಗಿವೆ. ಉದಾಹರಣೆಗೆ ಪಾದ, ಜಾನು, ಜಂಘ, ಕುಕ್ಷಿ, ಗ್ರೀವ, ಕಂಧರ, ನಾಶಿಕಾ, ಮುಖ, ಶೀರ್ಷ ಇತ್ಯಾದಿ. ದೇವಾಲಯದ ನಕ್ಷೆಯನ್ನು ಮಲಗಿದ ಮನುಷ್ಯನಂತೆ ಕಲ್ಪಿಸಿಕೊಂಡರೆ ದೇವಾಲಯದ ಸಮಗ್ರ ಚಿತ್ರವೂ ನಮ್ಮ ಚಿತ್ತ ಭಿತ್ತಿಯಲ್ಲಿ ಮೂಡುತ್ತದೆ.

ಮನುಷ್ಯನ ಪಾದಗಳಿರುವ ಭಾಗದಲ್ಲಿ ದೇವಾಲಯದ ದ್ವಾರಗೋಪುರವಿದ್ದರೆ, ಅವನ ಜನನೇಂದ್ರಿಯ ಇರುವೆಡೆ ಧ್ವಜಸ್ತಂಭ, ಮನುಷ್ಯನ ಹೊಟ್ಟೆ ರಂಗ ಮಂಟಪ, ಹೃದಯ ಭಾಗವು ಅಂತರಾಳ ಅಥವಾ ಸುಕನಾಶಿಯೆಂತಲೂ, ಶಿರದ ಭಾಗವನ್ನು ಗರ್ಭಗೃಹಕ್ಕೆ ಹೋಲಿಸಲಾಗುತ್ತದೆ. ಭ್ರೂಮಧ್ಯ (ಹುಬ್ಬುಗಳ ಭಾಗ)ದಲ್ಲಿ ದೇವಾಲಯದ ಮೂಲ ಬೇರದ ಪೀಠವೆಂದು ಗುರುತಿಸುತ್ತಾರೆ. ಇನ್ನೊಂದು ಉದಾಹರಣೆಯಾಗಿ ಕತ್ತನ್ನು ಗರ್ಭಗೃಹಕ್ಕೆ ಹೋಲಿಸಿ ತಲೆಯನ್ನು ವಿಮಾನವೆಂತಲೂ ಹಣೆಯನ್ನು ಮುಖ ಮಂಟಪವೆಂಬುದಾಗಿ ಗುರುತಿಸಿ ಅಲ್ಲಿಂದಲೇ ದೇವರನ್ನು ಕಾಣುವ ವಿಧಾನವಿದೆ.




**ಮಲಗಿರುವ ಮನುಷ್ಯನ ಕಲ್ಪನೆಯ ದೇವಾಲಯ ಚಿತ್ರ**

ದೇವಾಲಯದ ಊರ್ಧ್ವ ರಚನೆಯನ್ನು ವಿಶ್ಲೇಷಿಸುತ್ತ ಮನುಷ್ಯನ ಹಣೆಯನ್ನು ಗರ್ಭಗೃಹವೆಂದು ಭಾವಿಸಿ ತಲೆಯ ಮೇಲ್ಭಾಗವನ್ನು ವಿಮಾನವೆಂದು ಹೆಸರಿಸಿ ಹುಬ್ಬುಗಳ ನಡುವಣ ಸ್ಥಳವನ್ನು ಮೂಲ ಬೇರದ ಪೀಠವೆಂದು ಗುರುತಿಸಿ ಇದನ್ನು ಆಜ್ಞಾಚಕ್ರವೆಂದು,ವಿಮಾನದ ಮೇಲೆ ಇರುವ ಕಳಸವನ್ನು ನೆತ್ತಿಯ ಮೇಲಿರುವ ಸಹಸ್ರಾರ ಚಕ್ರವೆಂತಲೂ, ಮೂಲ ಬೇರದ ಬುಡದಲ್ಲಿರುವಂಥ ಗರ್ಭವು ಮೂಗಿನ ತುದಿ (ನಾಶಿಕಾಗ್ರ) ಎಂಬುದಾಗಿ ಹೆಸರಿಸುತ್ತಾರೆ.

ದೇವಾಲಯ ತಂತ್ರದಲ್ಲಿ ಬಹುಮುಖ್ಯವಾದ ಶಿಖರದ ಅಮೃತ ಕಲಶ. ಇದು ದೇವಾಲಯದ ಊರ್ಧ್ವ ಭಾಗದ ಮಹತ್ವದ ಬಿಂದು ಸ್ಥಾನವಾಗಿದ್ದು ಅದು ನಾದ ಬಿಂದು ಸ್ವರೂಪದ ಸೃಷ್ಟಿಸಾಕಾರದ ಪ್ರಾರಂಭವೂ ಆಗಿದೆ. ಮೊಗ್ಗು ಅವಿಕಸಿತ ಸೃಷ್ಟಿಯ ಸಂಕೇತವಾಗಿದ್ದು ಇಲ್ಲಿಯೇ ಚಿದಾನಂದ ಸ್ವರೂಪಿಯಾದ ಭಗವಂತನು ರೂಪವನ್ನು ಪಡೆದುಕೊಳ್ಳುತ್ತಾನೆ. ಈ ಭಾವನೆಯ ಸೂಚನೆಗಾಗಿಯೇ ಇಲ್ಲಿ ಆನಂದಾಮೃತ ತುಂಬಿದ ಪಾತ್ರೆಯಲ್ಲಿ ಸುವರ್ಣಮಯಿ ಪುರುಷ ಪ್ರತಿಮೆಯನ್ನು ಸ್ಥಾಪಿಸಲಾಗುತ್ತದೆ. ವೇದಾಂತಗಳ ಪಾಲಿಗಿದು ಆನಂದಘಟ. ವೈದಿಕರಿಗೆ ಸೋಮ ಘಟ, ಶಾಕ್ತ ಮತ್ತು ವೈಷ್ಣವರಿಗೆ ಕಾಮಕಲಾ ಹಾಗೂ ಸಮರ ಘಟ, ಜೈನರಿಗೆ ಕೇವಲತ್ವ ಮತ್ತು ಬೌದ್ಧರಿಗೆ ಶೂನ್ಯತೆ ಮತ್ತು ಕರುಣೆ ತುಂಬಿದ ಘಟ. ಇಲ್ಲಿ ಬಿಂದು ಆನಂದವನ್ನು ಪಡೆದುಕೊಂಡು ವಿಸ್ತರಿಸಲಾಗುತ್ತದೆಂದು ಹೇಳಲಾಗುತ್ತದೆ. ಹೀಗೆಯೇ ದೇವಾಲಯದ ಒಂದೊಂದು ಭಾಗಗಳೂ ಮಹತ್ವಪೂರ್ಣವಾಗಿವೆ.

ಸಾಮಾನ್ಯವಾಗಿ ದೇವಾಲಯಗಳಲ್ಲಿ ಪ್ರದಕ್ಷಿಣಾಪಥದ ಕಲ್ಪನೆಯೂ ಇರುತ್ತದೆ. ಬೃಹತ್ ಮಂದಿರಗಳ ಪ್ರಾಕಾರದ ನಾಲ್ಕೂ ಕಡೆಗಳಲ್ಲಿ ಮಂಟಪಗಳಿರುತ್ತವೆ. ಅವುಗಳ ಮೇಲೆ ಆವರಣ ದೇವತೆಗಳು, ಪರಿವಾರ ದೇವತೆಗಳು ರೂಪಿತಗೊಂಡಿರುತ್ತಾರೆ. ಪ್ರದಕ್ಷಿಣಾ ಪಥದಲ್ಲಿ ಸಾಗಿ ಬರುವ ಭಕ್ತರು ದೇವರನ್ನು ಮನದುಂಬಿ ದರ್ಶನಗೈದು ಪುನೀತರಾಗಲೆಂಬ ಭಾವವೂ ಇದೆ. ಈ ರೀತಿಯಾಗಿ ಪ್ರಧಾನ ದೇವರ ಬಳಿಗೆ ಹೋದ ಭಕ್ತರು ದೈವ ಭಾವನೆಯಿಂದ ಸಮಾಧಿಸ್ತನಾಗಿ ಅಮೃತ ಅನುಭವವನ್ನು ಹೊಂದಬಲ್ಲನು.

**ದೇವಾಲಯ ಮಂಡಲಗಳು :**

ದೇವಾಲಯ ಮಂಡಲಗಳ ಬಗ್ಗೆ ಶಿಲ್ಪಶಾಸ್ತ್ರದಲ್ಲಿ ಅರವತ್ನಾಲ್ಕು ಚೌಕಗಳ ಮಂಡಲವು ದೇವಾಲಯಗಳಿಗೂ ಎಂಭತ್ತೊಂದು ಚೌಕಗಳ ಮಂಡಲವು ಮನುಷ್ಯನ ನಿವಾಸಗಳಿಗೂ ಯೋಗ್ಯವೆಂದು ಹೇಳಲಾಗುತ್ತದೆ. ಚೌಕಕ್ಕೆ ಚತುರಸ್ರವೆಂದು ಕರೆಯಲಾಗುತ್ತದೆ. ಚೌಕವನ್ನು ಸಕಳ ಎನ್ನಲಾಗುವುದು. ವಾಸ್ತುವಿಗೆ ಬಳಸಲ್ಪಡುವ ಪೂರ್ಣ ಸ್ಥಳವಿದು. ಇದಕ್ಕೆ ಇನ್ನೊಂದು ಅರ್ಥ ಸಕಳವೆಂದರೆ ಸಮಸಂಖ್ಯೆಯ ಚೌಕಗಳಿರುವಂಥದ್ದು, ನಿಷ್ಕಳವೆಂದರೆ ವಿಷಮ ಸಂಖ್ಯೆಗಳನ್ನು ಹೊಂದಿದ ಚೌಕಗಳಿರುವ ವಾಸ್ತುಮಂಡಲ ಎಂದೂ ಕರೆಯಲ್ಪಡುವುದು. ಬ್ರಹ್ಮ ಸೂತ್ರವನ್ನು ಎಷ್ಟು ಭಾಗಗಳನ್ನಾಗಿ ಮಾಡಿದರೆ ಅದಕ್ಕನುಸಾರವಾಗಿ ವಾಸ್ತುಮಂಡಲ ರೂಪುಗೊಳ್ಳುವುದು. ಎಂಟು ಭಾಗಮಾಡಿದರೆ ಅದು ಅರವತ್ನಾಲ್ಕು ಚೌಕಗಳಿರುವ ವಾಸ್ತುಮಂಡಲ. ಒಂಭತ್ತು ಭಾಗ ಮಾಡಿದರೆ ಅದು ಎಂಭತ್ತೊಂದು ಚೌಕಗಳನ್ನು ಹೊಂದಿದ ವಾಸ್ತುಮಂಡಲ. ಇಲ್ಲಿ ವಾಸ್ತು ಮಂಡಲ ಸ್ಥಳವು ಸಣ್ಣ ಭೂಮಿಯಾಗಿರಬಹುದು ಅಥವಾ ವಿಶಾಲ ನಗರ ನಿರ್ಮಾಣ ಪ್ರದೇಶವಾಗಿರಬಹುದು. ಚತುರಸ್ರಗಳ ನೆರವಿನಿಂದ ಶಿಲ್ಪಿಯಾದವನು ಭೂಮಿಯನ್ನು ಅಳೆಯುತ್ತಾನೆ. ಭೂಮಾಪನ, ವಿಭಜನೆ ಮತ್ತು ದೇವತೆಗಳ ಆವಾಹನೆಯ ಮೂಲಕ ಸ್ಥಳಗಳನ್ನು ನಿಖರವಾಗಿ ಗುರುತಿಸುವ ಪದ್ಧತಿ ಎಂಬುದು ಸ್ಪಷ್ಟ. (ಡಾ. ಜಿ. ಜ್ಞಾನಾನಂದ. ವಾಸ್ತು ಪುರುಷ ನೆಲೆ ಹಿನ್ನೆಲೆ, ಪುಟ 65).

**ಮಂಡಲ ವಿಧಗಳು :**

ದೇವಾಲಯಗಳನ್ನು ಮನುಷ್ಯ ದೇಹದಂತೆಯೇ ಶಕ್ತಿಗಳ ಒಂದು ವ್ಯೂಹವೆಂದು ಭಾವಿಸುವುದಿದೆ. ಶಕ್ತಿಗಳ ವ್ಯವಸ್ಥೆಯೇ ಮಂಡಲಗಳು. ಮನುಷ್ಯ ದೇಹ ಸಂಚರಿಸುವ ಮಂಡಲವಾಗಿದೆ. ದೇಗುಲಗಳು ಅಚಲ ಮಂಡಲವೆಂದೇ ಭಾವಿಸಲಾಗುತ್ತದೆ. ತಂತ್ರದಲ್ಲಿ ಮನುಷ್ಯ ದೇಹದ ಮಂಡಲ ಮುಖ್ಯವಾದರೆ ಆಗಮದಲ್ಲಿ ದೈವೀಶಕ್ತಿಗಳ ಮಂಡಲವು ಮುಖ್ಯವಾಗುತ್ತದೆ. ದೇವಸ್ಥಾನಗಳ ವಾಸ್ತುಶಿಲ್ಪಕ್ಕೆ ಮಂಡಲವೇ ಮೂಲಭೂತವಾದುದೆಂಬ ನಂಬಿಕೆಯಿದೆ. ಈ ಮಂಡಲಗಳ ಹೊರಗಣ ನಾಲ್ಕು ಬಾಹುಗಳೂ ಮುಖ್ಯ ದಿಕ್ಕುಗಳನ್ನು ಪ್ರತಿನಿಧಿಸಿದರೆ ನಾಲ್ಕು ಮೂಲೆಗಳೂ ನಾಲ್ಕು ದಿಕ್ಕುಗಳನ್ನು ಸೂಚಿಸುತ್ತವೆ. ವಿಶ್ವಕರ್ಮ ಮಂಡಲದ ಎಂಟು ದಿಕ್ಕುಗಳಿಗೂ ಎಂಟು ಅಭಿಮಾನಿ ದೇವತೆಗಳು ಇದ್ದಾರೆ. ಒಳ ವೃತ್ತವು ಸೃಷ್ಟಿಗೆ ಕಾರಣವಾದ ಬ್ರಹ್ಮನನ್ನು ಸಂಕೇತಿಸಿದರೆ ಅಷ್ಟ ದಿಕ್ಪಾಲರಿಂದ ಕೂಡಿದ ಬ್ರಹ್ಮನಿರುವ ಮಂಡಲವು ವಿಶ್ವದ ಸಂಕೇತ. ಈ ವಿಶ್ವಕರ್ಮನೇ ಸಾಂಪ್ರದಾಯಿಕವಾದ ಶಿಲ್ಪ, ವಾಸ್ತು, ರೇಖಾಚಿತ್ರ, ವರ್ಣಚಿತ್ರ ಎಲ್ಲದರ ಉಗಮವೂ ಹೌದು. ನಮ್ಮ ದೇಶದಲ್ಲಿ ತುಂಬ ಪ್ರಾಚೀನ ದೇವಾಲಯಗಳ ನಿರ್ಮಾಣಕಾರ್ಯವು ವಿಶ್ವಕರ್ಮನಿಂದಲೇ ನಡೆದಿರುವ ನಂಬಿಕೆ, ಆಧಾರಗಳಿವೆ.




**ಜ್ಯಾಮಿತಿಯ ರೂಪ ನಾಮಗಳು**

**ಗುಡಿಯೊಂದು ಮಂಡಲ :**

"ವಾಸ್ತುಮಂಡಲದಲ್ಲಿ ಬ್ರಹ್ಮಸ್ಥಾನವನ್ನು ಪ್ರಮುಖವಾದದ್ದೆಂದು ಗುರುತಿಸಲಾಗುತ್ತದೆ. ದೇವಾಲಯದಲ್ಲಿ ಗರ್ಭಗೃಹವೇ ಬ್ರಹ್ಮಸ್ಥಾನ. ಚಚ್ಚೌಕಾಕಾರದ ಮಧ್ಯದಲ್ಲಿಯ ಬಿಂದು ಆರ್ಚಾ ಮೂರ್ತಿ ಇರುವ ಸ್ಥಳ. ಇದೇ ಬಿಂದುವನ್ನು ಕಟ್ಟಡ ವಿನ್ಯಾಸದಲ್ಲಿ ಮೇಲೆತ್ತಿ ಶಿಖರದ ಮೇಲಿರುವ ಸ್ತೂಪಿಯಲ್ಲಿ ಪ್ರತಿಬಿಂಬಿಸುತ್ತಾರೆ. ದೇವಾಲಯ ಮಂಡಲದ ನಡುವಣ ಸ್ಥಾನವಾದ ಗರ್ಭಗೃಹವು ದೈವೀ ಶಕ್ತಿಯ ಕೇಂದ್ರವಾಗಿದ್ದು, ಇಡೀ ದೇವಾಲಯದ ಪ್ರಮುಖ ಭಾಗವೂ ಹೌದು. ಗರ್ಭಗುಡಿಯ ವಿಸ್ತರಣವು ಮುಖ್ಯ ಮಂಟಪ, ರಂಗಮಂಟಪ, ಆವರಣ ಮೊದಲಾಗಿ ಮೂಲಭೂತವಾದ ಮಂಡಲದಿಂದ ಹೊರಹೊಮ್ಮುವುದು. ಪ್ರಾಚೀನ ದೇವಾಲಯಗಳ ವಾಸ್ತು ವಿನ್ಯಾಸವನ್ನು ಪರಿಶೀಲಿಸಿದರೆ, ಅವೆಲ್ಲ ಮಂಡಲ ಕಲ್ಪನೆಯ ರೂಪಾಂತರಗಳೆ ಎಂಬುದು ಸ್ಪಷ್ಟವಾಗುತ್ತದೆ. ಭಕ್ತನು ದೇವಾಲಯದಲ್ಲಿ ಪ್ರವೇಶ ಮಾಡುವುದೆಂದರೆ ಮಂಡಲದೊಳಗೆ ಹೊಕ್ಕಂತೆ. ಶಕ್ತಿ ಕ್ಷೇತ್ರದಲ್ಲಿ ಪಾಲ್ಗೊಂಡಂತೆ". (ಪ್ರೊ. ಎಸ್.ಕೆ. ರಾಮಚಂದ್ರರಾವ್/ಭಾರತದ ದೇವಾಲಯ ನೆಲೆ, ಹಿನ್ನೆಲೆ, ಪುಟ – 153, 154).

ಭಕ್ತನು ದೇವಾಲಯದ ಮಹಾದ್ವಾರದಲ್ಲಿ ತಲೆಬಾಗಿ ಆ ಮಧ್ಯದಲ್ಲಿಯ ಪದ್ಮ ಮಂಡಲ ತಲುಪಿ ಹೊಸಿಲನ್ನು ದಾಟಿ ದೇವಾಲಯದ ಆವರಣವನ್ನು ಪ್ರವೇಶಿಸುತ್ತಾನೆ. ಧ್ವಜಸ್ತಂಭ ಹಾಗೂ ಬಲಿಪೀಠವನ್ನು ತಲುಪುವ ತನಕವೂ ಅವನು ಜಾಗೃತಾವಸ್ಥೆಯಲ್ಲಿದ್ದು ನಂತರದಲ್ಲಿಯ ದೇವಾಲಯ ಭಾಗಗಳಿಗೆ ಹೋದಾಗ ಸ್ವಪ್ನಾವಸ್ಥೆಗೆ ಜಾರುತ್ತಾನೆ. ಮುಖಮಂಟಪದಲ್ಲಿ ಸುಷುಪ್ತಿ ಅವಸ್ಥೆಯಲ್ಲೂ, ಗರ್ಭಗೃಹದಲ್ಲಿಯ ಆರ್ಚಾ ಮೂರ್ತಿಯನ್ನು ಕಾಣುವಾಗ ಶಾಂತೋದಿತ ಸ್ಥಿತಿ ತಲುಪುತ್ತಾನೆಂದು ಆ ಆರ್ಚಾ ಮೂರ್ತಿಯ ರೂಪವು ಮನಸ್ಸಿನಲ್ಲಿ ನೆಟ್ಟು ಭಕ್ತನು ಅದರಲ್ಲಿ ತನ್ನನ್ನು ತಾನು ಮರೆತಾಗ 'ಶಾಂತಿ'ಯ ಮಳೆ ಅವನನ್ನು ನೆನೆಸುತ್ತದೆ ಎಂದು ಪ್ರೊ. ಎಸ್.ಕೆ.ರಾಮಚಂದ್ರರಾವ್ ಹೇಳುತ್ತಾರೆ. ಹಾಗೆಯೇ ಮುಂದುವರೆದು 'ಗರ್ಭಗುಡಿಯ ಒಳಭಾಗವು ಸರಳವಾಗಿರಬೇಕೆಂದೂ, ಅಲ್ಲಿ ಯಾವುದೇ ಅಲಂಕರಣವೂ ಆಡಂಬರವೂ ಇರುವ ಹಾಗಿಲ್ಲವೆಂದೂ ಎಣ್ಣೆ ದೀಪಗಳಷ್ಟೇ ಉರಿಯಬೇಕೆಂದು ತಿಳಿಸುತ್ತಾರೆ. ವೈಷ್ಣವಾಗಮಗಳಲ್ಲಿ ಮಂಡಲಕ್ಕೆ

ಇನ್ನೊಂದು ಸಾಂಕೇತಿಕ ವಿವರವನ್ನು ಕಾಣಿಸುತ್ತ ಗರ್ಭಗೃಹವು ದೈವೀ ಶಕ್ತಿಯ ಆರ್ಚಾ ಸ್ವರೂಪವನ್ನು ಪ್ರತಿನಿಧಿಸುತ್ತದೆಯೆಂತಲೂ ಅದರೊಳಗಿರುವ ವಿಗ್ರಹವು 'ಅಂತರ್ಯಾಮಿ'ಯಾಗಿದ್ದು ಪ್ರತಿಯೊಂದು ಪ್ರಾಣಿಯಲ್ಲೂ ಹೃದಯದೊಳಗೆ ಅಡಗಿರುವ ದೈವ ಸಾನಿಧ್ಯವೆಂದು ಪ್ರೊ. ರಾಮಚಂದ್ರರಾಯರು ವಿವರಣೆ ನೀಡುತ್ತಾರೆ. ಹೀಗೆ ದೇವಾಲಯವೆಂಬುದು ಮಂಡಲದ ಹರವು, ದೇವಾಲಯದ ಸಾಂಕೇತಿಕ ತಾತ್ಪರ್ಯ ಅಡಕಗೊಂಡಿರುವುದು ಮಂಡಲದ ಕಲ್ಪನೆಯಲ್ಲಿಯೇ ಎಂಬ ಮಾತು ಆ ಚಂದ್ರಾರ್ಕ್ಯ ಸ್ತುತ್ಯವಾದದ್ದು.

# 3 ದೇವಾಲಯಗಳ ಪ್ರಕಾರ

"ವಾಸ್ತುಮಂಡಲದಲ್ಲಿ ಮಧ್ಯದ ಭಾಗ ಬ್ರಹ್ಮಸ್ಥಾನವು ಬಹಳ ಮುಖ್ಯವಾದದ್ದು. ಈ ವಾಸ್ತುಮಂಡಲದ ರೂಪವು ಚೌಕ, ವೃತ್ತ, ಚತುರ್ಭುಜ ಮುಂತಾದ ಆಕೃತಿಗಳಾಗಿ ಬೆಳೆಯುತ್ತವೆಂಬ ಸೂಚನೆಯು ಇದೆ. ಒಂದು ರೀತಿಯಲ್ಲಿ ಇದು ವಿಶ್ವವನ್ನೇ ಸಂಕೇತಿಸುವ ಕಲ್ಪನೆ. ಮಂಡಲದ ಮಧ್ಯಸ್ಥಾನ ಗರ್ಭ, ಮಂಟಪ ಆವರಣಾದಿ ಅಂಗಗಳು. ಹೀಗೆ ವಾಸ್ತು ಮಂಡಲದ ಮೇಲೆ ರೂಪುಗೊಳ್ಳುವ ದೇವಾಲಯ ವಿಶ್ವ ಪುರುಷನನ್ನು ಸಂಕೇತಪಡಿಸುತ್ತದೆ. (ಡಾ. ಜಿ.ಜ್ಞಾನಾನಂದ, ವಾಸ್ತುಪುರುಷ ನೆಲೆ, ಹಿನ್ನೆಲೆ, ಪುಟ – 67).

ದೇವಾಲಯವನ್ನು ವಿಶ್ವದ ಸಂಕ್ಷಿಪ್ತ ರೂಪವೆಂದೂ ಹೇಳಲಾಗುತ್ತದೆ. ಇದರಲ್ಲಿ ಸೃಷ್ಟಿಯ ಮೂಲ ತತ್ವಗಳು ಒಳಗೊಂಡಿರುತ್ತವೆ. ಪ್ರತಿ ತತ್ವಕ್ಕೂ ಜ್ಯಾಮಿತಿಯ ರೂಪವೊಂದಿದ್ದು, ಈ ಆಧಾರದಲ್ಲಿ ಬೇರೆ ಬೇರೆ ರೀತಿಯ ವರ್ಗೀಕರಣವಿದೆ. ಪ್ರಥಮದ್ದಾದ ಪೃಥ್ವಿ ತತ್ವವು ಚತುರಸ್ರವಾಗಿದ್ದರೆ, ಜಲತತ್ವಕ್ಕೆ ಉದಾಹರಣೆ ಅರ್ಧ ಚಂದ್ರಾಕೃತಿ. ಅಗ್ನಿತತ್ವ ಉರ್ಧ್ವಮುಖಿ ತ್ರಿಕೋನ, ವಾಯುತತ್ವಕ್ಕೆ ಷಟ್ಕೋನಾಕೃತಿ, ಊರ್ಧ್ವ ಮತ್ತು ಅಧೋಮುಖಗಳ ಎರಡು ತ್ರಿಕೋನಗಳ ಸೇರ್ಪಡೆಯನ್ನು ನಕ್ಷತ್ರಾಕಾರದ ಹೋಲಿಕೆ, ಆಕಾಶತತ್ವವು ವೃತ್ತಾಕಾರದ ಉದಾಹರಣೆಯಾಗಿದ್ದ ಬಗೆಗೆ ಗುರುತಿಸಲಾಗಿದೆ. ಇವನ್ನೇ ಕ್ರಮವಾಗಿ ಜ್ಞಾನ, ರಾಜಸ, ತಾಮಸ, ಕ್ರಿಯಾ ಮತ್ತು ಸತ್ವಗುಣಗಳೆಂದೂ ಪ್ರತಿನಿಧಿಸುತ್ತವೆ. ದೇವಾಲಯದ ಎಲ್ಲ ಭಾಗಗಳು ಈ ಆಕೃತಿಯನ್ನು ಪಡೆದುಕೊಂಡಿರುತ್ತವೆ ಎಂದು ಡಾ. ಜ್ಞಾನಾನಂದ ಉಲ್ಲೇಖಿಸುತ್ತಾರೆ.

ಯೋಗ ತತ್ವೋಪನಿಷತ್ ಗ್ರಂಥದಲ್ಲಿ ಪಂಚ ಭೂತಗಳಲ್ಲಿ ದೇಹದ ಪಂಚ ಅಂಗಗಳಿಗೂ ಉಪಮೆಯಂತೆ ಗುರುತಿಸಲಾಗಿದೆ. ಪಾದದಿಂದ ಮೊಣಕಾಲಿನತನಕ ಪೃಥ್ವಿ ತತ್ವ, ಮೊಣಕಾಲಿನಿಂದ ಮೂಲಾಧಾರದವರೆಗೆ ಜಲತತ್ವ, ಮೂಲಾಧಾರದಿಂದ ಹೃದಯದ ತನಕ ಅಗ್ನಿ ತತ್ವ, ಹೃದಯದಿಂದ ಭ್ರೂ ಮಧ್ಯದವರೆಗೆ ವಾಯುತತ್ವ ಭ್ರೂಮಧ್ಯದಿಂದ ಸಹಸ್ರಾರವರೆಗೆ ಆಕಾಶ ತತ್ವಕ್ಕೆ ಹೋಲಿಕೆ ಮಾಡಿ ಮಾನವದೇಹಕ್ಕೆ ಉಪಮೆ ಕಲ್ಪಿಸಲಾಗಿದೆ.

ವಾಸ್ತು ಮಂಡಲದಲ್ಲಿ ವಿವಿಧ ರೂಪಗಳನ್ನು ದೇವಾಲಯ ಕುರಿತಂತೆ ವಿವರಗಳಿವೆ ಎಂದು ಅಗ್ನಿಪುರಾಣ ಮತ್ತು ಕಾಮಿಕಾಗಮಗಳ ಉಲ್ಲೇಖಗಳಿವೆ. ಅವುಗಳಲ್ಲಿ ವೈರಾಜ–ಚತುಷ್ಕೋಣ ಅಥವಾ ಚೌಕದಲ್ಲಿ ಒಂಭತ್ತು ಪ್ರಕಾರದ ದೇವಾಲಯಗಳು. ಆಯತನ ಆಥವಾ ಚತುರ್ಭುಜಾಕೃತಿಯ ಒಂಭತ್ತು ದೇವಾಲಯಗಳನ್ನು ಪುಷ್ಪಕವೆಂತಲೂ, ಕೈಲಾಸ ಪ್ರಕಾರದ ದೇವಾಲಯಗಳಲ್ಲಿ ವೃತ್ತಾಕಾರಕ್ಕೆ ಉದಾಹರಿಸಿ ಅಲ್ಲೂ ಒಂಭತ್ತು ದೇವಾಲಯ ಪ್ರಕಾರಗಳನ್ನು ಮಣಿಕ ಭಾಗದಲ್ಲಿ ವೃತ್ತಾಕಾರದ ಉದಾಹರಣೆಯಾಗಿ ಒಂಭತ್ತು ದೇವಾಲಯಗಳಿದ್ದರೆ ತ್ರಿವಿಷ್ಟದ ಪ್ರಕಾರವನ್ನು ಅಷ್ಟಕೋನವಾಗಿ ಗುರುತಿಸಿ ಅದರಲ್ಲೂ ಸಹ

ಒಂಭತ್ತು ದೇವಾಲಯಗಳಿವೆ ಎಂದು ಹೇಳುತ್ತಾ ಈ ನಲವತ್ತೈದು ವಿಭಾಗಳನ್ನೊಳಗೊಂಡಂತೆ ಮೂರು ಸಾಂಪ್ರದಾಯಿಕ ದೇವಾಲಯಗಳಿವೆ ಎಂದು ಕಾಶ್ಯಪ ಶಿಲ್ಪ, ಮಾನಸಾರ, ಮಯಮತ, ಸುಪ್ರಬೇಧ, ಕಾಮಿಕಾಗಮಗಳ ಉಲ್ಲೇಖವಿದೆಯೆಂದು ಡಾ. ಜಿ. ಜ್ಞಾನಾನಂದ ಹೇಳುತ್ತಾರೆ. ಈ ಸಂಪ್ರದಾಯಗಳೇ 1) ನಾಗರ 2) ದ್ರಾವಿಡ 3) ವೇಸರ ಶೈಲಿಗಳು.

1) ನಾಗರ ಶೈಲಿಯಲ್ಲಿ ರೂಪುಗೊಂಡ ದೇವಾಲಯಗಳು ವಿಷ್ಣು ಸಂಪ್ರದಾಯ ದೇವಾಲಯಗಳಾಗಿದ್ದು, ಇವು ಚತುರಸ್ರ ಅಥವಾ ಆಯತಗಳಾಗಿರುತ್ತವೆ.

2) ದ್ರಾವಿಡ ಶೈಲಿಯಲ್ಲಿ ನಿರ್ಮಾಣಗೊಂಡ ದೇವಾಲಯಗಳು ಬ್ರಹ್ಮ ಸಂಪ್ರದಾಯದಲ್ಲಿಯ ಆಲಯಗಳಾಗಿದ್ದು, ಇವು ಅಷ್ಟಕೋನಾಕೃತಿ (ಆಷ್ಟಸ್ರ) ಷಡಸ್ರ ಅಥವಾ ಅದರಿಂದ ರೂಪಿತವಾದ ಇತರ ಆಯತಗಳಾಗಿರುತ್ತವೆ.

3) ವೇಸರ ಶೈಲಿಯ ದೇವಾಲಯಗಳು ರುದ್ರ ಸಂಪ್ರದಾಯದ ದೇಗುಲಗಳಾಗಿದ್ದು, ವಿಗತ ಅಸ್ರ (ಕೋನಗಳಲ್ಲದೆ ಇರುವ) ಎಂಬುದನ್ನು ವ್ಯಸರ ಆಲಯಗಳೆಂಬುದಾಗಿವೆ. ಇದರ ಅಪಭ್ರಂಶ ರೂಪವೇ ವೇಸರ. ಈ ದೇವಾಲಯಗಳು ವೃತ್ತಾಕಾರವಾಗಿದ್ದು ವೃತ್ತಾಯತ ಅಥವಾ ದ್ವ್ಯಾಸರ ವೃತ್ತಗಳಲ್ಲಿರುತ್ತವೆ. ಈ ಎಲ್ಲ ಪ್ರಕಾರದ ದೇವಾಲಯಗಳು ಜ್ಯಾಮಿತಿ ರೂಪಗಳನ್ನನುಸರಿದವು ಎಂಬುದು ಸ್ಪಷ್ಟ.

ದೇವಾಲಯದ ಎಲ್ಲ ಪ್ರಕಾರಗಳೂ ವಾಸ್ತು ಮಂಡಲವು ನೀಡುವ ಪದವಿನ್ಯಾಸದ ಆಧಾರದ ಮೇಲೆ ಭೂಮಿಯ ಮೇಲಿನ ಕಟ್ಟಡವೂ ಕೂಡ ರೂಪಿತಗೊಳ್ಳುತ್ತದೆ. ಸಮತಲ ಕ್ಷೇತ್ರದಲ್ಲಿ ಗರ್ಭಗೃಹ, ಅದರ ಸುತ್ತಲೂ ಪ್ರದಕ್ಷಿಣಾ ಪಥ, ಅಂತರಾಳ, ಅರ್ಧ ಮಂಟಪ, ನವರಂಗ, ಮುಖ ಮಂಟಪ, ಆವರಣಗಳು, ದ್ವಾರ ಶಾಲೆಗಳು ಇದ್ದರೆ ಲಂಬ ರೇಖೆಯಲ್ಲಿ ಅಧಿಷ್ಠಾನ (ಬುನಾದಿ) ಭಿತ್ತಿ ಸ್ತಂಭವರ್ಗ (ಗೋಡೆ ಮತ್ತು ಕಂಬಗಳು) ಪ್ರಸ್ತಾರ, ಕಂಠ ಶಿಖರ, ಸ್ತೂಪಿ ಮುಂತಾದವು. ಇವಕ್ಕೂ ಕೂಡಾ ತಮ್ಮದೇ ಆದ ಜ್ಯಾಮಿತಿ ರೂಪಗಳನ್ನು ಇವುಗಳ ಸಂಬಂಧ ವಾಸ್ತು ಮಂಡಲದೊಂದಿಗೆ ಇರುತ್ತದೆ. (ಪ್ರೊ. ಎಸ್.ಕೆ.ರಾಮಚಂದ್ರರಾವ್)

## ವಿವಿಧ ರೀತಿಯ ದೇವಾಲಯಗಳು

ದೇವಾಲಯಗಳಲ್ಲಿ 'ಏಕಬೇರಾಲಯ' ದ್ವಿಕೂಟಾಚಲಗಳು, ತ್ರಿಕೂಟಾಚಲಗಳು, ಪಂಚಾಯತನ ಎಂಬ ಪ್ರಕಾರಗಳಿದ್ದು, ದೇವಾಲಯಗಳನ್ನು ಭೌಗೋಳಿಕ ಪ್ರದೇಶ, ರಚನಾ ವಿನ್ಯಾಸ, ಶಿಖರದ ಶೈಲಿ ಹೀಗೆ ವಿವಿಧ ಆಧಾರಗಳಿಂದ ಬೇರೆ ಬೇರೆ ರೀತಿಯಲ್ಲಿ ವರ್ಗೀಕರಿಸಲಾಗಿದೆ. ಕಾಮಿಕಾಗಮ, ಕಾಶ್ಯಪ ಶಿಲ್ಪಂ, ಶಿಲ್ಪರತ್ನ, ಮುಂತಾದ ಗ್ರಂಥಗಳಲ್ಲಿ ದೇವಾಲಯವನ್ನು ಭೌಗೋಳಿಕವಾಗಿ ವರ್ಗೀಕರಿಸಲಾಗಿದೆ. (ಕೂ.ಸ., ಅಪರ್ಣ, ದೇವಾಲಯ ವಾಸ್ತುಶಿಲ್ಪ ಪರಿಚಯ).

ನಮ್ಮ ದೇಶದಲ್ಲಿ ದೇವಾಲಯಗಳ ನಿರ್ಮಾಣಕಾರ್ಯವು ವೈವಿಧ್ಯ ರೀತಿಯಲ್ಲಿ ವಿಕಾಸಗೊಂಡಿದೆ. ಶಾಸ್ತ್ರ ಗ್ರಂಥಗಳು, ನಿರೂಪಿಸಿರುವ ನಿಧಿ, ನಿಷೇಧಗಳೊಂದಿಗೆ ಆಯಾ ಪ್ರದೇಶದ ಭಿನ್ನತೆ, ಪರಸ್ಪರ ಪ್ರಭಾವ, ಪ್ರಾಕೃತಿಕ ಪರಿಸರ, ಮೂಲ ಸಾಮಗ್ರಿಗಳ ಅನುಕೂಲತೆ, ಬೇರೆ ಬೇರೆ ಕಾಲದಲ್ಲಿದ್ದ ಮತಗಳು, ಜನರ ಅಭಿರುಚಿ, ರಾಜ ಮಹಾರಾಜರುಗಳು ನೀಡಿದ ಪ್ರೋತ್ಸಾಹ, ಶಿಲ್ಪಿಗಳ ಮನೋಭಿಲಾಷೆ, ಕರಕೌಶಲ್ಯ

ಇತ್ಯಾದಿಗಳ ಹಿನ್ನೆಲೆಯಲ್ಲಿ ದೇವಾಲಯಗಳು ಹಲವಾರು ಪ್ರಭೇದಗಳಲ್ಲಿ ನಿರ್ಮಾಣಗೊಂಡುದನ್ನು ನಾವು ಕಾಣುತ್ತೇವೆ. ಈ ಎಲ್ಲ ಕಾರಣಗಳಿಂದ ಆಯಾ ಪ್ರದೇಶದಲ್ಲಿಯ ದೇವಾಲಯಗಳು ಉಗಮಗೊಂಡು ವಿಕಾಸವಾಗಿರುವ ಹಲವು ಶೈಲಿಯ ದೇಗುಲಗಳು ನಮ್ಮ ದೇಶದಲ್ಲಿ ಹೇರಳವಾಗಿ ಕಾಣಸಿಗುತ್ತವೆ.

ಭಾರತೀಯ ವಾಸ್ತುಕಲೆಯ ವೈಭವವನ್ನು, ವ್ಯತ್ಯಾಸಗಳನ್ನು ಮುಖ್ಯವಾಗಿ ಎರಡು ಭಿನ್ನ ರೀತಿಯಲ್ಲಿ ವಾಸ್ತುಕಲಾ ತಜ್ಞರು ಗುರುತಿಸುತ್ತಾರೆ. ಅವುಗಳಲ್ಲಿ ಔತ್ತರೇಯ ದೇವಾಲಯ ಹಾಗೂ ದಾಕ್ಷಿಣಾತ್ಯ ದೇವಾಲಯಗಳೆಂದು ವಿಭಜಿಸಿ ಅವುಗಳ ಲಕ್ಷಣಗಳ ಬಗ್ಗೆ ವಿವರಿಸುತ್ತಾರೆ.

**ಔತ್ತರೇಯ ದೇವಾಲಯಗಳು :** ಇವು ಹೆಚ್ಚಾಗಿ ತೀರ್ಥ ಕ್ಷೇತ್ರಗಳೇ ಆಗಿದ್ದು, ಅಲ್ಲಿ "ತೀರ್ಥಕ್ಕೆ" ಮೊದಲ ಸ್ಥಾನವಿದೆ. ಉತ್ತರ ಭಾರತದಲ್ಲಿಯ ದೇವಾಲಯಗಳ ತಲವಿನ್ಯಾಸಗಳು ಚೌಕಾಕಾರದಲ್ಲಿದ್ದು ಅದೇ ರೀತಿ ಮೇಲಕ್ಕೆ ಮುಂದುವರೆಯುತ್ತವೆ. ದೇವಾಲಯ ರಚನೆ ಲಂಬ ರೇಖೆಯಲ್ಲಿರುತ್ತದೆ. ದೇವಾಲಯದ ಭಾಗಗಳನ್ನು ಪೀಠ, ಜಂಘಾ, ಶೃಂಗ, ಅಮಲಕ, ಕಲಶ, ಎಂದು ಗುರುತಿಸಲ್ಪಡುತ್ತವೆ. ಇಲ್ಲಿ ಪ್ರಸ್ತಾರವು ಪ್ರಧಾನ ಭಾಗವಾಗಿರದೇ 'ಶಿಖರ'ವೆಂಬ ಪದವು ಪೂರ್ಣ ಮೇಲ್ಕಟ್ಟಡಕ್ಕೆ ಹೆಸರಿಸಲ್ಪಡುತ್ತದೆ. ಇಲ್ಲಿನ ದೇವಾಲಯಗಳು ನಿರಂಧಾರ ಪದ್ಧತಿಯ ದೇಗುಲಗಳಾಗಿದ್ದು, ಇಲ್ಲಿ ಶುಕನಾಶಿ ಇರಲೇಬೇಕೆಂಬ ನಿಯಮವನ್ನು ಶಿಲ್ಪಿಗಳು ಉತ್ತರ ಭಾರತದ ದೇವಾಲಯಗಳಲ್ಲಿ ಕಲ್ಪಿಸಿರುತ್ತಾರೆ.

**ದಾಕ್ಷಿಣಾತ್ಯ ದೇವಾಲಯಗಳು :** ಈ ದೇವಾಲಯಗಳ ತಲವಿನ್ಯಾಸವು ಬೇರೆ ಬೇರೆ ಪ್ರಕಾರಗಳಲ್ಲಿರುತ್ತವೆ. ಇಲ್ಲಿ ನಿರ್ಮಿತಗೊಂಡಿರುವ ದೇವಾಲಯಗಳು ಸಮತಲಾಕೃತಿಯವಾಗಿದ್ದು, ತೀರ್ಥಕ್ಕೆ ಹೆಚ್ಚಿನ ಮಹತ್ವವಿರುವುದಿಲ್ಲ. ದೇವಾಲಯಗಳಿಗೆ ಆದ್ಯತೆಯಿರುತ್ತದೆ. ದಕ್ಷಿಣ ಭಾರತದ ಪ್ರತಿ ದೇವಾಲಯಗಳಲ್ಲಿ ವಾಸ್ತು ಭಾಗಗಳಾದ ಅಧಿಷ್ಠಾನ, ಭಿತ್ತಿ, ಪ್ರಸ್ತರ, ಗ್ರೀವ, ಶಿಖರ, ಸ್ತೂಪಿ ಎಂಬವುಗಳಿದ್ದು, ಇಲ್ಲಿ ನಿರಂಧಾರ ಹಾಗೂ ಸಾಂಧಾರ ದೇವಾಲಯಗಳೂ ಉಂಟು. ಪ್ರಸ್ತರವು ಒಂದು ಪ್ರಮುಖ ಭಾಗವಾಗಿಯೂ ಶಿಖರವು ಮೇಲ್ಕಟ್ಟಡದ ಒಂದು ಭಾಗವೆಂದೂ ಗುರುತಿಸಲ್ಪಡುತ್ತದೆ.

ಈ ಪ್ರಕಾರವಾಗಿ ನಿರ್ಮಾಣಗೊಂಡ ದೇವಾಲಯಗಳನ್ನು ನಮ್ಮ ದೇಶದಲ್ಲಿ ನೋಡುವಾಗ ಉತ್ತರ ಭಾರತದಲ್ಲಿ ವಾಸ್ತು ಶಿಲ್ಪಗಳನ್ನು ನಾಗರ ಶೈಲಿಯಲ್ಲಿಯೂ ದಕ್ಷಿಣ ಭಾರತದ ದೇವಾಲಯಗಳಲ್ಲಿ ದ್ರಾವಿಡ ಶೈಲಿಯಲ್ಲೂ ಎರಡೂ ಶೈಲಿಗಳ ಸಮ್ಮಿಶ್ರ ದೇಗುಲಗಳನ್ನು ವೇಸರ ಶೈಲಿಯ ದೇವಾಲಯಗಳೆಂದೂ ವರ್ಗೀಕರಿಸಲಾಗಿದೆ.

**ದೇವಾಲಯಗಳ ವರ್ಗೀಕರಣ :**

ಶಿಲ್ಪ ಗ್ರಂಥಗಳಲ್ಲಿ ದೇವಾಲಯಗಳನ್ನು ಆಯಾ ಪ್ರಾದೇಶಿಕ ಸ್ಥಿತಿ, ರಚನಾ ವಿನ್ಯಾಸ, ಶಿಖರ ಶೈಲಿ ಇವೇ ಮುಂತಾದ ಆಧಾರಗಳಲ್ಲಿ ಬೇರೆ ಬೇರೆಯಾಗಿ ವರ್ಗೀಕರಿಸಿದ್ದನ್ನು ಕಾಣುತ್ತೇವೆ. ಇವೆಲ್ಲವುಗಳನ್ನು ಶಿಲ್ಪಶಾಸ್ತ್ರಗಳಾಧಾರದಲ್ಲಿ ಗುರುತಿಸಲಾಗುತ್ತದೆ. ಈ ಲಕ್ಷಣಗಳ ಆಧಾರದಲ್ಲಿಯೇ ಹಿಮಾಲಯ ಮತ್ತು ವಿಂಧ್ಯ ಪರ್ವತಗಳ ನಡುವಿನ ಪ್ರದೇಶದಲ್ಲಿ ರಚನೆಗೊಂಡ ವಾಸ್ತುಶಿಲ್ಪಗಳನ್ನು ನಾಗರ ಮಾದರಿ ದೇಗುಲಗಳೆಂದೂ, ವಿಂಧ್ಯ ಪರ್ವತಾವಳಿಯಿಂದ ಕೃಷ್ಣಾ ನದಿ ತೀರದವರೆಗೆ ನಿರ್ಮಾಣಗೊಂಡ ದೇವಾಲಯಗಳು ವೇಸರ ಮಾದರಿ ದೇವಾಲಯಗಳೆಂದೂ, ಕೃಷ್ಣಾ ತೀರದಿಂದ ಕನ್ಯಾಕುಮಾರಿಯವರೆಗೆ ಬಳಕೆಯಲ್ಲಿರುವ ದೇವಾಲಯಗಳು ದ್ರಾವಿಡ ದೇವಾಲಯಗಳೆಂದೂ ವರ್ಗೀಕರಿಸಲಾಗುತ್ತದೆ.

"ವಿಮಾನಾರ್ಚನಕಲ್ಪ, ದೀಪ್ತಾಗಮ, ರೌರವಾಗಮ, ಮಯಮತ.... ಇವೇ ಮುಂತಾದ ಕೆಲವು ಶಿಲ್ಪ ಗ್ರಂಥಗಳಲ್ಲಿ ಉಲ್ಲೇಖಿತಗೊಂಡ ದೇವಾಲಯ ರಚನಾ ವಿನ್ಯಾಸದ ಆಧಾರದ ಮೇಲೆ ಈ ವರ್ಗೀಕರಣ ಮಾಡಲಾಗಿದೆ". ಬುಡದಿಂದ ತುದಿಯವರೆಗೂ ಚೌಕೋನವಾಗಿರುವುದು ನಾಗರ; (ಗರ್ಭಗುಡಿಯ ಮೇಲಿನ ಕಟ್ಟಡ) ಗ್ರೀವದಿಂದ ಮೇಲಕ್ಕೆ ಆರು ಅಥವಾ ಎಂಟು ಮುಖಗಳಿರುವುದು ದ್ರಾವಿಡ, ಅದೇ ವೃತ್ತಾಕಾರದಲ್ಲಿ ರೂಪುಗೊಂಡಿರುವುದು ವೇಸರವೆಂದು (ಗ್ರೀವದಿಂದ ಮೇಲೆ ವೃತ್ತಾಯತ, ಅರ್ಧವೃತ್ತ, ಗಜಪೃಷ್ಠ, ದ್ವಾಸ್ರ ವೃತ್ತ, ರೀತಿಯಲ್ಲಿರುವ ದೇವಾಲಯಗಳನ್ನೂ ವೇಸರವೆಂದು ಹೇಳಲಾಗಿದೆ). (ಕೂ.ಸ. ಅಪರ್ಣ, ದೇವಾಲಯ ವಾಸ್ತುಶಿಲ್ಪ ಪರಿಚಯ, ಪುಟ 8–9).

**ಕರ್ನಾಟಕದಲ್ಲಿ ವಾಸ್ತುಶಿಲ್ಪಗಳು :**

ವಾಸ್ತುಕಲಾ ವೈಭವದಲ್ಲಿ ನಮ್ಮ ಕರ್ನಾಟಕವು ಉನ್ನತವಾದ ಸ್ಥಾನವನ್ನು ಪಡೆದುಕೊಂಡಿದೆ. ಈ ಪ್ರದೇಶದಲ್ಲಿ ನಿರ್ಮಾಣಗೊಂಡ ಹಲವಾರು ದೇವಾಲಯಗಳು ನಮ್ಮ ನಾಡಿನ ಸಾಂಸ್ಕೃತಿಕ ಸಂಪತ್ತನ್ನು ಶ್ರೀಮಂತ ಪಡಿಸಿವೆ. ವಾಸ್ತು ಶಿಲ್ಪಕಲೆಯು ಬೆಳೆದು ಬಂದಿರುವ ಆ ಮಾರ್ಗವನ್ನು ಅವಲೋಕಿಸಬೇಕಾದರೆ ಕರ್ನಾಟಕದಲ್ಲಿನ ದೇವಾಲಯಗಳು ಮಾನದಂಡವಾಗಿರುತ್ತವೆ. ಈ ಪ್ರದೇಶದಲ್ಲಿ ದೇವಾಲಯ ವಾಸ್ತುಶಿಲ್ಪಕ್ಕೆ ಮೊದಲೆನಿಸುವ ಶಾತವಾಹನರ ಕಾಲದ ಬೌದ್ಧ ಧರ್ಮದ ಚೈತ್ಯ, ಸ್ತೂಪ, ವಿಹಾರಗಳನ್ನು ಬ್ರಹ್ಮಗಿರಿ, ಬನವಾಸಿ, ಸನ್ನತಿ, ಮುಂತಾದೆಡೆಯಲ್ಲಿರುವ ವಾಸ್ತು ರಚನೆಗಳಲ್ಲಿಕಾಣಬಹುದು. ಇಲ್ಲಿಯ ಕೆಲವು ಶಾಸನಗಳಾಧಾರದಲ್ಲಿ, ಉತ್ಖನನದಲ್ಲಿ ಭಗ್ನಾವಶೇಷಗಳಲ್ಲಿ ಆಧಾರಗಳು ಉಪಲಭ್ಯವಿದ್ದು, ಬಾದಾಮಿ, ಐಹೊಳೆ, ಪಟ್ಟದಕಲ್ಲು ಪ್ರದೇಶಗಳಲ್ಲಿ ಈ ಕಾಲದಲ್ಲಿದ್ದ ಇಟ್ಟಿಗೆಯಿಂದ ನಿರ್ಮಿಸಲಾದ ವಾಸ್ತುಶಿಲ್ಪಗಳ ಭಾಗಗಳು ದೊರಕಿವೆ. ಅವು ಕರ್ನಾಟಕ ವಾಸ್ತುಶಿಲ್ಪಗಳ ಪ್ರಾಚೀನ ನಿರ್ಮಿತಗಳಿಗೆ ಉದಾಹರಣೆಗಳಾಗಿವೆ. ಕದಂಬ, ಗಂಗರ ಕಾಲದ ಆರಂಭದ ಕಟ್ಟಡಗಳು ಹೆಚ್ಚಾಗಿ ಇಟ್ಟಿಗೆಯಿಂದ ನಿರ್ಮಿಸಲ್ಪಟ್ಟಿದ್ದು ಅವು ಹೆಚ್ಚಾಗಿ ಉಳಿದು ಬಂದಿಲ್ಲದಿರುವುದು ನಮ್ಮ ಗಮನಕ್ಕೆ ಬರುತ್ತದೆ.

**ಬಾದಾಮಿ ಚಾಲುಕ್ಯ ವಾಸ್ತುಶಿಲ್ಪಗಳು :**

ಕರ್ನಾಟಕದಲ್ಲಿ ತಮ್ಮ ಸುಂದರ ವಾಸ್ತುಶಿಲ್ಪಗಳಿಂದ ನಾಡಿನ ಹಿರಿಮೆಯನ್ನು ಮುಗಿಲೆತ್ತರಕ್ಕೇರಿಸಿದವರಲ್ಲಿ ಬಾದಾಮಿ ಚಾಲುಕ್ಯರು ಮೊದಲಿಗರಾಗಿದ್ದಾರೆ. ಅವರ ಆಡಳಿತ ಕಾಲದಲ್ಲಿ ದೇವಾಲಯಗಳ ನಿರ್ಮಾಣ ಕಾರ್ಯವು ಹುಲುಸಾಗಿ ಬೆಳೆದು ಬಂತು. ಈ ಸಂದರ್ಭದಲ್ಲಿ ರಚಿಸಿದ ದೇವಾಲಯಗಳು ಕಲ್ಲಿನಿಂದ ಕಟ್ಟಲ್ಪಟ್ಟಿದ್ದು ಒಂದೊಂದು ವಾಸ್ತುಶಿಲ್ಪಗಳು ತಮ್ಮ ಶಿಲ್ಪ ವಿಶೇಷತೆಗಳಿಂದ ಕಲಾ ರಸಿಕರ ಹೃನ್ಮನಗಳನ್ನು ಸೆಳೆದುಕೊಳ್ಳುತ್ತವೆ. ಬಾದಾಮಿ, ಐಹೊಳೆ, ಪಟ್ಟದಕಲ್ಲು ಹಾಗೂ ಮಹಾಕೂಟಗಳಲ್ಲಿರುವ ಪ್ರಾಚೀನ ನಿರ್ಮಿತಿಗಳಲ್ಲಿ ವಾಸ್ತುಶಿಲ್ಪಿಗಳು ತೋರ್ಪಡಿಸಿರುವ ವಾಸ್ತು ಪ್ರಯೋಗಗಳಲ್ಲಿ ಹಾಗೂ ಕೌಶಲ್ಯಗಳಲ್ಲಿ ಕಲೆಯ ವೈವಿಧ್ಯತೆಯ ಪರಿಚಯವಾಗಿರುತ್ತದೆ. ಬಾದಾಮಿಯ ಕಲ್ಮನೆಗಳು (ಗುಹಾಲಯಗಳು) ಶೈವ, ವೈಷ್ಣವ, ಜೈನ ಮತಗಳ ಆಧಾರದ ವಾಸ್ತುಶಿಲ್ಪಗಳಾಗಿದ್ದು, ಇವುಗಳ ನಿರ್ಮಾಣ ಕೌಶಲ್ಯತೆಯಿಂದಾಗಿ ಹೆಚ್ಚಿನ ಪ್ರಾಮುಖ್ಯತೆ ಪಡೆದುಕೊಂಡಿದೆ. ಚಾಲುಕ್ಯ ಅರಸರ ಪ್ರಥಮ ರಾಜಧಾನಿಯಾಗಿದ್ದ ಐಹೊಳೆ (ಆರ್ಯಪುರ)ಯಂತೂ ಹಲವು ವಾಸ್ತುಶಿಲ್ಪ ಪ್ರಕಾರಗಳ ಪ್ರಯೋಗಶಾಲೆಯಾಗಿ ಕಾಣುತ್ತದೆ. ಇಲ್ಲಿ ನಿರ್ಮಾಣಗೊಂಡಿರುವ ಔತ್ತರೇಯ, ದಾಕ್ಷಿಣಾತ್ಯ ಹಾಗೂ ವೇಸರ ಶೈಲಿಯ ರಚನೆಗಳು ತಮ್ಮ ವೈವಿಧ್ಯ ಕಲಾ ವೈಖರಿಯಿಂದಾಗಿ ದೇಶ ವಿದೇಶದ ಲಕ್ಷಾಂತರ ಕಲಾ ರಸಿಕರ

ಮನಗಳನ್ನು ಸೆಳೆಯುತ್ತವೆ. ಮಹಾಕೂಟದಲ್ಲಿಯ ವಾಸ್ತು ಪ್ರಯೋಗಗಳು, ವಾಸ್ತುಕಲೆಯಲ್ಲಿನ ಕಲಾ ಪ್ರಬುದ್ಧತೆಯನ್ನು ಅಭಿವ್ಯಕ್ತ ಪಡಿಸುವ ಪಟ್ಟದಕಲ್ಲಿನ ಹಲವು ವಾಸ್ತುಶಿಲ್ಪಗಳು ನಯನ ಮನೋಹರವೆನಿಸುತ್ತವೆ. ಇವು ವಾಸ್ತು ಶಿಲ್ಪ ರಚನಾಕ್ರಮದಲ್ಲಿ ವಿನೂತನ ವಿನ್ಯಾಸ ಹೊಂದಿದವು ಅಷ್ಟೇ ಅಲ್ಲ ಇಲ್ಲಿನ ದೇವಾಲಯಗಳು ವಿವಿಧ ವಾಸ್ತು ಅಂಗಗಳನ್ನು, ಶಿಖರ ವಿನ್ಯಾಸಗಳ ಪ್ರಯೋಗಗಳನ್ನು ಮೇಲ್ಕಟ್ಟಡ (Super structure)ಗಳು ರೂಪುಗೊಂಡ ವಿಶೇಷತೆಗಳನ್ನು ಹೊಂದಿರುವುದರಿಂದ ಇಲ್ಲಿನ ದೇವಾಲಯಗಳು ಪ್ರಬುದ್ಧ ಶಿಲ್ಪ ನಿರ್ಮಾಣಗಳೆನಿಸುತ್ತವೆ.

ಈ ಕಾರಣಗಳಿಂದ ದೇವಾಲಯಗಳ ರಚನೆಯ ಕುರಿತು ವಿವರವಾಗಿ ತಿಳಿಸುವಾಗ, ಆ ಭಾಗದ ಪ್ರಾದೇಶಿಕ ವೈಶಿಷ್ಟ್ಯ, ರಾಜವಂಶಗಳ ಕಾಲ, ಕಲಾ ಪ್ರಯೋಗದ ಬಗ್ಗೆ ಉಲ್ಲೇಖಿಸುವಾಗ, ಪ್ರತಿಯೊಂದು ಪ್ರದೇಶದ ದೇವಾಲಯಗಳು ತಮ್ಮದೇ ಆದ ವಿಶಿಷ್ಟತೆಗಳನ್ನು ಮೈಗೂಡಿಸಿಕೊಂಡು ಆ ಪ್ರದೇಶದಲ್ಲಿ ಆಳಿದ ಅರಸರ ಕಲಾ ಪ್ರೋತ್ಸಾಹದಿಂದ ಪ್ರಸಿದ್ಧವಾಗಿವೆ. ಈ ನಿಟ್ಟಿನಲ್ಲಿ ಬಾದಾಮಿ ಚಾಲುಕ್ಯ ರಾಜವಂಶವು ನಾಡಿನ ವಾಸ್ತುಕಲಾವೈಭವಕ್ಕೆ ಇಡೀ ದೇಶದ ವಾಸ್ತುಕಲಾಕ್ಷೇತ್ರಕ್ಕೆ ತನ್ನದೇ ಆದ ಮಹತ್ತರ ಕೊಡುಗೆ ನೀಡಿ ಅಮರ ಶಿಲ್ಪಗಳ ರಚನೆಗೆ ನಾಂದಿ ಹಾಡಿದ್ದನ್ನು ನಾವು ಯಾವ ಕಾಲಕ್ಕೂ ಮರೆಯುವಂತಿಲ್ಲ. ಚಾಲುಕ್ಯರ ಈ ಸುಂದರವಾದ ವಾಸ್ತುರಚನೆಗಳು ತಮ್ಮ ಉನ್ನತ ಕಲಾವೈಭವವನ್ನು ಆಕಾಶದೆತ್ತರಕ್ಕೇರಿಸಿರುವ ಮಾತು ಯಾವತ್ತಿಗೂ ಸುಳ್ಳಲ್ಲ.

**ದೇವಾಲಯದ ಪ್ರಮುಖ ಭಾಗಗಳು :**

ದೇವಾಲಯದ ಸ್ವರೂಪದ ಬಗ್ಗೆ ವಿವರಿಸುವಾಗ ಅದರ ಪ್ರಮುಖ ಅಂಗಗಳ ಬಗೆಗೆ ನಾವು ಪ್ರಥಮವಾಗಿ ತಿಳಿದಿರಬೇಕಾದುದು ಅವಶ್ಯಕ. ಇದರಿಂದ ದೇವಾಲಯದ ಯಾವ ಭಾಗ ಎಲ್ಲಿರುವುದು, ಯಾವುದರ ಮೇಲೆ ಇನ್ನಾವ ಭಾಗ ಹೊಂದಿಕೊಂಡಿರುವ ಬಗ್ಗೆ ನಮಗೆ ವಿವರವಾದ ಪರಿಚಯವಾಗುವುದು.

ದೇವಾಲಯ ವಾಸ್ತುಶಿಲ್ಪದಲ್ಲಿ ಎರಡು ಮುಖ್ಯ ಸೂತ್ರಗಳಿವೆ. ಅವುಗಳೇ 'ಮಾನಸೂತ್ರ' ಮತ್ತು ವಿನ್ಯಾಸಸೂತ್ರ ಇವು ದೇವಾಲಯ ನಿರ್ಮಾಣದ ಲಂಬರೇಖೆ ಹಾಗೂ ಅಕ್ಷರೇಖೆಗಳಾಗಿದ್ದು, ದೇವಾಲಯದ ಭಾಗಗಳ ಅಳತೆ ಪ್ರಮಾಣ, ಅದರ ಹೊರಚಾಚುವಿಕೆಯನ್ನು ತಿಳಿಸುತ್ತವೆ. ದೇವಾಲಯ ರಚನಾಕ್ರಮದಲ್ಲಿ ಗುರುತಿಸಲಾಗುವ ಈ "ಊರ್ಧ್ವಮುಖಕ್ರಮ" ಹಾಗೂ "ತಿರ್ಯಙ್ಮುಖ" ಕ್ರಮಗಳು ಸಮಗ್ರ ದೇವಾಲಯ ನಿರ್ಮಾಣದಲ್ಲಿ ಪ್ರಮುಖವಾದವು. ಇವುಗಳನ್ನು ವಿವರವಾಗಿ ಪರಿಚಯಿಸಬೇಕೆಂದರೆ ದೇವಾಲಯದ ಹೊರಭಾಗದಲ್ಲಿ ಕೆಳಗಿನಿಂದ ಮೇಲಕ್ಕೆ ಒಂದರ ಮೇಲೊಂದು ಭಾಗ ನಿಶ್ಚಿತ ರೀತಿಯಲ್ಲಿ ನಿರ್ಮಾಣ ಮಾಡುವ ಕ್ರಮವೇ "ಊರ್ಧ್ವಮುಖ" ವಿಧಾನವಾದರೆ ಅದೇ ರೀತಿ ಆ ದೇವಾಲಯದ ಒಳಭಾಗದಲ್ಲಿ ಗರ್ಭಗೃಹ ಮೊದಲುಗೊಂಡು ಅದರ ಮುಂದೆ ಬರುವ ಎಲ್ಲ ಮಂಟಪ ಇತ್ಯಾದಿ ಭಾಗಗಳನ್ನು ಹೊಂದಿದ ಕ್ರಮವು ತಿರ್ಯಙ್ಮುಖ ವಿಧಾನವೆಂದು ಕರೆಯಲ್ಪಡುತ್ತದೆ.

**ಊರ್ಧ್ವ ಮುಖಕ್ರಮ :**

ದೇವಾಲಯಗಳು ಊರ್ಧ್ವಮುಖ ಕ್ರಮದಲ್ಲಿ ಪ್ರಧಾನವಾಗಿ ಆರು ಭಾಗಗಳಿಂದ ಕೂಡಿರುತ್ತವೆ. ಅವೇ ಅಧಿಷ್ಠಾನ, ಭಿತ್ತಿ, ಪ್ರಸ್ತರ, ಗ್ರೀವ, ಶಿಖರ, ಸ್ತೂಪಿ. ಇವುಗಳಿಗೆ 'ಷಡ್ವರ್ಗ'ವೆಂದೂ ಕರೆಯಲಾಗುವುದು.

ಈ ಷಡ್ವರ್ಗ ದೇವಾಲಯದಲ್ಲಿ ಅಧಿಷ್ಠಾನವು ಮೊದಲ ಭಾಗವಾಗಿದೆ. (ಕೆಲವು ಸಲ ಕೆಳಗೆ ಉಪಪೀಠವೂ ಇರಬಹುದು, ಬೇರೆ ಬೇರೆ ಅಂಗಗಳು ಇರುತ್ತವೆ). ಅಧಿಷ್ಠಾನದಲ್ಲಿ ಉಪಾನ, ಜಗತಿ, ಖುರ, ಕುಂಭ, ಕುಮುದ, ಪದ್ಮ, ಕಂಪ, ಪಟ್ಟಿಕಾ, ಪ್ರತಿ ಇತ್ಯಾದಿ ಅಂಗಗಳಿರುತ್ತವೆ. ಈ ಅಧಿಷ್ಠಾನದಲ್ಲಿ ಹಲವು ಪ್ರಕಾರಗಳು ಇವೆ. ಮಂಚಕ, ಪಾದಬಂಧ, ಪ್ರತಿಬಂಧ ಎಂಬ ಮುಖ್ಯ ಪ್ರಭೇದವೂ, ಪಾದಬಂಧ, ಪ್ರತಿಬಂಧ, ಪದ್ಮಬಂಧ, ಮಂಚಬಂಧ, ಮುಂತಾದ ಉಪಪ್ರಕಾರಗಳೂ ಉಂಟೆಂದು ಕೂ.ಸ. ಅಪರ್ಣ ಅವರು ದೇವಾಲಯ ವಾಸ್ತುಶಿಲ್ಪ ಪರಿಚಯ ಗ್ರಂಥದಲ್ಲಿ ವಿವರವಾದ ಮಾಹಿತಿ ನೀಡುತ್ತಾರೆ.

ಅಧಿಷ್ಠಾನದ ಮೇಲೆಯೇ ಭಿತ್ತಿ (ಗೋಡೆ) ದೇವಾಲಯದಲ್ಲಿ ಹೊಂದಿಕೊಂಡಿರುತ್ತದೆ. ಇದು ಷಡ್ವರ್ಗ ದೇವಾಲಯದ ದ್ವಿತೀಯ ಮೆಟ್ಟಿಲು ದೇವಾಲಯದ ಭಾರ ಹೊರಲೆಂದು ಭಿತ್ತಿಯಲ್ಲಿ ನಿಶ್ಚಿತ ಅಂತರದಲ್ಲಿ ಕುಡ್ಯಸ್ತಂಭಗಳಿದ್ದು ಅವುಗಳ ಮಧ್ಯದಲ್ಲಿ ಜಾಲಕ, ತೋರಣ, ಕುಂಭಲತಾಗಳು ಇರುತ್ತವೆ. ಇವುಗಳಲ್ಲೂ ಸಹ ಬೇರೆ ಬೇರೆ ಪ್ರಕಾರಗಳಿರುತ್ತವೆ. ದೇವಾಲಯದ ಮೂರನೆಯ ಭಾಗವೇ ಪ್ರಸ್ತರ. ಇದು ಭಿತ್ತಿಯ ಸ್ತಂಭಗಳ ತುದಿಯಿಂದ ಆರಂಭವಾಗುತ್ತದೆ. ಇದರಲ್ಲಿ ಉತ್ತರ, ವಾಜನ, ವಲಭೀ, ಕಪೋತ, ಆಲಿಂಗ, ಆಂತರಿತ, ಪ್ರತೀ, ವಾಜನ ಎಂಬ ಅಂಗಗಳನ್ನು ಶಿಲ್ಪ ಶಾಸ್ತ್ರಜ್ಞರು ವಿಭಾಗಿಸಿದ್ದು, ಇವುಗಳು ದೇವಾಲಯವನ್ನು ಮಳೆಯಿಂದ ರಕ್ಷಿಸುವಂತೆ ಇರುವ ಹಾಗೆ ಕಲ್ಪಿಸಿದ ವ್ಯವಸ್ಥೆಯೆನ್ನಬಹುದು. ನಮ್ಮ ಪ್ರಾಚೀನ ಸ್ಮಾರಕಗಳಲ್ಲಿ ಈ ಪ್ರಸ್ತರದ ಎಲ್ಲ ಅಂಗಗಳೂ ಇರುವುದಿಲ್ಲವೆಂಬ ಬಗೆಗೂ ಹಲವು ಉದಾಹರಣೆಗಳಿವೆ.

ಗ್ರೀವವು ದೇವಾಲಯದ ರಚನೆಯ ನಾಲ್ಕನೇಯ ಅಂಗವಾಗಿದ್ದು, ಇದನ್ನು ಕಂಧರ, ಕಂಠವೆಂದೂ ಹೇಳುತ್ತಾರೆ. ಇದು ಪ್ರಸ್ತರ ಹಾಗೂ ಶಿಖರದ ನಡುವಿರುವ ಭಾಗ. ಇದರಲ್ಲಿ ಕೋಷ್ಠಗಳಿದ್ದು, ಅವುಗಳಲ್ಲಿ ದೇವತಾ ಶಿಲ್ಪಗಳಿರುವುದನ್ನು ಗುರುತಿಸಬಹುದು. ಇದರ ಮೇಲೆಯೇ ಹೊಂದಿಕೊಂಡ ಭಾಗವೇ ಶಿಖರ. ಇದು ಷಡ್ವರ್ಗ ದೇವಾಲಯದ ಐದನೆಯ ಅಂಗ. ಶಿಖರವು ಬೇರೆ ಬೇರೆ ಆಕಾರದಲ್ಲೂ ರಚನೆಗೊಂಡಿರುತ್ತದೆ. ಈ ಆಕಾರಕ್ಕೆ ತಕ್ಕ ಹಾಗೆ ಈ ಶಿಖರ ವಿನ್ಯಾಸಗಳೆಂದರೆ ವಿಷ್ಣುಭಂದ, ಬ್ರಹ್ಮಭಂದ, ರುದ್ರಭಂದ, ಶಾಲಾಕಾರ, ಗಜಪೃಷ್ಠಾಕಾರ, ಮೊದಲಾದ ಹೆಸರುಗಳಲ್ಲಿವೆ. ಈ ಶಿಖರಗಳು ನಾಸಿಕಗಳಿಂದ ಅಲಂಕಾರ ಹೊಂದಿದವುಗಳಾಗಿರುತ್ತವೆ. ಊರ್ಧ್ವಕ್ರಮದ ಕೊನೆಯ ದೇವಾಲಯದ ಅಂಗವೇ ಸ್ತೂಪಿ (ಕಲಶ). ಇದರಲ್ಲಿ ಘಟ, ಗಲ ಹಾಗೂ ಮುಕುಲಗಳೆಂಬ ಮೂರು ಮುಖ್ಯ ಅಂಗಗಳಿದ್ದು



ಷಡ್ವರ್ಗ ದೇವಾಲಯದ ಭಾಗಗಳು

ಕಲಶವನ್ನು ಕುಂಭವೆಂದೂ ಕರೆಯಲಾಗುತ್ತಿದೆ. ಸ್ತೂಪಿಯ ಕೆಳಭಾಗವು ಶಿಖರ ಕಟ್ಟಡದೊಳಗೆ ಸೇರಿದ್ದನ್ನು ಕಾಣಬಹುದು. ಸ್ತೂಪಿಯು ಸಾಮಾನ್ಯವಾಗಿ ದುಂಡಾಗಿರುವುದಾದರೂ ಕೆಲವು ಸಂದರ್ಭದಲ್ಲಿ ದೇವಾಲಯದ ಒಟ್ಟು ವಿನ್ಯಾಸ ಅಥವಾ ಶಿಖರದ ಆಕಾರವನ್ನನುಸರಿಸಿಯೂ ಇರಬಹುದು.

ಷಡ್ವರ್ಗ ದೇವಾಲಯಗಳಲ್ಲಿರುವ ಆರು ಅಂಗಗಳಲ್ಲಿ ಮೊದಲಿನ ಮೂರು ಭಾಗಗಳು ಕೆಳ ಕಟ್ಟಡಕ್ಕೂ (ಅಧಿಷ್ಠಾನ, ಭಿತ್ತಿ, ಪ್ರಸ್ತರ) ಇನ್ನುಳಿದ ಮೂರು ಅಂಗಗಳಾದ ಗ್ರೀವ, ಶಿಖರ, ಸ್ತೂಪಿ ಇವು ಮೇಲ್ಕಟ್ಟಡ ಎಂದು ತಿಳುವಳಿಕೆಯ ಅನುಕೂಲಕ್ಕಾಗಿ ವಿಭಜಿಸಲ್ಪಡುವುದು. ಈ ಮೇಲ್ಕಟ್ಟಡವು ದೇವಾಲಯದ ತಲ ವಿನ್ಯಾಸವನ್ನು ಅನುಸರಿಸಿ ರಚಿತವಾಗಿರುವುದು. ಈ ತಲವಿನ್ಯಾಸ ಚೌಕಾಕಾರವಾಗಿ, ವೃತ್ತಾಕಾರವಾಗಿ, ನಕ್ಷತ್ರಾಕಾರವಾಗಿಯೂ ನಿರ್ಮಾಣಗೊಂಡಿರುತ್ತದೆ.

ಕರ್ನಾಟಕದಲ್ಲಿ ನಿರ್ಮಾಣಗೊಂಡಿರುವ ವಿವಿಧ ರಾಜವಂಶಗಳ ಶಿಲ್ಪ ಸ್ಮಾರಕಗಳಲ್ಲಿ ಮೇಲ್ಕಟ್ಟಡ (Super Structure)ದಲ್ಲಿ ಬರುವ ಶಿಖರ ವಿನ್ಯಾಸಗಳಲ್ಲಿ ಕಂಡು ಬರುವ ಮಾದರಿಗಳೆಂದರೆ ಕದಂಬ ನಾಗರ (ಫಾಂಸನಾ) ಔತರೇಯ – ದ್ರಾವಿಡ, ರೇಖಾನಾಗರ, ಲತಿನ –ವಿಮಾನ ನಾಗರ, ಭೂಮಿಜ ಮತ್ತು ಲೂಪಾಕಾರ ಶಿಖರ ಶೈಲಿಗಳೆಂದು ಪ್ರಕಾರಗಳಿವೆ.

ಕದಂಬನಾಗರ (ಫಾಂಸನಾ) ಶೈಲಿಯ ಶಿಖರಗಳಿದ್ದು ಈ ಪ್ರಕಾರದ ದೇವಾಲಯಗಳಲ್ಲಿ ಅಧಿಷ್ಠಾನ, ಭಿತ್ತಿ, ಪ್ರಸ್ತರಗಳೂ ಮೇಲ್ಕಟ್ಟಡದಲ್ಲಿ ಕಂಠ, ಕಪೋತಗಳಿದ್ದು, ಹಂತ ಹಂತವಾಗಿ ಮೇಲಕ್ಕೆ ಚಿಕ್ಕದಾಗಿ ನಿರ್ಮಿತಗೊಂಡಿರುತ್ತದೆ. ಇದರಂತ್ಯದಲ್ಲಿ ಗ್ರೀವ, ಶಿಖರ ಸ್ತೂಪಿಗಳಿದ್ದು, ಇವನ್ನು ಕದಂಬನಾಗರ ಶೈಲಿ ಎಂದು ಹೇಳುತ್ತಿದ್ದುದನ್ನು ಇತ್ತೀಚೆಗೆ 'ಫಾಂಸನಾ' ಶೈಲಿ ಎಂದು ಕರೆಯಲಾಗುತ್ತದೆ.

ಔತ್ತರೇಯ ದ್ರಾವಿಡ ಶೈಲಿಯ ಶಿಖರ ವಿನ್ಯಾಸದಲ್ಲಿಯ ದೇವಾಲಯಗಳಲ್ಲಿಯ ತಲ ವಿನ್ಯಾಸವು ಭಿನ್ನ ಭಿನ್ನ ರೀತಿಯಲ್ಲಿ ನಿರ್ಮಾಣಗೊಂಡಿದ್ದು, ಮೇಲ್ಕಟ್ಟಡವು ಬಹುಮುಖವಾಗಿ ರೂಪುಗೊಂಡಿರುತ್ತದೆ. ಷಡ್ವರ್ಗ ದೇವಾಲಯಗಳಂತೆಯೇ ಈ ದೇವಾಲಯ ಪ್ರಕಾರದಲ್ಲಿಯೂ ತಲಗಳು, ಪ್ರಸ್ತರ, ಗ್ರೀವ, ಶಿಖರ, ಸ್ತೂಪಿ ಭಾಗಗಳಿದ್ದು ಮೂಲೆಯಲ್ಲಿಯ ಕೂಟಗಳು ಸ್ಪಷ್ಟವಾಗಿಯೂ, ಶಾಲಾಭಾಗದಲ್ಲಿ ಹಿಂಚಾಚು ಮುಂಚಾಚುಗಳಿರುತ್ತವೆ.

ರೇಖಾನಾಗರ ಶೈಲಿಯಲ್ಲಿ ದೇವಾಲಯದ ಮೇಲ್ಕಟ್ಟಡವನ್ನು 'ಶೃಂಗ'ವೆಂದು ಗುರುತಿಸಿದ್ದು, ಇದರಲ್ಲಿ ಕೆಳಗಿನಿಂದ ಮೇಲಕ್ಕೆ ಬಾಗಿದ ರೇಖೆಯಂತೆ ಶಿಖರವು ನಿರ್ಮಾಣಗೊಂಡಿರುತ್ತದೆ. ಇದನ್ನೇ ರೇಖಾನಾಗರ ಶಿಖರ ಶೈಲಿಯೆಂದು ಕರೆಯಲಾಗುತ್ತದೆ. ಶಿಖರದ ಮಧ್ಯದಲ್ಲಿ ನಾಲ್ಕೂ ದಿಕ್ಕುಗಳಲ್ಲಿ ಚಂದ್ರಶಾಲಾ, ಅಲಂಕಾರವಿರುವ ಲಂಬಸಾಲುಪಟ್ಟಿ, ಅಂತ್ಯದಲ್ಲಿ ಅಮಲಕ ಅದರ ಮೇಲೆ ಕಲಶವಿರುವುದನ್ನು ನಾವು ಕಾಣಬಹುದು. ಚಾಲುಕ್ಯ ವಾಸ್ತುಶಿಲ್ಪಗಳಲ್ಲಿ ಈ ಶೈಲಿಯ ಪ್ರಯೋಗ ವಿಪುಲವಾಗಿರುವುದು ಕಂಡು ಬರುತ್ತದೆ.

ವಿಮಾನನಾಗರ ಶಿಖರ ಶೈಲಿಯಲ್ಲಿ ಒಂದೇ ಶಿಖರವಿರದೇ ಹಲವು ಬಗೆಯ ಶಿಖರಗಳನ್ನು ಅಳವಡಿಸಲ್ಪಟ್ಟಿರುವುದು. ಈ ಶೈಲಿಯಲ್ಲಿ ಮಧ್ಯದಲ್ಲಿ ಎತ್ತರವಿರುವ ಶಿಖರ ಅದಕ್ಕೆ ಹೊಂದಿಕೊಂಡಂತೆ ಸುತ್ತಲೂ ಅದಕ್ಕಿಂತ ಚಿಕ್ಕ ಗಾತ್ರದ ಶಿಖರಗಳು ಇರುತ್ತವೆ. ಮಧ್ಯಶಿಖರವನ್ನು 'ಮೂಲಶೃಂಗ'ವೆಂದು ಮೂಲೆಯಲ್ಲಿರುವ ಶೃಂಗಗಳನ್ನು 'ಕರ್ಣಶೃಂಗ' ಎಂದು ಚಿಕ್ಕ ಶಿಖರಗಳನ್ನು 'ಉರುಶೃಂಗ'ಗಳೆಂದು ಹೆಸರಿಸಲಾಗುತ್ತದೆ.

ಭೂಮಿಜ ಶೈಲಿಯ ಶಿಖರಶೈಲಿಯಲ್ಲಿ ಶಿಖರವು ಕೆಳಗಿನಿಂದ ಮೇಲಕ್ಕೆ ಕಿರಿದಾಗುತ್ತ ಹೋಗುತ್ತದೆ. ಶಿಖರ ಮಧ್ಯದಲ್ಲಿ ನಾಲ್ಕು ದಿಕ್ಕುಗಳಲ್ಲಿ ನೀಳವಾದ ಪಟ್ಟಿಕೆ, ಅದರಲ್ಲಿ ಲತಾಂಕರಣವಿರುತ್ತದೆ. ಈ ಶಿಖರ ವಿನ್ಯಾಸದಲ್ಲಿ ಚೈತ್ಯದ ರಚನೆ, ಶಿಖರ ಮುಂಭಾಗದಲ್ಲಿ ಶುಕನಾಶಿಯ ಕಲ್ಪನೆಯನ್ನು ಕಾಣಬಹುದು. ಶಿಖರದಲ್ಲಿ ಸಂಯೋಜಿಸಿರುವ ಲತಾಪಟ್ಟಿಗಳ ಮಧ್ಯ ಹಂತ ಹಂತವಾಗಿ ಕಿರಿದಾಗಿರುವ ಸಣ್ಣ ಸಣ್ಣ ಶಿಖರಗಳು ಸಾಲಾಗಿದ್ದು ಇವು ಸ್ತಂಭದ ಮೇಲೆ ಕೂಟಗಳಂತೆ ಕಾಣುವುದಾದ್ದರಿಂದ ಇದನ್ನು "ಸ್ತಂಭಕೂಟ"ವೆಂದೂ ಹೆಸರಿಸಲಾಗಿದೆ. ಈ ಶೈಲಿಯನ್ನು ವಿದ್ವಾಂಸರು "ಭೂಮಿಜ ಶೈಲಿಯ ಶಿಖರ ವಿನ್ಯಾಸ"ವೆಂದು ಕರೆಯುವುದುಂಟು.

ಲುಪಿ ಶಿಖರ ಶೈಲಿಯ ದೇವಾಲಯಗಳು ಅತಿ ಹೆಚ್ಚು ಮಳೆ ಸುರಿಯುವ ಪ್ರದೇಶದಲ್ಲಿ ಕಾಣಸಿಗುತ್ತವೆ. ಈ ದೇವಾಲಯಗಳ ಭಿತ್ತಿಯ ಮೇಲೆ ಪ್ರಸ್ತರವಿರುವುದಿಲ್ಲ. ಇಳಿಜಾರಾದ ಛಾವಣಿಯಿದ್ದುದರಿಂದ ಇದಕ್ಕೆ 'ಲುಪಾ' ವಿನ್ಯಾಸವೆಂದು ಹೆಸರು. ಈ ದೇವಾಲಯದ ಶಿಖರ ವಿನ್ಯಾಸದಲ್ಲಿ ಸ್ತೂಪಿ ಇದ್ದು ಇದರ ಒಟ್ಟು ರಚನೆಯನ್ನು "ಚತುರ್ವರ್ಗ ರಚನೆ" ಎಂದು ಹೇಳುವರು. (ಕೂ.ಸ. ಅಪರ್ಣ– ದೇವಾಲಯ ವಾಸ್ತು ಶಿಲ್ಪ ಪರಿಚಯ, ಪು – 63–64).

**ತಿರ್ಯಙ್ಮುಖ ಕ್ರಮ :**

ದೇವಾಲಯ ರಚನೆಯಲ್ಲಿ ವಿವಿಧ ಭಾಗಗಳನ್ನು ಹೊಂದಿದ "ತಿರ್ಯಙ್ಮುಖ" ಕ್ರಮದಲ್ಲಿ ಪ್ರಮುಖವಾದುದೆಂದರೆ, ಗರ್ಭಗೃಹ. ಇಲ್ಲಿ ಮೂಲ ದೇವರ ಪ್ರತಿಷ್ಠಾಪನೆಯಾಗಿರುತ್ತದೆ. ಕೆಲವು ಗರ್ಭಗೃಹದ ಸುತ್ತಲೂ ಪ್ರದಕ್ಷಿಣಾ ಪಥವು ದೇವಾಲಯ ಒಳಭಾಗದಲ್ಲಿಯೇ ಕಲ್ಪಿತಗೊಂಡಿರುತ್ತದೆ. ಗರ್ಭಗೃಹದಿಂದ ಹೊರಚಾಚಿದ ಜಲ ಪ್ರಣಾಳಿ, ಗರ್ಭಗೃಹದ ನಂತರದಲ್ಲಿ ಕ್ರಮವಾಗಿ ಅಂತರಾಳ, ಸುಕನಾಶಿ (ಅರ್ಧ ಮಂಟಪ) ನವರಂಗ ಭಾಗಗಳಿರುತ್ತವೆ. ಇದಲ್ಲದೇ ಮುಖ ಮಂಟಪ, ನಂದಿ ಮಂಟಪ, ಸ್ತಂಭ ದ್ವಾರದ ಕಲ್ಪನೆಯೂ ಇರುತ್ತದೆ.



ಏಕಕೂಟಾಚಲ ದೇವಾಲಯ ತಲವಿನ್ಯಾಸ

ಗರ್ಭಗೃಹವು ದೇವಾಲಯದ ಮುಖ್ಯ ಭಾಗವಾಗಿದ್ದು, ಇದು ಯಾವ ದೇವರಿಗಾಗಿ ಕಟ್ಟಲ್ಪಟ್ಟಿರುವುದೋ ಆ ದೇವರ ಮೂಲ ಬಿಂಬವು ಅಲ್ಲಿ ಪ್ರತಿಷ್ಠಾಪನೆಗೊಂಡಿರುತ್ತದೆ. ಇದಕ್ಕೆ ದೇವತಾ ಮಂಟಪವೆಂದೂ ಸಹ ಕರೆಯಲಾಗುತ್ತದೆ. ಈ ಗರ್ಭಗೃಹವು ಸಾಮಾನ್ಯವಾಗಿ ಚೌಕಾಕಾರವಾಗಿ ಇಲ್ಲವೇ ಆಯತಾಕಾರವಾಗಿಯೂ ಇರುತ್ತದೆ. ಕೆಲವು ಗಜಪೃಷ್ಠಾಕಾರದ

ಗರ್ಭಗುಡಿಗಳೂ ಉಂಟು. ಬಹು ಹೆಚ್ಚಿನ ದೇವಾಲಯಗಳು ಪೂರ್ವಾಭಿಮುಖವಾಗಿಯೂ ಕಟ್ಟಲ್ಪಟ್ಟಿರುತ್ತವೆ. ಕೆಲವು ಇತರ ದಿಕ್ಕುಗಳಿಗೆ ಅಭಿಮುಖವಾಗಿಯೂ ನಿರ್ಮಾಣಗೊಂಡಿರುತ್ತವೆ. ಗರ್ಭಗೃಹದ ಸುತ್ತಲೂ ಇರುವ ಭಿತ್ತಿಗೆ 'ಗೃಹಪಿಂಡಿ' ಎಂತಲೂ ಕರೆಯಲಾಗುವುದು. ಈ ಗರ್ಭಗೃಹಕ್ಕೆ ಒಂದು ದ್ವಾರವಿರುವುದು. ಕೆಲವೊಮ್ಮೆ ಚತುರ್ಮುಖಮೂರ್ತಿಗಳಿದ್ದಾಗ ನಾಲ್ಕು ದಿಕ್ಕುಗಳಿಗೆ ದ್ವಾರದ ಕಲ್ಪನೆಯಿರುತ್ತದೆ. ಇಂಥ ದೇವಾಲಯಗಳಿಗೆ "ಸರ್ವತೋಭದ್ರ ದೇವಾಲಯ"ವೆಂದು ಕರೆಯಲಾಗುತ್ತದೆ. ಹಲವು ದೇವಾಲಯಗಳಲ್ಲಿ ಒಂದಕ್ಕಿಂತ ಹೆಚ್ಚು ಗರ್ಭಗೃಹಗಳಿರುತ್ತವೆ. ಒಂದು ಗರ್ಭಗೃಹದ ದೇವಾಲಯವನ್ನು ಏಕಕೂಟ ದೇವಾಲಯವೆಂದು, ಎರಡು ಗರ್ಭಗೃಹಗಳಿರುವ ದೇವಾಲಯವನ್ನು ದ್ವಿಕೂಟ ದೇವಾಲಯವೆಂತಲೂ, ಹೀಗೇ ಮೂರಿದ್ದರೆ ತ್ರಿಕೂಟಾಚಲ, ನಾಲ್ಕು ಇದ್ದರೆ ಚತುಷ್ಕೂಟಾಚಲ, ಐದು ಗರ್ಭಗೃಹದ ದೇವಾಲಯವು ಪಂಚಕೂಟಾಚಲವೆಂದೂ ಸಹ ಕರೆಯಲ್ಪಡುತ್ತದೆ.



ತ್ರಿಕೂಟ ದೇವಾಲಯದ ತಲವಿನ್ಯಾಸ

ಈ ದೇವಾಲಯಗಳಲ್ಲಿ ಪ್ರದಕ್ಷಿಣಾಪಥವಿಲ್ಲದ ದೇಗುಲಗಳನ್ನು ನಿರಂಧಾರ ದೇವಾಲಯವೆಂದೂ ಗರ್ಭಗೃಹದ ಸುತ್ತಲೂ ಪ್ರದಕ್ಷಿಣಾ ಪಥವುಳ್ಳವುಗಳು ಸಾಂಧಾರ ಪದ್ಧತಿಯ ದೇವಾಲಯಗಳೆಂದು ಕರೆಯಲ್ಪಡುತ್ತವೆ. ಗರ್ಭಗೃಹಗಳಿಗೆ ಅದರ ಭಿತ್ತಿಯಲ್ಲಿ ರಂಧ್ರಯುಕ್ತ ಮಾರ್ಗವಿದ್ದು, ಆ ಮೂಲಕ ವಿಗ್ರಹಕ್ಕೆ ಮಾಡಿದ ಅಭಿಷೇಕದ ನೀರು ಹೊರಹೋಗುವಂಥ ವ್ಯವಸ್ಥೆಯಿರುತ್ತದೆ. ಇದಕ್ಕೆ 'ಜಲಪ್ರಣಾಳಿ' ಎಂದು ಹೆಸರಿದೆ. ಇದು ಗರ್ಭಗೃಹದ ದಕ್ಷಿಣ ದಿಕ್ಕನ್ನು ಹೊರತು ಪಡಿಸಿ ಯಾವುದೇ ದಿಕ್ಕಿನಲ್ಲೂ ನಿರ್ಮಾಣಗೊಂಡಿರುವುದು. ಇದನ್ನು ವಾರಿಮಾರ್ಗ ಇಲ್ಲವೇ ಪ್ರಣಾಳವೆಂತಲೂ ಕರೆಯುತ್ತಾರೆ.

**ಅರ್ಧಮಂಟಪ :**

ಗರ್ಭಗೃಹದ ಮುಂಭಾಗದಲ್ಲಿರುವುದೇ ಅರ್ಧಮಂಟಪ. ದೇವರ ಪೂಜೆಗೆ ಬೇಕಿರುವ ಪದಾರ್ಥ, ಸಲಕರಣೆಗಳನ್ನಿಡುವಲ್ಲಿ ಈ ಸ್ಥಳದ ಉಪಯೋಗ. ಉತ್ಸವ ದೇವತೆಗಳನ್ನು ಇದೇ ಸ್ಥಳದಲ್ಲಿಡಲಾಗುತ್ತದೆ. ಈ ಅರ್ಧಮಂಟಪವು ಗರ್ಭಗೃಹದ ಗಾತ್ರಕ್ಕಿಂತ ಚಿಕ್ಕದಾಗಿರುತ್ತದೆ. ಕೆಲವು ದೇವಾಲಯಗಳಲ್ಲಿ ಗರ್ಭಗೃಹದಷ್ಟೇ ಇರಬಹುದು. ಇದು ಗರ್ಭಗೃಹದ ಮುಂಭಾಗದಲ್ಲಿ ಎರಡು ಅಥವಾ ಸಮಸಂಖ್ಯೆಯ ಸ್ತಂಭಗಳಿಂದಾದ ಮಂಟಪದಂತೆ ಕಲ್ಪಿತಗೊಂಡಿರುತ್ತದೆ. ಒಂದಕ್ಕಿಂತಲೂ ಹೆಚ್ಚಿನ ಗರ್ಭಗೃಹಗಳಿರುವ ದೇವಾಲಯಗಳಲ್ಲಿ ಈ ಅರ್ಧಮಂಟಪವು ಪ್ರತ್ಯೇಕವಾಗಿಯೂ ಇರುತ್ತದೆ. ಅರ್ಧಮಂಟಪಕ್ಕೆ ಇನ್ನೊಂದು ಹೆಸರು ಅಂತರಾಳ. ಇದಕ್ಕೆ ಮುಖಮಂಟಪವೆಂತಲೂ ಕರೆಯಲಾಗುತ್ತದೆ.

**ನವರಂಗ :**

ಅಂತರಾಳದ ಮುಂದಿರುವ ಮಂಟಪವನ್ನು 'ನವರಂಗ'ವೆಂದು ಹೆಸರಿಸಲಾಗುತ್ತದೆ. ದೇವರಲ್ಲಿ ಸಂಗೀತ, ನೃತ್ಯ, ಸೇವೆಗೈಯಲೆಂದೇ ರೂಪಿಸಲ್ಪಟ್ಟ ಈ ಭಾಗವನ್ನು ನೃತ್ಯಮಂಟಪ, ಮಹಾಮಂಟಪವೆಂದೂ ಕರೆಯಲಾಗುವುದು. ನವರಂಗವು ಚೌಕಾಕಾರದಲ್ಲಿ, ಆಯತಾಕಾರದಲ್ಲೂ ನಿರ್ಮಿತಗೊಂಡಿರುತ್ತದೆ. ಈ ನೃತ್ಯ ಮಂಟಪದ ಒಳಮಧ್ಯ ಭಾಗದಲ್ಲಿ ವೇದಿಕೆ ಪ್ರಧಾನವಾದ ನಾಲ್ಕು ಸ್ತಂಭಗಳು ಕಲ್ಪಿತಗೊಂಡಿರುತ್ತವೆ. ಈ ನೃತ್ಯ ಮಂಟಪದ ಭಿತ್ತಿಯಲ್ಲಿ ಕೋಷ್ಠಗಳ ರಚನೆಯಿರುವುದನ್ನು ನಾವು ಕಾಣಬಹುದು. ನವರಂಗದ ಸುತ್ತಲೂ ರಕ್ಷಾಕವಚದ ನಿರ್ಮಾಣವನ್ನೂ ಕೆಲವು ದೇವಾಲಯಗಳಲ್ಲಿ ಕಾಣಬಹುದು. ಇಡೀ ದೇವಾಲಯದಲ್ಲಿ ಹೆಚ್ಚು ಅಲಂಕೃತವಾಗಿರುವ ಭಾಗವೆಂದರೆ 'ನವರಂಗ'. ಇದರಲ್ಲಿ ವಿವಿಧ ರೀತಿಯಲ್ಲಿ ಅಲಂಕಾರಿತ ದ್ವಾರ, ಮಧ್ಯ ಸ್ತಂಭಗಳಿರುವುದರಿಂದ ಹಾಗೂ ಮೇಲಂಚಿನಲ್ಲಿ ಪದ್ಮ ದಳದ ಅಲಂಕರಣವಿರುವುದರಿಂದ ಇದು ಅತ್ಯಾಕರ್ಷಣೀಯವಾದ ಭಾಗವೆನ್ನಬಹುದು.

**ಮುಖಮಂಟಪ :**

ಇದು ದೇವಾಲಯದ ಮುಂಭಾಗದಲ್ಲಿರುವ ಮಂಟಪ. ನೃತ್ಯಮಂಟಪಗಳ ನಂತರದಲ್ಲಿರುವ ಭಾಗ. ಇದಕ್ಕೆ "ಅಗ್ರಮಂಟಪ" ಎಂದೂ ಕರೆಯಲಾಗುತ್ತದೆ. ಈ ಮುಖ ಮಂಟಪದಲ್ಲಿ ನಾಲ್ಕಕ್ಕಿಂತಲೂ ಅಧಿಕ ಕಂಬಗಳಿದ್ದು, ಪ್ರತ್ಯೇಕ ಅಧಿಷ್ಠಾನದ ಮೇಲೆಯೇ ನಿರ್ಮಾಣಗೊಂಡದ್ದಾಗಿರುತ್ತದೆ. ಮುಖಮಂಟಪದ ಎರಡೂ ಬದಿಯಲ್ಲಿ ರಕ್ಷಾಕವಚಗಳಿದ್ದು ಹೊರಮುಖದಲ್ಲಿ ಪುಷ್ಪಪಟ್ಟಿ ಪೂರ್ಣ ಕಳಶಗಳನ್ನು ಕೆತ್ತಿ ಸಂಯೋಜಿಸಲಾಗಿರುತ್ತದೆ.

ದೇವಾಲಯದ ರಚನೆಯಲ್ಲಿ ಅದರ ಪೂಜಾಕ್ರಮ ಹಾಗೂ ಅವಶ್ಯಕತೆಗನುಸಾರವಾಗಿ ಇತರ ಅನೇಕ ಮಂಟಪಗಳನ್ನು ನಿರ್ಮಿಸಲಾಗುತ್ತದೆ. ಅವುಗಳಲ್ಲಿ ನಂದಿ ಮಂಟಪ, ಕಲ್ಯಾಣ ಮಂಟಪ, ರಂಗ ಮಂಟಪ, ಯಾಗಶಾಲೆ, ಪಾಕಶಾಲೆ, ವಾಹನಮಂಟಪ ಇತ್ಯಾದಿಗಳ ಕಲ್ಪನೆಯೂ ಇರುತ್ತದೆ. ಈ ರೀತಿಯ ವ್ಯವಸ್ಥೆ ಕೆಲವೇ ದೇವಾಲಯಗಳಲ್ಲಿ ಮಾತ್ರವೆಂಬುದನ್ನು ನಾವು ಮರೆಯಬಾರದು. ದೇವಾಲಯದ ಕಲ್ಪನೆಯಲ್ಲಿ ಈ ಎಲ್ಲ ಅಂಗಗಳಿಂದ ಹೊಂದಿದ್ದೇ ಪರಿಪೂರ್ಣ ದೇವಾಲಯವೆನ್ನಬಹುದು.

ದೇವಾಲಯ ನಿರ್ಮಾಣ ಕ್ರಮದಲ್ಲಿ ಬಾದಾಮಿ ಚಾಲುಕ್ಯ ಶಿಲ್ಪಿಗಳು ಅನುಸರಿಸಿದ ಕ್ರಮಗಳು ಇನ್ನುಳಿದ ರಾಜವಂಶದ ಸ್ಮಾರಕಗಳಿಗೆ ಅಡಿಪಾಯ ಹಾಕಿವೆ. ದೇವಾಲಯ ನಿರ್ಮಾಣದ ಆರಂಭ ಕಾಲದಲ್ಲಿ ವಿಭಾಗಿಸಿದ ಗರ್ಭಗೃಹ, ಸಭಾಮಂಟಪ/ನವರಂಗ, ಮುಖಮಂಟಪಗಳು ಪ್ರತಿ ದೇವಾಲಯಗಳ ಮಹತ್ವದ ಭಾಗವಾಗಿರುವುದರಿಂದ ಕೆಲವು ದೇವಾಲಯಗಳ ವಿನ್ಯಾಸದಲ್ಲಿ ವೈವಿಧ್ಯ ಪ್ರಯೋಗಗಳು ನಡೆದಿರುವುದನ್ನು ನಾವು ಕಾಣುತ್ತೇವೆ. ಪ್ರದಕ್ಷಿಣಾ ಪಥ ಹಾಗೂ ಅರ್ಧಮಂಟಪವುಳ್ಳ ಐಹೊಳೆಯ ಕೆಲವು ದೇವಾಲಯಗಳನ್ನು, ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ ಪರಿವಾರಾಲಯಗಳನ್ನು ಅಲ್ಲಿ ವ್ಯಕ್ತಗೊಂಡಿರುವ ಅಲಂಕೃತ ಭಾಗಗಳನ್ನು ಸ್ಮರಿಸಿಕೊಳ್ಳಬಹುದು. ಈ ಚಾಲುಕ್ಯರ ದೇವಾಲಯ ನಿರ್ಮಾಣ ತಂತ್ರವನ್ನು ರಾಷ್ಟ್ರಕೂಟ ಹಾಗೂ ಗಂಗರ ಕಾಲದ ಶಿಲ್ಪಿಗಳು ಬಳಸಿಕೊಳ್ಳದಿದ್ದ ಕಾರಣದಿಂದ ಆ ಕಾಲದ ಸ್ಮಾರಕಗಳು ಚಾಲುಕ್ಯ ವಾಸ್ತುಶಿಲ್ಪಗಳಿಗೆ ಸಮವೆನಿಸಲಾರವು. ಗಂಗರ ಕಾಲದಲ್ಲಿ ದೇವಾಲಯಗಳು ಹೆಚ್ಚಾಗಿ ನಿರಂಧಾರ ಗರ್ಭಗೃಹ ಹಾಗೂ ತೆರೆದ ಮಂಟಪ ಕಲ್ಪನೆಯಲ್ಲಿ ನಿರ್ಮಾಣಗೊಂಡಿದ್ದರೆ ತಮ್ಮದೇ ವಿಶಿಷ್ಟ ಕಲಾಕೌಶಲ್ಯದಿಂದ ವಾಸ್ತು ಪ್ರಯೋಗಗೈದ ಕಲ್ಯಾಣ ಚಾಲುಕ್ಯರು, ಹೊಯ್ಸಳರ ಕಾಲದ ಶಿಲ್ಪಿಗಳು

ದ್ವಿಕೂಟಾಚಲ, ತ್ರಿಕೂಟಾಚಲಗಳನ್ನೇ ಹೆಚ್ಚಿನ ಸಂಖ್ಯೆಯಲ್ಲಿ ನಿರ್ಮಿಸಿ ತಮ್ಮ ಕಲಾವೈಖರಿ ಮೆರೆಸಿದ್ದಾರೆ. ಈ ಸಂದರ್ಭದಲ್ಲಿ ರಚನೆಗೊಂಡಿರುವ ಸ್ಮಾರಕಗಳಲ್ಲಿ ನಿರಂಧಾರ ಪದ್ಧತಿ, ಮುಚ್ಚಿದ ಅಂತರಾಳ, ಅಲಂಕೃತಗೊಂಡಿರುವ ಮಂಟಪಗಳು, ನವರಂಗದ ಚಿತ್ರ ಮೂರ್ತಗೊಂಡಿರುತ್ತವೆ. ಆ ನಂತರದಲ್ಲಿ ಬಂದ ವಿಜಯನಗರ ಅರಸರ ಕಾಲದಲ್ಲಿ ಅವಶ್ಯಕತೆಗೆ ತಕ್ಕಂತೆ ಹೆಚ್ಚು ವಿಶಾಲವಾಗಿರುವ, ಅಧಿಕ ಮಂಟಪಗಳಿರುವ ದೇವಾಲಯಗಳನ್ನು ನಿರ್ಮಾಣಗೈದ ಉದಾಹರಣೆಗಳು ನಮಗೆ ಉಪಲಬ್ಧವಿರುತ್ತವೆ. ಇವು ಅಲಂಕರಣ ದೃಷ್ಟಿಯಲ್ಲಿ ಸರಳ ರಚನೆಗಳೆನಿಸಿದ್ದರೂ ವಿಶಿಷ್ಟ ಮಾದರಿಯ ಸ್ತಂಭ ನಿರ್ಮಾಣದಿಂದಾಗಿ ಆಕರ್ಷಣೀಯವಾದವು ಎನಿಸುತ್ತವೆ.

ವಾಸ್ತುಶಿಲ್ಪ ಪ್ರಯೋಗಗಳಿಗೆ ಮೂಲಾಧಾರವಾಗಿ ಶಿಲ್ಪಿಗಳಿಗೆ ಪ್ರೇರಣೆ ನೀಡಿದ 'ಸಮರಾಂಗಣ ಸೂತ್ರದಾರ' ಕೃತಿಯು ಹನ್ನೊಂದನೆಯ ಶತಮಾನದಲ್ಲಿ ಧಾರಾನಗರಿಯ ಭೋಜದೇವನದ್ದೆಂದು ಎಂ.ಎಸ್. ಪ್ರಭಾಕರ, ತಮ್ಮ ದೇವಾಲಯ ವಾಸ್ತು, ಪು. 11ರಲ್ಲಿ ವಿವರಣೆ ಕೊಡುತ್ತಾರೆ. ಇದಕ್ಕೆ ಪೂರ್ವದಲ್ಲೂ ಶಿಲ್ಪಶಾಸ್ತ್ರಕ್ಕೆ ಸಂಬಂಧಿಸಿದಂತೆ ಅನೇಕ ಗ್ರಂಥಗಳು ಇದ್ದಿರುವ ಕುರಿತು ಚರ್ಚಿಸುತ್ತಾರೆ. ಅವರು ಈ ಗ್ರಂಥದಲ್ಲಿ ದೇವಾಲಯ ವಾಸ್ತು ಶೈಲಿಗಳ ಕುರಿತಂತೆ ವ್ಯವಸ್ಥಿತವಾಗಿ ವಿಂಗಡನೆ ಮಾಡಿದ್ದನ್ನು ನಾವು ವಿವರವಾಗಿ ಪರಿಚಯ ಮಾಡಿಕೊಳ್ಳಲು ಸಾಧ್ಯ. ರಾಜ್ಯದ ವಿವಿಧೆಡೆಯಲ್ಲಿ ನಿರ್ಮಾಣಗೊಂಡಿರುವ ದೇವಾಲಯಗಳ ವಾಸ್ತು ಪ್ರಕಾರಗಳು ಈಗ ನಮಗೆ ಕಂಡು ಬರುವ ಲಕ್ಷಣಗಳಿಂದ ಈ ಕೆಳಗಿನಂತೆ ವಿಭಜಿಸಿ ಗುರುತಿಸಲ್ಪಡುತ್ತದೆ.

**ದೇವಾಲಯ ವಾಸ್ತುಶೈಲಿಗಳು :**

ದೇವಾಲಯ ರಚನೆಯಲ್ಲಿ ಕಂಡು ಬರುವ ವಾಸ್ತುಶೈಲಿಗಳು ಈ ವಿಭಾಗಗಳಿಂದ ಹೊರತಾಗಿಲ್ಲ. ಔತ್ತರೇಯ ಹಾಗೂ ದಾಕ್ಷಿಣಾತ್ಯ ವಾಸ್ತು ಕಲೆಯ ವೈಭವದಲ್ಲಿರುವ ವಿಶೇಷಣಗಳ ಪ್ರಯೋಗವನ್ನು ಚಾಲುಕ್ಯ ಶಿಲ್ಪಿಗಳು ಮಾಡಿದಂತೆ ಇನ್ನಾರೂ ಮಾಡಿಲ್ಲದಿರುವುದು ಒಂದು ವಿಶೇಷ. ಕರ್ನಾಟಕದಲ್ಲಿ ಕ್ರಿ.ಶ. ಆರಂಭ ಕಾಲದಿಂದಲೂ ದೇವಾಲಯ ನಿರ್ಮಾಣಕಾರ್ಯ ನಡೆದಿರುವುದು ನಮ್ಮ ಗಮನಕ್ಕೆ ಬರುತ್ತದೆ. ಕ್ರಿ.ಶ. 130ರಲ್ಲಿಯ ಕದಂಬರ ಶಾಸನವು ದೇವಾಲಯ ರಚನೆಗೆ ಆಧಾರವನ್ನು ಕಲ್ಪಿಸುತ್ತದೆ. ನಂತರ ಬಾದಾಮಿ, ಐಹೊಳೆ, ಪಟ್ಟದಕಲ್ಲುಗಳ ಪರಿಸರದಲ್ಲಿ ನಿರ್ಮಾಣಗೊಂಡಿರುವ ವಾಸ್ತುಶಿಲ್ಪಗಳ ನಿರ್ಮಾಣದ ಪೂರ್ವದಲ್ಲಿ ಅಲ್ಲಿ ಕೆಲವು ಪ್ರಾಚೀನ ದೇವಾಲಯಗಳ ಅವಶೇಷಗಳು ಆ ಭಾಗದಲ್ಲಿ ನಡೆಸಿದ ಉತ್ಖನನದಲ್ಲಿ ಲಭಿಸಿರುವುದಕ್ಕೆ ಪುರಾವೆಗಳಿವೆ.

ದೇವಾಲಯ ವಾಸ್ತು ರಚನೆಗಳಿಗೆ ಸಂಬಂಧಿಸಿದಂತೆ ಹಲವು ವಾಸ್ತು ಶಾಸ್ತ್ರಜ್ಞರು ರಚಿಸಿದ ಗ್ರಂಥಗಳು, 'ಮತ್ಸ್ಯ ಪುರಾಣ, ಶುಕ್ರನೀತಿ, ಮಾನಸೊಲ್ಲಾಸ', "ಸಮರಾಂಗಣ ಸೂತ್ರಧಾರ", ಇತ್ಯಾದಿ ಆಧಾರ ಗ್ರಂಥಗಳು ದೇವಾಲಯ ಬೆಳವಣಿಗೆಯಲ್ಲಿ ಮಹತ್ವದ ಪಾತ್ರ ವಹಿಸುತ್ತವೆ. ಈ ಕಾರಣದಿಂದಲೇ ದೇವಾಲಯಗಳ ಉಗಮ, ವಿಕಾಸ ಕುರಿತು ನಾವು ಅಧ್ಯಯನ ಮಾಡುವ ಸಂದರ್ಭದಲ್ಲಿ "ಚಾಲುಕ್ಯ ದೇವಾಲಯಗಳು" ಪ್ರಮುಖ ಉದಾಹರಣೆಗಳಾಗಿ ನಿಲ್ಲುತ್ತವೆ ಎಂಬುದನ್ನು ನಾವಿಲ್ಲಿ ಹೇಳಲೇಬೇಕಾಗುತ್ತದೆ.

ಒಟ್ಟಾರೆ ಕರ್ನಾಟಕದಲ್ಲಿ ದೇವಾಲಯ ವಾಸ್ತುಶಿಲ್ಪವು ಶಾತವಾಹನರ ಕಾಲದಲ್ಲಿ ಆರಂಭಗೊಂಡ ಚೈತ್ಯಾಲಯ, ಸ್ತೂಪ ವಿಹಾರಗಳ ರಚನೆಯ ವಿವರಗಳು ಶಾಸನಗಳಿಂದ ಆ ನಂತರದಲ್ಲಿಯ ನಿರ್ಮಿತಿಗಳಾದ ಐಹೊಳೆ, ಬಾದಾಮಿ, ಪಟ್ಟದಕಲ್ಲುಗಳಲ್ಲಿ ಹಿಂದಿದ್ದ ಇಟ್ಟಿಗೆಯ ವಾಸ್ತುಶಿಲ್ಪಗಳು, ಪ್ರಾಚೀನ

ಕಾಲದ ಕದಂಬ, ಗಂಗರ ಕಟ್ಟಡಗಳು ಇಲ್ಲಿ ಉದಾಹರಣೆಗಳಾಗಿ ನಿಲ್ಲುತ್ತವೆ. ಬಾದಾಮಿ ಚಾಲುಕ್ಯರ ಆಡಳಿತಾವಧಿಯಲ್ಲಿ ದೇವಾಲಯಗಳ ನಿರ್ಮಿತಿ ಕಾರ್ಯವು ಹೆಚ್ಚು ಹುಲುಸಾಗಿ ಸಾಗಿದ್ದು ನಮ್ಮ ಗಮನಕ್ಕೆ ಬರುತ್ತದೆ. ಇಲ್ಲಿನ ಸ್ಮಾರಕಗಳೆಲ್ಲವೂ ಕಲ್ಲಿನಿಂದಲೇ ಕಟ್ಟಿದವುಗಳಾಗಿದ್ದು, ವೈವಿಧ್ಯ ವಾಸ್ತು ಪ್ರಯೋಗಗಳಾಗಿವೆಯೆಂಬುದನ್ನು ನಾವು ಮರೆಯುವ ಹಾಗಿಲ್ಲ.




(ಕೃಪೆ: ಎಂ.ಎಸ್. ಪ್ರಭಾಕರ ರಚಿತ ದೇವಾಲಯ ವಾಸ್ತು)

ಬಾದಾಮಿಯಲ್ಲಿ ವಿಶ್ವ ಪ್ರಸಿದ್ಧಿಯಾದ ಕಲ್ಮನೆಗಳು (ಗುಹಾದೇವಾಲಯಗಳು) ಶೈವ, ವೈಷ್ಣವ ಹಾಗೂ ಜೈನ ಧರ್ಮಗಳಿಗೆ ಸಂಬಂಧಿಸಿದ ವಿಗ್ರಹ ರಚನೆಯಲ್ಲಿ ಕಲಾವಂತಿಕೆ ಮೆರೆಸುತ್ತಿದ್ದರೆ, ಐಹೊಳೆಯ ಪರಿಸರದಲ್ಲಿ ನಮ್ಮ ಗಮನ ಸೆಳೆಯುವ ನೂರಾರು ದೇವಾಲಯಗಳು ಒಂದರಂತೆ ಒಂದಿಲ್ಲ. ಅಲ್ಲಿ ವಿವಿಧ ವಾಸ್ತುಕಲಾ ಶೈಲಿಗಳ ಪ್ರಯೋಗ ಮಾಡಿದಂತೆ ಕಲಾ ರಸಿಕರಿಗೆ ಭಾಸವಾಗುತ್ತಿದೆಯಾದ್ದರಿಂದ ಐಹೊಳೆಯನ್ನು "ದೇವಾಲಯಗಳ ಪ್ರಯೋಗಶಾಲೆ" ಎಂದು ಕರೆಯಲಾಗುತ್ತದೆ. ಹಳೆಯ ಮಹಾಕೂಟದ ಪ್ರಾಚೀನ ದೇವಾಲಯಗಳು, ಪಟ್ಟದಕಲ್ಲಿನ ಶಿಖರ ವಿನ್ಯಾಸದಲ್ಲಿ ವಿಶಿಷ್ಟವಾದ ಹಾಗೂ ನಿರ್ಮಾಣ ಕ್ರಮದಲ್ಲಿ ಉನ್ನತ ಸ್ಥಾನ ಹೊಂದಿದ ಸ್ಮಾರಕಗಳು ವಿನೂತನ ಉದಾಹರಣೆಗಳಾಗಿ ನಿಲ್ಲುತ್ತವೆ. ಈ ವಾಸ್ತುಶಿಲ್ಪ ರಚನಾ ಕ್ರಮದಲ್ಲಿ ಕಾಣುವ ವಿವಿಧಾಂಗಗಳು, ಗರ್ಭಗೃಹದ ಮೇಲಿನ ಶಿಖರ. ಮೇಲ್ಕಟ್ಟಡದ ರಚನೆಗಳು "ಷಡ್ವರ್ಗ

ದೇವಾಲಯ"ಗಳ ದೃಷ್ಟಾಂತಗಳಾಗಿವೆ. ಇದನ್ನೇ ಆ ನಂತರದಲ್ಲಿ ರಾಷ್ಟ್ರಕೂಟರು, ಗಂಗರು, ವಿಜಯನಗರ ಅರಸರ ನಿರ್ಮಿತಿಗಳಲ್ಲಿ ಪ್ರಯೋಗಿಸಿದ್ದು ನಮ್ಮ ಗಮನಕ್ಕೆ ಬರುತ್ತದೆ. ಈ ವಾಸ್ತು ಶೈಲಿಯ ಪ್ರಯೋಗಗಳು ಅಷ್ಟಕ್ಕೆ ನಿಲ್ಲದೇ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕೆಲವು ಭಿನ್ನತೆಯ ಪ್ರಯೋಗ ನಡೆಸಿದ್ದು, ಆ ನಂತರದಲ್ಲಿಯ ಹೊಯ್ಸಳರ ಕಾಲದಲ್ಲಿ ಹೊಸ ಮಾರ್ಗದಲ್ಲಿ ಸಾಗಿದ ವಾಸ್ತುಶಿಲ್ಪದ ಪ್ರಯೋಗಗಳು ಪರಾಕಾಷ್ಠತೆಗೇರಿದ್ದು ಕಂಡು ಬರುತ್ತದೆ. ಈ ಹಲವಾರು ವಾಸ್ತುಶಿಲ್ಪಗಳು ಬೇರೆ ಬೇರೆ ಭಾಗದಲ್ಲಿ ನವನವೀನ ಮಾದರಿಯ ರಚನೆಗಳಾಗಿದ್ದು ಅವು ದೇವಾಲಯ ವಾಸ್ತುಶಿಲ್ಪಕ್ಕೆ ತಮ್ಮದೇ ಆದ ಕಾಣಿಕೆ ನೀಡಿರುವುದನ್ನು ನಾವು ಗುರುತಿಸಬಹುದು.

ಈ ಎಲ್ಲ ಕಾರಣಗಳಿಂದ ಕರ್ನಾಟಕದಲ್ಲಿ ದೇವಾಲಯಗಳ ನಿರ್ಮಾಣ ಕಾರ್ಯವು ಪ್ರತಿಯೊಂದು ಪ್ರದೇಶದಲ್ಲಿ ತಮ್ಮದೇ ಆದ ಲಕ್ಷಣಗಳನ್ನು ಮೈಗೂಡಿಸಿಕೊಂಡು ಆ ಪ್ರದೇಶದಲ್ಲಿ ಆಳ್ವಿಕೆ ಮಾಡಿದ ರಾಜವಂಶದ ಹೆಸರಿನಿಂದ ಪ್ರಸಿದ್ಧಿ ಪಡೆದಿದೆ. ಈ ದೇವಾಲಯ ನಿರ್ಮಾಣ ಕಾರ್ಯವು ಪ್ರಾಚೀನ ಕಾಲದಿಂದಲೇ ಆರಂಭವಾಗಿದ್ದು ಕಾಲದಿಂದ ಕಾಲಕ್ಕೆ ರಚನಾತ್ಮಕವಾಗಿ ವಿವಿಧ ಶೈಲಿ, ಪ್ರಭೇದಗಳೊಂದಿಗೆ ನಡೆದುಕೊಂಡು ಬಂದು ಈ ಪ್ರದೇಶದ ದೇವಾಲಯಗಳು ವಾಸ್ತುಶಿಲ್ಪ ಕಲೆಗೆ ವೈಶಿಷ್ಟ್ಯಪೂರ್ಣ ಕೊಡುಗೆ ನೀಡಿವೆ ಎಂದರೆ ಅತಿಶಯೋಕ್ತಿಯಲ್ಲ.

# 4. ಚಾಲುಕ್ಯ ದೇವಾಲಯಗಳಲ್ಲಿ ತಲವಿನ್ಯಾಸ ಪ್ರಯೋಗಗಳು

ಬಾದಾಮಿ ಚಾಲುಕ್ಯ ಅರಸರು ನಿರ್ಮಿಸಿದ ವಾಸ್ತುಶಿಲ್ಪಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ನಮಗೆ ಅಲ್ಲಿ ಕಣ್ಮನಗಳನ್ನು ಆಕರ್ಷಿಸುವ ಪ್ರಮುಖ ಸಂಗತಿಗಳೆಂದರೆ ಈ ಪರಿಸರದಲ್ಲಿ ರಚಿಸಿರುವ ಕಲಾತ್ಮಕ ರಾಚನಿಕ ದೇವಾಲಯಗಳು ಹಾಗೂ ಕಲ್ಮನೆಗಳು ಚಾಲುಕ್ಯರ ಪೂರ್ವದಲ್ಲಿ ಆ ಪ್ರದೇಶವನ್ನಾಳಿದ ಶಾತವಾಹನರ, ಗುಪ್ತರ ಮತ್ತು ವಾಕಾಟಕರ ವಾಸ್ತು ರಚನೆಯ ಪ್ರಭಾವವು ಬಾದಾಮಿ ಚಾಲುಕ್ಯರ ಮೇಲೆ ಆಗಿರಬಹುದೆಂಬ ಅಭಿಪ್ರಾಯ ಅನೇಕ ಇತಿಹಾಸಕಾರರದ್ದಾಗಿದೆ. ಅವರು ಪಶ್ಚಿಮ ಘಟ್ಟಗಳಲ್ಲಿ ನಿರ್ಮಿಸಿದ ಚೈತ್ಯ ಗುಹಾಲಯಗಳ ರಚನಾಶೈಲಿ ಬಾದಾಮಿಯ ವಾಸ್ತುಶಿಲ್ಪಗಳನ್ನು ನಿರ್ಮಿಸಿದ ಸ್ಥಪತಿಗಳಿಗೆ ಮೂಲ ಪ್ರೇರಣೆಯಾಗಿರಬಹುದೇನೋ! ಬಾದಾಮಿಯಲ್ಲಿ ಚಾಲುಕ್ಯರ ಆಡಳಿತದ ಪ್ರಾರಂಭದ ಮೊದಲ ಶತಮಾನದ ಕಾಲಾವಧಿಯಲ್ಲಿ ಅಖಂಡ ಶಿಲಾ ಬಂಡೆಗಳನ್ನು ಕೊರೆದು ಅಲ್ಲಿ ವಿಶ್ವದ ಜನ ಬೆರಗಾಗುವ ಅದ್ಭುತ ಕಲೆಯ ಅನಾವರಣ ಮಾಡಿರುವುದು ಆ ಶಿಲ್ಪಿಗಳ ಕಲಾ ವೈಖರಿಗೆ ಉದಾಹರಣೆಯಾಗಿದೆ. ಬಿಡಿ ಬಿಡಿಯಾದ ದೇವಾಲಯಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ನಿರ್ಮಿಸಿ ಅಗಾಧವಾದ ವಾಸ್ತುಕಲಾ ದರ್ಶನವನ್ನೇ ಈ ಪರಿಸರದಲ್ಲಿ ಆಚಂದ್ರಾರ್ಕವಾಗಿ ಉಳಿಯುವಂತೆ ಮಾಡಿದ ಶ್ರೇಯಸ್ಸು ಚಾಲುಕ್ಯ ಸ್ಥಪತಿಗಳಿಗೆ ಮಾತ್ರ ಸಲ್ಲುತ್ತದೆ. ಕರ್ನಾಟಕದ ಐಹೊಳೆ, ಪಟ್ಟದಕಲ್ಲು, ಬಾದಾಮಿಗಳ ಪರಿಸರದಲ್ಲಷ್ಟೇ ಅಲ್ಲ, ರಾಜ್ಯದ ಭೌಗೋಳಿಕ ಗಡಿಯನ್ನು ಮೀರಿ ಸಾಮ್ರಾಜ್ಯ ವಿಸ್ತಾರ ಮಾಡಿದ್ದ ಬಾದಾಮಿ ಚಾಲುಕ್ಯರು ಆಂಧ್ರಪ್ರದೇಶದ ಅಲಂಪುರ ಎಂಬಲ್ಲಿಯೂ ಸಹ ತಮ್ಮ ಸ್ಥಪತಿಗಳ ಮೂಲಕ ಕೆಲವು ಸುಂದರವಾದ ರಾಚನಿಕ ದೇವಾಲಯಗಳನ್ನು ಇದೇ ಸಂದರ್ಭದಲ್ಲಿ ನಿರ್ಮಾಣ ಮಾಡಿ ನಮ್ಮ ದೇಶದ ಕಲೆ, ಸಾಂಸ್ಕೃತಿಕ ಕ್ಷೇತ್ರಕ್ಕೆ ಅಮೂಲ್ಯವಾದ ಕೊಡುಗೆ ನೀಡಿದ್ದಾರೆ. ವಾಸ್ತು ಶೈಲಿಯ ಅಧ್ಯಯನ ಮಾಡುವವರಿಗೆ ಈ ವಾಸ್ತು ಶಿಲ್ಪಗಳು ಮಹತ್ತರವಾದವುಗಳು ಎನಿಸುತ್ತವೆ.

ಐಹೊಳೆ, ಬಾದಾಮಿ, ಮಹಾಕೂಟ ಹಾಗೂ ಪಟ್ಟದಕಲ್ಲು ಈ ಭೌಗೋಳಿಕ ಪ್ರದೇಶದಲ್ಲಿ ರಚನೆಗೊಂಡಿರುವ ಚಾಲುಕ್ಯರ ಸ್ಮಾರಕಗಳು ದೇವಾಲಯ ವಾಸ್ತು ಶಿಲ್ಪಗಳ ಅಧ್ಯಯನಕಾರರಿಗೆ ಕಲಾ ಸಂಸ್ಕೃತಿಯ ಸಾಕ್ಷಿ ಪ್ರಜ್ಞೆ ಎನಿಸುತ್ತವೆ. ಅತ್ಯಂತ ಉತ್ತಮ ಮಟ್ಟದ ವಾಸ್ತು ಶೈಲಿಯ ಎಲ್ಲ ಪ್ರಕಾರಗಳು, ಪ್ರಭೇದಗಳು ಇಲ್ಲಿ ರಚನೆಗೊಂಡ ದೇವಾಲಯಗಳಲ್ಲಿ ಅಭಿವ್ಯಕ್ತಗೊಂಡಿವೆ. ಇಲ್ಲಿ ಏಕಕೂಟಾಚಲ, ದ್ವಿಕೂಟ ದೇವಾಲಯಗಳೊಂದಿಗೆ ತ್ರಿಕೂಟಾಚಲ ವಾಸ್ತು ಶಿಲ್ಪಗಳ ಪ್ರಯೋಗ ಮೊಟ್ಟ ಮೊದಲನೆಯದಾಗಿ ಚಾಲುಕ್ಯ ವಾಸ್ತು ಶಿಲ್ಪಿಗಳು ಇಲ್ಲಿನ ದೇವಾಲಯಗಳಲ್ಲಿ ಪ್ರಯೋಗಿಸಿದ್ದು ನಮಗೆ ಕಂಡು ಬರುತ್ತದೆ. ವೈವಿಧ್ಯ ಕಲಾ ಪ್ರಕಾರದ ದೇವಾಲಯಗಳನ್ನು ಅತ್ಯದ್ಭುತವಾಗಿ ನಿರ್ಮಾಣಗೈದ ಬಾದಾಮಿ ಚಾಲುಕ್ಯ ಶಿಲ್ಪಿಗಳು ಅವುಗಳಲ್ಲಿ ತಮ್ಮ ಸೌಂದರ್ಯದ ಕಲ್ಪನೆಯನ್ನು ಅಭಿವ್ಯಕ್ತಗೊಳಿಸಿದ್ದಾರೆ. ನೂರಾರು ಬಿಡಿ ಬಿಡಿಯಾದ ಶಿಲ್ಪಗಳ

ರಚನೆಯಲ್ಲಿ ಉಬ್ಬು ಶಿಲ್ಪಗಳಲ್ಲಿ ಮೂಡಿ ಬಂದಿರುವ ಕಲಾಕೌಶಲ್ಯವನ್ನು ನಾವೆಷ್ಟು ಬಣ್ಣಿಸಿದರೂ ಕಡಿಮೆಯೇ. ದೇವಾಲಯಗಳ ಶಿಲ್ಪ ಅಧ್ಯಯನಕಾರರ ದೃಷ್ಟಿಯಲ್ಲಿ ಕಂಡು ಬರುವ ಅಭಿಪ್ರಾಯಗಳಂತೆ "ಬಾದಾಮಿ ಚಾಲುಕ್ಯರ ಕಾಲದ ಈ ವಾಸ್ತು ರಚನೆಗಳಲ್ಲಿ ನಿರ್ಮಾಣವಾದ ಶಿಲ್ಪಗಳು ಪ್ರಮಾಣ, ಅಳತೆ ಹಾಗೂ ಸೌಂದರ್ಯ ಪ್ರಜ್ಞೆಯ ದೃಷ್ಟಿಯಿಂದಾಗಿ ಈ ವಾಸ್ತು ಶಿಲ್ಪಗಳು ಉಳಿದೆಲ್ಲ ರಾಜರುಗಳ ಕಾಲದಲ್ಲಿ ನಿರ್ಮಾಣಗೊಂಡಿರುವ ಶಿಲ್ಪಗಳಿಗಿಂತ ಉತ್ಕೃಷ್ಟಮಟ್ಟದ್ದೆನಿಸುತ್ತವೆ". ಚಿತ್ರಕಲಾ ಸೌಂದರ್ಯದ ಬಗೆಗೆ ವಿಶೇಷ ಕಲಾ ಪರಿಣತಿ ಹೊಂದಿದ್ದ ಈ ಚಾಲುಕ್ಯ ಶಿಲ್ಪಿಗಳು ಬಾದಾಮಿ, ಐಹೊಳೆ ಗುಹಾಲಯಗಳಲ್ಲಿನ ಛಾವಣಿಗಳಲ್ಲಿ ಸುಂದರವಾದ ಬಣ್ಣದ ಚಿತ್ರ ರಚನೆಯಲ್ಲೂ ಸಹ ತಮ್ಮಲ್ಲಿಯ ಸೌಂದರ್ಯದ ಕಲ್ಪನೆಯನ್ನು ಅಭಿವ್ಯಕ್ತಗೊಳಿಸಿದ ಉದಾಹರಣೆಗಳೂ ನಮಗೆ ಲಭಿಸುತ್ತವೆ. ಬಾದಾಮಿ ಚಾಲುಕ್ಯರು ತಮ್ಮ ವಾಸ್ತು ಕಲಾ ವೈಭವವನ್ನು ಒಂದೆಡೆಯಲ್ಲೇ ಕೇಂದ್ರಿಕರಿಸದೇ ಅದನ್ನು ಬೇರೆ ಬೇರೆ ಪ್ರದೇಶದಲ್ಲೂ ದೇವಾಲಯಗಳ ನಿರ್ಮಾಣ ಕಾರ್ಯಕ್ಕೆ ಅವಕಾಶ ಕಲ್ಪಿಸಿ ನಮ್ಮ ನಾಡಿನ ಕಲಾ ಇತಿಹಾಸಕ್ಕೆ ಹೊಸ ಭಾಷ್ಯವನ್ನೇ ಬರೆದಿದ್ದಾರೆ, ಮಹತ್ವದ ಕೊಡುಗೆಯನ್ನು ನೀಡಿದ್ದಾರೆ.

ಬಾದಾಮಿ ಚಾಲುಕ್ಯರ ಕಾಲವನ್ನು ಒಂದು ದೃಷ್ಟಿಯಿಂದ ವೈದಿಕ ಧರ್ಮದ ಪುನರುತ್ಥಾನದ ಕಾಲವೆಂದು ಪ್ರೊ. ಎಸ್. ರಾಜಶೇಖರ ಅಭಿಪ್ರಾಯ ಪಡುತ್ತಾರೆ. ಈ ಅರಸರು ನೂರಾರು ಸಂಖ್ಯೆಯಲ್ಲಿ ವೈದಿಕ ಸಂಪ್ರದಾಯದ ದೇವಾಲಯಗಳನ್ನು ನಿರ್ಮಿಸಲು ಸ್ಥಪತಿಗಳಿಗೆ ಪ್ರೇರಣೆ ನೀಡಿದ್ದಾರೆ. ಇವುಗಳ ರಚನೆಯ ಹಿಂದೆ ಇದ್ದವರು ಚಾಲುಕ್ಯ ಅರಸರು, ಸಾಮಂತರು, ಅಧಿಕಾರಿಗಳು ಹಾಗೂ ಶ್ರೀಮಂತ ವರ್ಗದವರು. ಕ್ರಿ.ಶ. 655ರ ನಂತರದಲ್ಲಿ ಚಾಲುಕ್ಯ ದೇವಾಲಯಗಳು ಹುಲುಸಾಗಿ ರಚನೆಗೊಂಡಿವೆ ಎಂಬ ಅಭಿಪ್ರಾಯ ಡಾ. ಎಸ್. ರಾಜಶೇಖರ ಅವರದಾಗಿದೆ. ಈ ದೇವಾಲಯಗಳಲ್ಲಿ ದ್ರಾವಿಡ, ರೇಖಾ ನಾಗರ ಶೈಲಿಯ ದೇವಾಲಯಗಳೇ ಹೆಚ್ಚಿನ ಸಂಖ್ಯೆಯವು ಎಂದೂ ಮಹಾಕೂಟ, ಐಹೊಳೆ ಮತ್ತು ಪಟ್ಟದಕಲ್ಲು ಪ್ರದೇಶದಲ್ಲಿ ದ್ರಾವಿಡ ಹಾಗೂ ರೇಖಾನಾಗರ ಎರಡೂ, ಶೈಲಿಗಳ ಪ್ರಯೋಗ ಮಾಡಿದ್ದನ್ನು ಅವರು ಉದಾಹರಿಸುತ್ತಾರೆ. ವಿವಿಧ ಕಲಾ ಪರಿಣತಿಯನ್ನು ಸ್ಥಪತಿಗಳು ಬಾದಾಮಿ ಚಾಲುಕ್ಯ ವಾಸ್ತು ಶಿಲ್ಪಗಳಲ್ಲಿ ಅಭಿವ್ಯಕ್ತ ಪಡೆಸಿದ್ದು ನಮ್ಮ ಗಮನಕ್ಕೆ ಬರುತ್ತದೆ. ಒರಟಾದ ಕಲ್ಲುಗಳಲ್ಲಿ ನುಣುಪಾದ ಶಿಲ್ಪರಚನೆಗೈದ ಶಿಲ್ಪಗಳಲ್ಲಿನ ಕಲಾ ಜಾಣ್ಮೆಯನ್ನು ನಾವಿಲ್ಲಿ ಮೆಚ್ಚಲೇಬೇಕು. ಅತ್ಯದ್ಭುತವಾದ ಈ ಕಲಾ ಸ್ಮಾರಕಗಳು ನಮ್ಮನ್ನು ಬೇರೊಂದು ಲೋಕಕ್ಕೆ ಕರೆದೊಯ್ಯುತ್ತವೆ.

**ತಲವಿನ್ಯಾಸಗಳು :**

ಬಾದಾಮಿ ಚಾಲುಕ್ಯರ ಕಾಲದ ದೇವಾಲಯಗಳ, ಕಲ್ಮನೆಗಳ ತಲವಿನ್ಯಾಸಗಳು ವೈವಿಧ್ಯಮಯ ರೀತಿಯಲ್ಲಿವೆ. ಇಲ್ಲಿ ರಚನೆಗೊಂಡ ದೇವಾಲಯಗಳು ಕೆಲವು ಸಂಕೀರ್ಣ ರಚನೆಯಾಗಿದ್ದು, ಇನ್ನೂ ಹೆಚ್ಚಿನವು ಸಾದಾ ಹಾಗೂ ಚಿಕ್ಕ ಗಾತ್ರದವು ಎನ್ನಬೇಕು. ಇಲ್ಲಿನ ದೇವಾಲಯಗಳನ್ನು ಅಧ್ಯಯನ ಮಾಡಿದ ಪ್ರೊ. ಎಸ್. ರಾಜಶೇಖರ ಅವರು ಐದು ಪ್ರಮುಖ ತಲವಿನ್ಯಾಸಗಳನ್ನು ಬಾದಾಮಿ ಚಾಲುಕ್ಯರ ವಾಸ್ತುಶಿಲ್ಪಗಳಲ್ಲಿ ಗುರುತಿಸುತ್ತಾರೆ.



ಮಹಾಕೂಟದ ಏಕ ಬೇರಾಲಯದ ತಲವಿನ್ಯಾಸ

"ಬಾದಾಮಿ ಚಾಲುಕ್ಯರ ದೇವಾಲಯಗಳಲ್ಲಿ ಹೆಚ್ಚಿನ ಸಂಖ್ಯೆಯ ಸ್ಮಾರಕಗಳಲ್ಲಿಯ ತಲವಿನ್ಯಾಸ ಸಾದಾ ಮತ್ತು ಚಿಕ್ಕ ಗಾತ್ರದಲ್ಲಿದ್ದು, ಮೂಲಭೂತ ಪೂಜೆಗೆ ಅವಶ್ಯಕವೆನಿಸಿದ ಭಾಗಗಳನ್ನು ಮಾತ್ರ ಹೊಂದಿವೆ. ಇಂಥ ದೇವಾಲಯಗಳಲ್ಲಿ ಚಚ್ಚೌಕಾದ ಗರ್ಭಗೃಹ, ಸಭಾ ಮಂಟಪ ಮತ್ತು ಚಿಕ್ಕ ಮುಖ ಮಂಟಪಗಳನ್ನು ಮಾತ್ರ ಕಾಣಬಹುದು. ಇಂಥ ಅನೇಕ ಚಿಕ್ಕ ಮುಖ ಮಂಟಪಗಳು ಶಿಲಾ ರಕ್ಷಾಕವಚಗಳನ್ನು ಹೊಂದಿರುವುದರಿಂದ ಅವು ಅರ್ಧ ತೆರೆದವುಗಳಾಗಿರುತ್ತವೆ. ಈ ಮುಖ ಮಂಟಪಗಳಲ್ಲಿ ಹೆಚ್ಚಾಗಿ ಎರಡು ಕಂಬ ಹಾಗೂ ಎರಡು ಅರ್ಧಗಂಬಗಳಿರುತ್ತವೆ. ಸಭಾ ಮಂಟಪದಲ್ಲಿ ಸಾಮಾನ್ಯವಾಗಿ ನಾಲ್ಕು ಕಂಬಗಳಿದ್ದು ಅವುಗಳ ನೇರದಲ್ಲಿ ಗೋಡೆಗೆ ಹೊಂದಿ ಅರ್ಧಗಂಬಗಳಿರುತ್ತವೆ. ಈ ಸಭಾ ಮಂಟಪದ ಕಂಬಗಳನ್ನು ಕೆಲವೆಡೆ ಸ್ವಲ್ಪ ಎತ್ತರವಾದ ಕಟ್ಟೆಯ ಮೇಲೆ ನಿಲ್ಲಿಸಲಾಗಿರುತ್ತದೆ. ಈ ದೇವಾಲಯಗಳಿಗೆ ಪ್ರದಕ್ಷಿಣಾ ಪಥಗಳು ಇಲ್ಲದಿರುವುದರಿಂದ ಇದನ್ನು ನಿರಂಧಾರ ದೇವಾಲಯಗಳೆಂದು ಕರೆಯುತ್ತಾರೆ". (ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ಡಾ. ಸಿಂದಿಗಿ ರಾಜಶೇಖರ ಪು. 44–45). ಈ ಪ್ರಕಾರದ ದೇವಾಲಯಗಳ ಕುರಿತು ಉದಾಹರಣೆಗಳಾಗಿ ಐಹೊಳೆಯಲ್ಲಿರುವ ತಾರಾಬಸವ, ಮಲ್ಲಿಕಾರ್ಜುನ, ಹುಚ್ಚಪ್ಪಯ್ಯ ಮತ್ತು ಸೂರ್ಯ ದೇವಾಲಯಗಳು ಬಾದಾಮಿಯ ಮಾಲೆಗಿತ್ತಿ ದೇವಾಲಯ ನಮಗೆ ಕಾಣಸಿಗುತ್ತವೆ.



ಐಹೊಳೆಯ ತಾರಾಬಸವ ದೇವಾಲಯದ ತಲವಿನ್ಯಾಸ

ಚಾಲುಕ್ಯ ಶಿಲ್ಪಿಗಳು ನಿರ್ಮಿಸಿದ ಇನ್ನೊಂದು ತಲವಿನ್ಯಾಸದ ದೇವಾಲಯಗಳೆಂದರೆ 'ಸಾಂಧಾರ' ಪ್ರಕಾರದ ದೇವಾಲಯಗಳು. ಇಲ್ಲಿ ಗರ್ಭಗೃಹ, ಪ್ರದಕ್ಷಿಣಾಪಥ, ಸಭಾಮಂಟಪ ಹಾಗೂ ಮುಖ ಮಂಟಪಗಳಿದ್ದು ಕೆಲವೊಂದು ಸ್ಮಾರಕಗಳಲ್ಲಿ ಸುಕನಾಶಿಗಳನ್ನು ನೋಡಬಹುದು. ಇದಕ್ಕೆ ಉದಾಹರಣೆಗಳಾಗಿ ಐಹೊಳೆಯಲ್ಲಿ ನಿರ್ಮಿಸಲ್ಪಟ್ಟ ಹುಚ್ಚಿಮಲ್ಲಿಗುಡಿ, ಮೇಗುತಿಗುಡಿ, ಪಟ್ಟದಕಲ್ಲಿನಲ್ಲಿರುವ ಸಂಗಮೇಶ್ವರ ದೇವಾಲಯ, ಮಹಾಕೂಟದಲ್ಲಿ ನಿರ್ಮಿಸಿರುವ ಮಲ್ಲಿಕಾರ್ಜುನ, ಮುಕುಟೇಶ್ವರ ದೇವಾಲಯಗಳನ್ನು ಹೆಸರಿಸಬಹುದು. ಇವೆಲ್ಲವೂ ಸಾಂಧಾರ ಪದ್ಧತಿಯ ದೇವಾಲಯಗಳು. ಈ ದೇವಾಲಯಗಳ ತಲವಿನ್ಯಾಸವು ಈಗ ತಿಳಿಸಿದ ಭಾಗಗಳನ್ನು ಹೊಂದಿದ್ದರೂ ಕೆಲವು ದೇವಾಲಯಗಳಲ್ಲಿ ಇನ್ನಿತರ ವಾಸ್ತು ಭಾಗಗಳು ಒಳಗೊಂಡಿರುವುದು ನಮ್ಮ ಗಮನಕ್ಕೆ ಬರುತ್ತದೆ. ಈ ವಾಸ್ತು ಶಿಲ್ಪಗಳಲ್ಲಿ ಗರ್ಭಗೃಹ ಹಾಗೂ ಪ್ರದಕ್ಷಿಣಾಪಥ, ಮುಖಮಂಟಪಗಳೊಂದಿಗೆ ಸುಕನಾಶಿ, ಅರ್ಧ ಮಂಟಪಗಳಿರುವುದನ್ನು ಕಾಣಬಹುದು. ಕೆಲವೊಂದು ದೇವಾಲಯದ ಗರ್ಭಗೃಹದ ಮೇಲೆ ಮತ್ತೊಂದು ಗರ್ಭಗೃಹ ಸಂಯೋಜಿಸಿರುವುದನ್ನು ನೋಡಲು ಸಾಧ್ಯ. ಬಾದಾಮಿ ಚಾಲುಕ್ಯ ಅರಸರ ಕಾಲದಲ್ಲಿ ನಿರ್ಮಿಸಿದ ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯ ಬೃಹತ್



ಐಹೊಳೆಯ ಗೌಡರ ದೇವಾಲಯ ತಲವಿನ್ಯಾಸ

ಪ್ರಮಾಣದ ಸ್ಮಾರಕವಾಗಿದೆ. ಮುಖ್ಯ ದೇವಾಲಯದ ಸುತ್ತ ಸಣ್ಣ ದೇವಾಲಯಗಳೂ ಇರುವುದರಿಂದ ಇದೊಂದು "ದೇವಾಲಯ ಗುಚ್ಛ"ದಂತೆ ಕಂಗೊಳಿಸುತ್ತದೆ.

ಇನ್ನು ಮೂರನೆಯ ಪ್ರಕಾರದ ತಲವಿನ್ಯಾಸ ಹೊಂದಿರುವ ದೇವಾಲಯಗಳು 'ನಿರಂಧಾರ' ಶೈಲಿಯವು. ಈ ಪ್ರಕಾರದಲ್ಲಿನ ಸ್ಮಾರಕಗಳಲ್ಲಿ ಗರ್ಭಗುಡಿ ಹಲವಾರು ಕಂಬಗಳಿರುವ ಸಭಾ ಮಂಟಪದ ಗೋಡೆಗೆ ಹೊಂದಿಕೊಂಡಿರುತ್ತದೆ. ಇದಕ್ಕೆ ಉದಾಹರಣೆಯಾಗಿ ಐಹೊಳೆಯ ಲಾಡ್‌ಖಾನ್ ದೇವಾಲಯ, ಕೊಂತಿ ಗುಡಿ ಸಂಕೀರ್ಣದ ಒಂದು ಸ್ಮಾರಕದಲ್ಲಿ ಗರ್ಭಗುಡಿಯನ್ನು ಆ ನಂತರ ಸಂಯೋಜಿಸಿದ್ದು ಕಂಡು ಬರುತ್ತದೆ. ಈ ಎರಡೂ ಸ್ಮಾರಕಗಳು 'ಸಭಾಮಂಟಪ'ದಂತಿವೆ. ಈ ಸಭಾ ಮಂಟಪವಿರುವ ಐಹೊಳೆಯ ಲಾಡ್‌ಖಾನ್ ದೇವಾಲಯದ ಮೇಲೆ ಇನ್ನೊಂದು ಗರ್ಭಗೃಹದ ನಿರ್ಮಾಣ ಮಾಡಲಾಗಿದೆ. ಇದೊಂದು ವಿಶಿಷ್ಟವಾದ ವಾಸ್ತುಶಿಲ್ಪ ಸಂಯೋಜನೆಯಾಗಿದೆ.

ಬಾದಾಮಿ ಚಾಲುಕ್ಯ ಅರಸರ ಕಾಲದಲ್ಲಿ ವಿನೂತನವಾದ ತಲವಿನ್ಯಾಸದ ಕಲ್ಪನೆ ಪ್ರಯೋಗಗೊಂಡಿದೆ. ಅದುವೇ "ಗಜಪೃಷ್ಠಾಕಾರ" ಹೊಂದಿದ ತಲವಿನ್ಯಾಸ. ಇಂಥ ಅಡಿಪಾಯವನ್ನು ಹೊಂದಿರುವ ದೇವಾಲಯಗಳನ್ನು ಕರ್ನಾಟಕ ಹಾಗೂ ಆಂಧ್ರದ ಕೆಲವು ಪ್ರದೇಶಗಳಲ್ಲಿ ಶಾತವಾಹನರ ಕಾಲದ, ಇಂತಹ ತಲವಿನ್ಯಾಸ ಹೊಂದಿದ ಕಟ್ಟಡಗಳ ಅವಶೇಷಗಳು ದೊರೆತಿರುವ ಬಗ್ಗೆ ಡಾ.ಸಿಂದಿಗಿ ರಾಜಶೇಖರರವರು ತಮ್ಮ 'ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ' ಗ್ರಂಥದಲ್ಲಿ ವಿಶದವಾಗಿ ತಿಳಿಸಿಕೊಡುತ್ತಾರೆ. ಇಂಥ ಪ್ರಯೋಗವು ಬೌದ್ಧ ಧರ್ಮೀಯರಲ್ಲಿ ಹೆಚ್ಚು ಪ್ರಚಲಿತವಿದ್ದ ಬಗೆಗೆ ಐಹೊಳೆ, ಹಳೇ ಮಹಾಕೂಟಗಳಲ್ಲಿ ಗಜಪೃಷ್ಠಾಕಾರ ತಲವಿನ್ಯಾಸ ಹೊಂದಿರುವ ದೇವಾಲಯಗಳ ಉದಾಹರಣೆಗಳು ಈಗಲೂ ನಮಗೆ ಕಾಣಸಿಗುತ್ತವೆ. ಹಳೆ ಮಹಾಕೂಟದಲ್ಲಿರುವ ದೇವಾಲಯವೇ ತುಂಬಾ ಪ್ರಾಚೀನತೆ ಹೊಂದಿರುವುದೆಂಬ ಅಭಿಪ್ರಾಯ ಡಾ. ಎಸ್. ರಾಜಶೇಖರ ಅವರದಾಗಿದೆ. ಐಹೊಳೆಯಲ್ಲಿ ನಿರ್ಮಿಸಿರುವ ಸುಪ್ರಸಿದ್ಧ ದುರ್ಗಾದೇವಾಲಯದ ರಚನೆ "ಗಜಪೃಷ್ಠಾಕಾರದ ತಲವಿನ್ಯಾಸ ಹೊಂದಿದ್ದು ಗರ್ಭಗೃಹವು ಗಜಪೃಷ್ಠಾಕಾರದಲ್ಲಿದ್ದು, ಅದರ ಸುತ್ತಲೂ ಪ್ರದಕ್ಷಿಣಾಪಥ, ಮುಂದೆ ಸಭಾ ಮಂಟಪ, ಚಿಕ್ಕ ಮುಖ ಮಂಟಪ, ಮತ್ತೊಂದು ಅಧಿಷ್ಠಾನ ಆ ಸುತ್ತಲೂ ಸಹ ಗಜಪೃಷ್ಠಾಕಾರದ ಪ್ರದಕ್ಷಿಣಾ ಪಥವನ್ನೊಳಗೊಂಡಿದ್ದು, ಇದು ಅರೆತೆರೆದಂತಿದೆ. ಕಂಬಗಳ ಸಾಲನ್ನು ಸಂಯೋಜಿಸಿದ್ದು, ಈ ದೇವಾಲಯದಲ್ಲಿಯ ಗರ್ಭಗೃಹದಲ್ಲಿನ ಪೀಠವು ವೃತ್ತಾಕಾರದಲ್ಲಿ ರಚಿಸಲ್ಪಟ್ಟಿದೆ. ಶಿಲ್ಪಿಗಳ ಪ್ರಯೋಗ ಹಾಗೂ ಕಲ್ಪಕ ಶಕ್ತಿಗಳಿಂದಾಗಿ ಈ ದುರ್ಗಾದೇವಾಲಯವು ಒಂದು ಅಪೂರ್ವ ದೇವಾಲಯವೆಂದು ಹೇಳಿದರೆ ಉತ್ಪ್ರೇಕ್ಷೆಯಲ್ಲ. ಈ ದೇವಾಲಯದ ಸಮೀಪದಲ್ಲಿ ಚಿಕ್ಕಿ ಗುಡಿಗಳ ಸಮೂಹದಲ್ಲಿ ಹಿಂದೆ ಕೆಲವು ವರ್ಷಗಳ ಮೊದಲು ಐಹೊಳೆಯಲ್ಲಿ ಕೈಕೊಂಡ ಉತ್ಖನನ ಕಾರ್ಯದಲ್ಲಿ ಇನ್ನೊಂದು ಗಜಪೃಷ್ಠಾಕಾರ ವಾಸ್ತುಶಿಲ್ಪ "ತಲವಿನ್ಯಾಸ"ದ ಅಡಿಪಾಯ ಈಗ ಲಭ್ಯವಾಗಿದ್ದು, ದೇವಾಲಯದ ಭಾಗ ಸಂಪೂರ್ಣವಾಗಿ ನಶಿಸಿಹೋಗಿದ್ದನ್ನು ನೋಡಬಹುದು.


ಐಹೊಳೆಯ ದುರ್ಗಾದೇವಾಲಯ ತಲವಿನ್ಯಾಸ

5ನೇ ತಲವಿನ್ಯಾಸವು ಚಾಲುಕ್ಯ ಸ್ಥಪತಿಗಳು ಬಳಕೆ ಮಾಡಿರುವ ಇನ್ನೊಂದು ಬಗೆಯ ತಲವಿನ್ಯಾಸದ ಪ್ರಯೋಗ. ಈ ಪ್ರಕಾರದ ದೇವಾಲಯಗಳಲ್ಲಿ ಮೂರು ಗರ್ಭಗೃಹಗಳಿದ್ದು, ಅದಕ್ಕೆ ಹೊಂದಿಕೊಂಡಿರುವಂತೆಯೇ ಒಂದು ಸಭಾಮಂಟಪ ಅದಕ್ಕೆ ಪೂರಕವಾಗಿರುವಂಥ ಮುಖಮಂಟಪದೊಂದಿಗೆ ಕಂಡು ಬರುವ "ತ್ರಿಕೂಟಾಚಲ"ಗಳ ಪ್ರಯೋಗಕ್ಕೆ ನಾಂದಿಯಾದದ್ದು ಬಾದಾಮಿ ಚಾಲುಕ್ಯರ ಕಾಲದಲ್ಲಿ ಎಂಬುದನ್ನು ನಾವು ಮರೆಯುವಂತಿಲ್ಲ. ಇದಕ್ಕೆ ಉದಾಹರಣೆಯಾಗಿ ಬಾದಾಮಿಯ ಜಂಬುಲಿಂಗ ದೇವಾಲಯವಾಗಿದೆ. ಇದನ್ನು ಚಾಲುಕ್ಯ ದೊರೆ ವಿಜಯಾದಿತ್ಯನ ತಾಯಿ ವಿನಯವತಿಯು ಕ್ರಿ.ಶ. 699ರಲ್ಲಿ ನಿರ್ಮಿಸಿದ ಬಗೆಗೆ ಇತಿಹಾಸ ಶಾಸ್ತ್ರಜ್ಞ ಡಾ. ಸಿಂದಿಗಿ ರಾಜಶೇಖರ ಉಲ್ಲೇಖಿಸುತ್ತಾರೆ. ಈ ಕುರಿತು ಶಾಸನಾಧಾರವನ್ನೂ ನೀಡುತ್ತಾರೆ. ಆ ನಂತರದಲ್ಲಿ ಬಂದ ಕಲ್ಯಾಣ ಚಾಲುಕ್ಯ ಅರಸರು ಅತಿ ಹೆಚ್ಚಿನ ಸಂಖ್ಯೆಯಲ್ಲಿ ತ್ರಿಕೂಟಾಚಲಗಳನ್ನು ನಿರ್ಮಾಣ ಮಾಡಿದ್ದು ಕಂಡು ಬರುವುದಲ್ಲದೇ, ಹೊಯ್ಸಳ ಅರಸರ ಕಾಲದಲ್ಲೂ ಸಹ ಈ ಶೈಲಿಯ ತಲವಿನ್ಯಾಸಗಳ ಪ್ರಯೋಗ ಮುಂದುವರೆದಿದ್ದು ನಮ್ಮ ಗಮನಕ್ಕೆ ಬರುತ್ತದೆ.



ಜಂಬುಲಿಂಗ ದೇವಾಲಯ ತಲವಿನ್ಯಾಸ

ಹೀಗೆ ಬಾದಾಮಿ ಚಾಲುಕ್ಯರು ನಿರ್ಮಿಸಿದ ನೂರಾರು ದೇವಾಲಯಗಳಲ್ಲಿ ವೈವಿಧ್ಯ ತಲವಿನ್ಯಾಸಗಳ ಪ್ರಯೋಗವು ನಡೆದಿದೆ. ಇನ್ನು ಕೆಲವೆಡೆಯಲ್ಲಿ ಕೇವಲ ಗರ್ಭಗೃಹ ಮತ್ತು ಚಿಕ್ಕ ಗಾತ್ರದ ಮುಖ ಮಂಟಪವನ್ನು ಒಳಗೊಂಡಿರುವ ಅನೇಕ ಚಿಕ್ಕ ವಾಸ್ತು ಶಿಲ್ಪಗಳು ನಿರ್ಮಾಣಗೊಂಡಿರುವುದೂ ನಮಗೆ ಕಂಡು ಬರುತ್ತದೆ. ಚಾಲುಕ್ಯ ಸ್ಥಪತಿಗಳು ವಾಸ್ತುಶಿಲ್ಪಗಳ ರಚನೆಯಲ್ಲಿ ತಮ್ಮ ಕಲಾಪ್ರತಿಭೆಯನ್ನು ಮೆರೆಸುವುದರ ಜೊತೆಗೆ ಆ ಕಾಲದ ಜನಾಂಗದ ಜೀವನದರ್ಶನವನ್ನು ಮಾಡಿಕೊಡುವುದೊಂದು ವಿಶೇಷವೆನ್ನಬಹುದು.

ಕರ್ನಾಟಕದಲ್ಲಿ ಕ್ರಿಸ್ತ ಶಕದ ಆರಂಭದ ದೇವಾಲಯಗಳು ನಮಗೆ ಕಾಣಸಿಗುವುದು ಅಸಾಧ್ಯ. ದೇವಾಲಯಗಳ ಉಗಮ, ವಿಕಾಸಗಳ ಬಗೆಗೆ ಅಧ್ಯಯನ ಮಾಡಲು ನಾವು ಐಹೊಳೆ, ಬಾದಾಮಿ, ಮಹಾಕೂಟ ಹಾಗೂ ಪಟ್ಟದಕಲ್ಲುಗಳಲ್ಲಿ ರಚಿತಗೊಂಡ ದೇವಾಲಯಗಳತ್ತ ಹೋಗಬೇಕಾಗುತ್ತದೆ. ಅಲ್ಲಿ ನಿರ್ಮಿತವಾದ ಸ್ಮಾರಕಗಳನ್ನು ಪರಿಶೀಲಿಸಬೇಕಾಗುತ್ತದೆ. ಕನಿಷ್ಠ ಅವಶ್ಯಕತೆಗಳಲ್ಲಿ ನಿರ್ಮಾಣಗೊಂಡ ಹಲವಾರು ರಚನೆಗಳಲ್ಲೂ ಒಂದೊಂದು ವಿಶೇಷತೆಗಳನ್ನು ಕಾಣಲು ಸಾಧ್ಯ. ಇದಕ್ಕೆ ಉದಾಹರಣೆಯಾಗಿ ಮಹಾಕೂಟೇಶ್ವರ ದೇವಾಲಯದ ಆವರಣದಲ್ಲಿಯ ದೇವಾಲಯಗಳು, ಬಾದಾಮಿಯ ಭೂತನಾಥ ಗುಡಿಯ ಸಮೂಹದಲ್ಲಿ ಹಾಗೂ ಐಹೊಳೆ ಪರಿಸರದಲ್ಲಿ ರಚನೆಗೊಂಡ ಹಲವು ಪ್ರಾರಂಭಿಕ ಸ್ಮಾರಕಗಳಲ್ಲಿ ಕಾಣಬಹುದಾಗಿದೆ. ಇಲ್ಲಿ, ಕೆಲವೆಡೆಯಲ್ಲಿರುವ ಕೇವಲ ಮಂಟಪ ನಂತರ ಗರ್ಭಗೃಹದೊಂದಿಗೆ ಹೊಂದಿಕೊಂಡ ಎರಡು ಇಲ್ಲವೇ ನಾಲ್ಕು ಕಂಬಗಳಲ್ಲಿ ಸಂಯೋಜಿಸಲ್ಪಟ್ಟ ಮುಖಮಂಟಪ ಇಲ್ಲವೇ ಗರ್ಭಗೃಹದೊಂದಿಗೆ ಕಾಣುವ ಕಕ್ಷಾಸನ ಹೊಂದಿರುವ ಮಂಟಪ, ಇನ್ನೊಂದೆಡೆಯಲ್ಲಿ ಮಧ್ಯ ಮಂಟಪ ಸಂಯೋಜನೆಗೊಳಿಸಿ ಎರಡೂ ಭಾಗದಲ್ಲಿ ಗರ್ಭಗೃಹ, ಮುಖ ಮಂಟಪವಿರುವ ರಚನೆಗಳನ್ನೂ ನಾವು ಕಾಣಬಹುದಾಗಿದೆ.

ಐಹೊಳೆ, ಬಾದಾಮಿ, ಪಟ್ಟದಕಲ್ಲುಗಳಲ್ಲಿನ ವಾಸ್ತುಶಿಲ್ಪಗಳು "ದೇವಾಲಯಗಳು ನಡೆದು ಬಂದ ಮಾರ್ಗಸೂಚಿ" ಮಾಡುತ್ತವೆ. ಇಲ್ಲಿಯ ಹಲವಾರು ವಾಸ್ತು ಪ್ರಯೋಗಗಳು ಭಾರತೀಯ ವಾಸ್ತುಕಲೆಯ ವೈಭವವನ್ನು ಅನಾವರಣಗೊಳಿಸಿವೆ. ಐಹೊಳೆಯಲ್ಲಿ ನಿರ್ಮಿತಗೊಂಡಿರುವ ಲಾಡಖಾನ್, ಗೌಡರ ಮತ್ತು ಕೊಂತಿ ಗುಡಿಗಳು ದೇವಾಲಯಗಳ ಆರಂಭಕಾಲದ ಲಕ್ಷಣಗಳನ್ನು ತಿಳಿಸಿಕೊಡುತ್ತವೆ. ಇವುಗಳ ಪ್ರಾಚೀನತೆಯ ಕುರಿತು ವಿದ್ವಾಂಸರಲ್ಲಿ ವಾದ ವಿವಾದಗಳುಂಟು. ದಾಕ್ಷಿಣಾತ್ಯ ಮತ್ತು ಔತ್ತರೇಯ ಸಾಂಪ್ರದಾಯಿಕ ಕಟ್ಟಡಗಳು ಪಟ್ಟದಕಲ್ಲು ಹಾಗೂ ಮಹಾಕೂಟಗಳಲ್ಲಿ ನಿರ್ಮಿತಗೊಂಡುದರಿಂದಾಗಿ ಈ ಪ್ರದೇಶದ ದೇವಾಲಯಗಳು ಅತ್ಯಂತ ಮಹತ್ವದ್ದೆನಿಸುತ್ತವೆ.

ದೇವಾಲಯ ವಾಸ್ತು ಕುರಿತು ಲಭ್ಯವಿರುವ ವಾಸ್ತು ಗ್ರಂಥಗಳಲ್ಲದೇ ಮತ್ಸ್ಯಪುರಾಣ, ಶುಕ್ರನೀತಿ, ಮಾನಸೋಲ್ಲಾಸ, ಇತ್ಯಾದಿ ಗ್ರಂಥಗಳಲ್ಲಿ ವಿವಿಧ ವಾಸ್ತು ಶಿಲ್ಪಗಳ ಲಕ್ಷಣಗಳ ಕುರಿತು ವಿಶೇಷ ವಿವರಣೆಗಳಿವೆ. ವಿವಿಧ ಗ್ರಂಥಗಳಲ್ಲಿ ಉಲ್ಲೇಖಿಸಲ್ಪಟ್ಟ ವಾಸ್ತು ರಚನೆಗಳು ಆಯಾ ಗ್ರಂಥಗಳು ರಚನೆಗೊಂಡ ಕಾಲಕ್ಕೆ ಅದಕ್ಕೆ ಪೂರ್ವದಲ್ಲಿ ಪ್ರಚಲಿತವಿತ್ತೆಂಬುದನ್ನಿಲ್ಲಿ ನಾವು ಗಮನಿಸಬೇಕು. ಈ ಎಲ್ಲ ಗ್ರಂಥಗಳ ಕಾಲಮಾನ ನಮಗೆ ತಿಳಿಯಲಾಗದಿದ್ದರೂ ಸಹ ದೇವಾಲಯಗಳ ವಿಕಾಸ ಕುರಿತು ಸೂಚಿಸುವ ಲಕ್ಷಣಗಳಿಂದ ಅಧ್ಯಯನಕ್ಕೆ ಹೆಚ್ಚಿನ ಪ್ರಯೋಜನ ಲಭಿಸಿದೆ.

**ದೇವಾಲಯ ವಾಸ್ತು ಪ್ರಯೋಗಗಳು :**

ಬಾದಾಮಿ ಚಾಲುಕ್ಯ ದೇವಾಲಯಗಳು ಕುರಿತು ಮೊಟ್ಟ ಮೊದಲು ಅಧ್ಯಯನ ನಡೆಸಿದ ವಿದ್ವಾಂಸ "ಪರ್ಸಿಬ್ರೌನ"ರ ಅಭಿಪ್ರಾಯದಂತೆ ಐಹೊಳೆಯ ಪರಿಸರದಲ್ಲಿ ಕಟ್ಟಲಾದ ಲಾಡಖಾನ್ ದೇವಾಲಯವು ಪ್ರಥಮದ್ದೆಂದು ನಿಶ್ಚಿತಗೊಂಡಿದ್ದರೂ ಕೆ.ವಿ. ಸುಂದರರಾಜನ್ ಅವರು ಐಹೊಳೆಯಲ್ಲಿನ ಇನ್ನೊಂದು ವಾಸ್ತುಶಿಲ್ಪ ಜ್ಯೋತಿರ್ಲಿಂಗ ಗುಡಿಯ ನಾಲ್ಕು ಸ್ತಂಭಗಳ ಮಂಟಪ ರಚನೆಯನ್ನು ದೇವಾಲಯದ ಮೂಲವಿರಬಹುದೆಂದು ಗುರುತಿಸುತ್ತಾರೆ. ಹಾಗೆಯೇ ಐಹೊಳೆಯಲ್ಲಿ ಉತ್ಖನನದಲ್ಲಿಯ ಫಲಿತಾಂಶದಂತೆ ಖ್ಯಾತ ಪ್ರಾಕ್ತನ ಶಾಸ್ತ್ರಜ್ಞ ಡಾ. ಎಸ್.ಆರ್.ರಾವ್ ಅವರು ಗೌಡರ ಗುಡಿಯನ್ನು ಅತಿ ಪ್ರಾಚೀನವಾದದ್ದೆಂದು ಗುರುತಿಸುತ್ತಾರೆ. ಚಾಲುಕ್ಯರ ಪ್ರಥಮ ದೇವಾಲಯದ ಬಗೆಗೆ ವಿದ್ವಾಂಸರಲ್ಲಿ ಚರ್ಚೆಗಳು ನಡೆಯುತ್ತಲೇ ಇವೆ. (ಎಂ.ಎಸ್.ಪ್ರಭಾಕರ, ದೇವಾಲಯ ವಾಸ್ತು, ಪುಟ – 19).



ವಾಸ್ತು ಮಂಡಲದಿಂದ ರೂಪುಗೊಂಡಿರುವ ಏಕ ಬೇರಾಲಯ


ಗುಪ್ತರ ಕಾಲದ ದೇವಾಲಯದ ಭೂನಕ್ಷೆ



**ಚಾಲುಕ್ಯ ಮತ್ತು ಪಲ್ಲವರ**
**ಕಾಲದ ದೇವಾಲಯದ ಭೂನಕ್ಷೆ**

(ಚಿತ್ರ ಕೃಪೆ: ಡಾ. ಜಿ. ಜ್ಞಾನಾನಂದರ ವಾಸ್ತು ಪುರುಷ ನೆಲೆ ಹಿನ್ನೆಲೆ)

ವಾಸ್ತು ರಚನೆಗೆ ಸಂಬಂಧಿಸಿದ ಪ್ರಕಾರ ಹಲವು ವಾಸ್ತು ಗ್ರಂಥಗಳು ಬೇರೆ ಬೇರೆ ವಾಸ್ತು ರಚನೆಗಳನ್ನು ವಿವರಿಸಿವೆ. ಒಂದೇ ಗರ್ಭಗೃಹವಿರುವ ಆಲಯವು ಮಯ ಮತದ ಪ್ರಕಾರ ಬ್ರಹ್ಮ ಸ್ಥಾನವು ನಾಲ್ಕು ಚೌಕಗಳನ್ನು ಪಡೆದಿರಬೇಕೆಂದು ತಿಳಿಸುತ್ತದೆ. ಇತರ ಶಿಲ್ಪಶಾಸ್ತ್ರದ ಪ್ರಕಾರ ಒಂಭತ್ತು ಮತ್ತು ಹದಿನಾರು ಭಾಗಗಳನ್ನು ಪಡೆದಿರಬಹುದೆನ್ನುತ್ತಾರೆ ಡಾ. ಜಿ. ಜ್ಞಾನಾನಂದರು. ಇದರ ಸುತ್ತಲಿನ ಸ್ಥಳವನ್ನು ಅಳಿಂದ ಎನ್ನಲಾಗುತ್ತದೆ. ಈ ಪ್ರದೇಶವು ಗರ್ಭಗೃಹದ ಪ್ರದಕ್ಷಿಣೆಗಾಗಿ ಬಳಸಲಾಗುತ್ತದೆ. ಈ ರೀತಿಯ ದೇವಾಲಯಕ್ಕೆ ವಾಸ್ತುಮಂಡಲವೇ ಆಧಾರವೆಂದು ತಿಳಿಯಲಾಗುತ್ತದೆ.

# 5. ಬಾದಾಮಿ ಚಾಲುಕ್ಯರ ಗುಹಾ ದೇವಾಲಯಗಳು

ಚಾಲುಕ್ಯ ಸ್ಥಪತಿಗಳು ಬಾದಾಮಿ, ಪಟ್ಟದಕಲ್ಲು ಹಾಗೂ ಐಹೊಳೆಗಳಲ್ಲಿ ನಿರ್ಮಿಸಿದ ವಾಸ್ತುಶಿಲ್ಪಗಳಲ್ಲಿ ತುಂಬ ಪ್ರಸಿದ್ಧಿ ಪಡೆದವುಗಳೆಂದರೆ ಬಾದಾಮಿಯ ಮೇಣ ಬಸದಿ ಹಾಗೂ ಬೌದ್ಧ ಚೈತ್ಯವಿಹಾರಗಳು. ಇವುಗಳನ್ನು ಗುಹಾ ದೇವಾಲಯಗಳೆಂದೇ ಕರೆಯಲಾಗುತ್ತಿದ್ದು, ಇಲ್ಲಿ ವ್ಯಕ್ತಗೊಂಡಿರುವ ವಾಸ್ತು ವೈಭವವು ನೋಡ ಬರುವ ಕಲಾರಸಿಕರನ್ನು ಬೆರಗು ಪಡಿಸುತ್ತವೆ.




ಐಹೊಳೆ ದೇವಾಲಯಗಳ ಕಾಲ್ಪನಿಕ ನಕ್ಷೆ

ಬೃಹದಾಕಾರದ ಬಂಡೆಗಳನ್ನೇ ಕೊರೆದು ನಿರ್ಮಿಸಲ್ಪಟ್ಟ ಮಂದಿರವನ್ನು ಗುಹಾದೇವಾಲಯವೆಂದು ಕರೆಯಲಾಗುತ್ತಿದೆ. ಇವುಗಳನ್ನು "ಲಯಣ", "ಕಲ್ಮನೆ" ಎಂತಲೂ ಹೆಸರಿಸಲಾಗಿದೆ. ಕಲ್ಲು ಬಂಡೆಯಲ್ಲಿ ಬೇಡವಾದ ಭಾಗವನ್ನು ಮಾತ್ರ ಕೆತ್ತಿ ತೆಗೆದು ಹಾಕಿ ಬೇಕಿರುವ ಭಾಗದಲ್ಲಿ ತಮ್ಮ ಕಲಾಕೌಶಲ್ಯ ಅಭಿವ್ಯಕ್ತ ಪಡಿಸಿದ ಶಿಲ್ಪಿಗಳು ಈ ಕಲ್ಮನೆಗಳಲ್ಲಿ ತಮ್ಮ ಸಮೃದ್ಧ ಕಲಾ ವೈಭವವನ್ನು ಪ್ರದರ್ಶಿಸಿದ್ದಾರೆ. ಇಂಥ ಗುಹಾ ದೇವಾಲಯಗಳ ಪ್ರಯೋಗ ಕಾರ್ಯಕ್ಕೆ ಸಾಮ್ರಾಟ ಅಶೋಕನೇ ಕಾರಣನಾಗಿದ್ದಾನೆ. 'ಸ್ತೂಪ'ಗಳಿಂದ ಆರಂಭಿತಗೊಂಡ ಈ ವಾಸ್ತುಕಲಾ ಸಂಪ್ರದಾಯ ದಕ್ಷಿಣ ಭಾರತದಲ್ಲಿಯೂ ಪ್ರಯೋಗಿಸಲ್ಪಟ್ಟಿತು. ಪ್ರಾರಂಭದಲ್ಲಿ ಬೌದ್ಧ ಧರ್ಮಕ್ಕೆ ಮತ್ತು ವಿರಳವಾಗಿ ಜೈನ ಧರ್ಮಕ್ಕೆ ಸಂಬಂಧಿಸಿದ ಗುಹಾಲಯಗಳು

ನಿರ್ಮಾಣಗೊಂಡವು. ಹಿಂದೂ ಗುಹಾಲಯಗಳ ರಚನಾ ಕಾರ್ಯವು ಗುಪ್ತರ ಕಾಲದಿಂದ ಅಂದರೆ ಕ್ರಿ.ಶ. 5ನೇ ಶತಮಾನದಿಂದ ಆರಂಭಗೊಂಡಿದೆ ಎಂದು ಡಾ. ಶೀಲಾಕಾಂತ ಪತ್ತಾರ ಅಭಿಪ್ರಾಯ ಪಡುತ್ತಾರೆ.

ಗುಹಾದೇವಾಲಯಗಳ ಪ್ರಯೋಗವು ಕರ್ನಾಟಕದಲ್ಲಿ ಐಹೊಳೆ ಹಾಗೂ ಬಾದಾಮಿ ಪರಿಸರದಲ್ಲಿ ನಡೆದಿದೆ. ಐಹೊಳೆಯಲ್ಲಿ ಎರಡು ಗುಹಾಲಯಗಳು ಸುಂದರ ಶಿಲ್ಪಗಳಿಂದ ಅಲಂಕೃತಗೊಂಡಿವೆ. ಹಾಗೆಯೇ ಬಾದಾಮಿ ಬೆಟ್ಟದಲ್ಲಿ ಕೊರೆದಿರುವ ನಾಲ್ಕು ಗುಹಾಲಯಗಳು ಚಾಲುಕ್ಯ ಸ್ಥಪತಿಗಳ ವೈವಿಧ್ಯ ಪ್ರಯೋಗಗಳಿಗೆ ಸಾಕ್ಷಿಯಾಗಿವೆ.

**ಐಹೊಳೆಯ ಗುಹಾಲಯಗಳು :**




**ರಾವಳಫಡಿ ಗುಹಾಲಯದ ತಲನಕ್ಷೆ ಹಾಗೂ ಚಿತ್ರ.**

**ರಾವಳಫಡಿ ಗುಹಾಲಯ :** ಐಹೊಳೆಯ ಈ ಗುಹಾಲಯ ದೇವಾಲಯಕ್ಕೆ ರಾವಳಫಡಿ ಗುಹೆ ಎಂತಲೂ ಕರೆಯಲಾಗುತ್ತದೆ. ಈ ಗುಹಾಲಯವು ನೆಲಮಟ್ಟದಿಂದ ತುಸು ಎತ್ತರದಲ್ಲಿದ್ದು ಗುಡ್ಡದಲ್ಲಿನ ಬಂಡೆಯಲ್ಲಿ ಕೊರೆಯಲಾಗಿದೆ. ಈ ಗುಹಾಲಯದಲ್ಲಿ ಗರ್ಭಗೃಹ, ಎರಡು ಪಾರ್ಶ್ವ ಕೋಷ್ಠಗಳು ಆಯತಾಕಾರದ ಮಂಟಪ ಇವು ಇಲ್ಲಿರುವ ವಾಸ್ತು ಭಾಗಗಳಾಗಿವೆ. ಈ ಗುಹಾಲಯದ ಮುಂಭಾಗದಲ್ಲಿ ಶಂಖನಿಧಿಗಳು, ಪದ್ಮನಿಧಿಗಳ ಶಿಲ್ಪಗಳಿವೆ. ಸಭಾ ಮಂಟಪವೆಂದುಕರೆಯಲ್ಪಡುವ ಪ್ರಾಂಗಣದಲ್ಲಿ ಶಿಲ್ಪಗಳು ಸುಂದರವಾಗಿವೆ. ತ್ರಿಭಂಗಿಯಲ್ಲಿ ನಿಂತ ಅರ್ಧನಾರೀಶ್ವರ ವಿಗ್ರಹದಲ್ಲಿ ಶಿವಪಾರ್ವತಿ ಭಾಗಗಳ ಅಂತರ ಕಂಡು ಬರುತ್ತದೆ. ಗುಹಾಲಯದೊಳಗಿನ ಈಶಾನ್ಯ ಹಾಗೂ ಆಗ್ನೇಯ ಭಾಗದಲ್ಲಿರುವ ಶೈವ ದ್ವಾರಪಾಲಕರು, ಆ ಪಕ್ಕದಲ್ಲಿರುವ ಹರಿಹರನ ಮೂರ್ತಿ ಕೆತ್ತಲಾಗಿದೆ. ಈ ಶಿಲ್ಪಕ್ಕೆದುರಿನಲ್ಲಿ ಗಂಗಾಧರ ಶಿವನ ಶಿಲ್ಪವಿದೆ. ಚತುರ್ಭುಜ ಶಿವನ ಪಕ್ಕದಲ್ಲಿಯೇ ಕೈಗಳನ್ನು ಮೇಲಕ್ಕೆತ್ತಿ ಒಂಟಿಗಾಲಿನಲ್ಲಿ ತಪಗೈದ ಭಗೀರಥ, ಎಡಪಾರ್ಶ್ವದಲ್ಲಿ ಪಾರ್ವತಿ ಆಶ್ಚರ್ಯಭರಿತಳಾಗಿ ನೋಡುತ್ತಿರುವ ಶಿಲ್ಪ ಬೆರಗು ಪಡಿಸುತ್ತವೆ.

ರಾವಳಫಡಿ ಸಭಾಮಂಟಪದ ಉತ್ತರ ಪಾರ್ಶ್ವದಲ್ಲಿ ನಟರಾಜನು ನೃತ್ಯಗೈಯುವ ಬೃಹತ್ ವಿಗ್ರಹ ಕೆತ್ತಲಾಗಿದೆ. ಸಪ್ತಮಾತ್ರಿಕೆಯರ ಪರಿವಾರವೇ ಅಲ್ಲಿ ಮೂರ್ತಗೊಂಡಿದೆ. ಬಾಲ ಗಣೇಶ ಹಾಗೂ

ಕುಮಾರಸ್ವಾಮಿಯವರನ್ನೂ ಅಲ್ಲಿ ಕೆತ್ತಲಾಗಿದೆ. ಶಿವನ ಬಲಪಕ್ಕದಲ್ಲಿ ವೈಷ್ಣವಿ ಶಿಲ್ಪವಿದೆ. ಮಂಟಪದ ಬಲಭಾಗದ ಪಾರ್ಶ್ವದಲ್ಲಿ ಬ್ರಾಹ್ಮಿ, ಮಾಹೇಶ್ವರಿ, ಕೌಮಾರೀ ಹಾಗೂ ಭೃಂಗಿ ವಿಗ್ರಹಗಳನ್ನು ಕೊರೆಯಲಾಗಿದೆ. ಎಡಪಕ್ಕದ ಗೋಡೆಯಲ್ಲಿ ವಾರಾಹಿ, ಇಂದ್ರಾಣಿ ಮತ್ತು ಚಾಮುಂಡಾರ ವಿವಿಧ ಭಂಗಿಯ ಶಿಲ್ಪಗಳಿವೆ.

ಅಂತರಾಳದಲ್ಲಿಯ ಉತ್ತರಗೋಡೆಯಲ್ಲಿ ಭೂವರಾಹ ಶಿಲ್ಪವು. ಈ ಶಿಲ್ಪಕ್ಕೆ ಎದುರಾಗಿ ದಕ್ಷಿಣಗೋಡೆಯಲ್ಲಿ ಮಹಿಷ ಮರ್ದಿನಿಯ ಶಿಲ್ಪವಿದೆ. ಇಲ್ಲಿ ಮೂರ್ತಗೊಂಡಿರುವ ಪ್ರತಿಯೊಂದು ವಿಗ್ರಹಗಳು ಪ್ರಮಾಣ ಬದ್ಧವಾಗಿರುವುದರಿಂದ ಈ ಗುಹಾಲಯದ ಮೇಲ್‌ಭತ್ತಿನಲ್ಲಿ ವಿವಿಧ ಜ್ಯಾಮಿತಿಯ ಕುಸುರಿನ ಶಿಲ್ಪಗಳು ನೋಡಲು ಆಕರ್ಷಕವೆನಿಸುತ್ತವೆ. ಈ ಗುಹಾಲಯದ ಎದುರಿನಲ್ಲಿ ವಿಜಯಸ್ತಂಭವು ನಮ್ಮ ಗಮನ ಸೆಳೆಯುತ್ತದೆ. ಇದು ಒಂದು ಶೈವ ಗುಹೆಯಾಗಿದ್ದು, ಇಲ್ಲಿರುವ ಗರ್ಭಗೃಹವು ಅಂತರಾಳದಿಂದ ಮೂಲತಃ ಕಲ್ಲುಗೋಡೆಯಿಂದ ಬೇರ್ಪಟ್ಟಿದೆ. ಇಲ್ಲಿ ಪೀಠಸಹಿತ ಲಿಂಗವಿದ್ದು ಅಂತರಾಳದಲ್ಲಿ ಪಾರ್ಶ್ವಗೋಡೆಗಳಿವೆ. ಅಧಿಷ್ಠಾನದಲ್ಲಿಯ ಎರಡು ಕಂಭಗಳು ಕೊರೆಯಲ್ಪಟ್ಟಿರುವ ಈ ಗುಹಾಲಯದಲ್ಲಿ ಎಡ ಹಾಗೂ ಬಲ ಪಾರ್ಶ್ವದಲ್ಲಿಯೂ ಎರಡೆರಡು ಸ್ತಂಭಗಳು ಅಲಂಕಾರಿಕವಾಗಿ ಕೆತ್ತಲ್ಪಟ್ಟಿವೆ. ಇದು ಒಂದು ಸರ್ವಾಂಗ ಸುಂದರ ಶಿಲ್ಪಗಳಿರುವ ಗುಹಾಲಯವಾಗಿದೆ.

**ಜೈನ ಮೀನ ಬಸದಿ :**

ಐಹೊಳೆ – ಬಾದಾಮಿ ಮಾರ್ಗದಲ್ಲಿ ಗುಡ್ಡದ ಬಂಡೆಗಲ್ಲುಗಳಲ್ಲಿ ಕೊರೆಯಲ್ಪಟ್ಟ ಜೈನ ಗುಹಾಲಯವನ್ನು ಮೀನ ಬಸದಿಯೆಂತಲೂ ಕರೆಯಲಾಗುವುದು. ಮುಂಭಾಗದಲ್ಲಿರುವ ಮುಖಮಂಟಪ, ಚೌಕ ಮಧ್ಯಮಂಟಪ, ಅದರ ಎಡಬಲದಲ್ಲಿ ಎತ್ತರದ ಅಧಿಷ್ಠಾನದ ಮೇಲಿನ ಮಂಟಪಗಳು, ಹಿಂಭಾಗದಲ್ಲಿನ ಅಧಿಷ್ಠಾನದಲ್ಲಿನ ಗರ್ಭಗೃಹ ಭಾಗಗಳಲ್ಲಿ ರೂಪುಗೊಂಡಿದೆ.



ಐಹೊಳೆಯ ಜೈನ ಗುಹಾಲಯ

ಈ ಜೈನ ಗುಹಾಲಯದ ರಚನಾಕಾಲವು ರಾವಳಫಡಿಯ ನಿರ್ಮಾಣ ಕಾಲದ್ದು ಅಂದರೆ ಕ್ರಿ.ಶ. 635–700ರಲ್ಲಿಯದು. ಈ ಜೈನಗುಹೆ ಐದು ಭಾಗಗಳಲ್ಲಿದೆ. ಮೊದಲನೆಯ ಪ್ರಾಂಗಣ ಅಥವಾ ಪಡಶಾಲೆ. ಇದು 9.14 ಮೀ. ಉದ್ದ 1.93 ಮೀ. ಅಗಲ ಹಾಗೂ 3.04 ಮೀ. ಎತ್ತರ ಇದೆ. ಮಂಟಪ ಭಾಗವು 4.57ಮೀ. ಉದ್ದ 4.52 ಮೀ. ಅಗಲ 2.74ಮೀ. ಎತ್ತರವಾಗಿದೆ. ಗರ್ಭಗೃಹವು 2.44 ಮೀ. ಉದ್ದ 2.44 ಮೀ. ಅಗಲ 2.13 ಮೀ. ಎತ್ತರವುಳ್ಳದ್ದಾಗಿದೆ. ಗುಹೆಯ ಎಡಭಾಗವು 4.26 ಮೀ. ಉದ್ದ, 2.13 ಮೀ. ಅಗಲ ಹಾಗೂ 2.13 ಮೀ. ಎತ್ತರವಾಗಿಯು, ಬಲಭಾಗವು 4.26 ಮೀ. ಉದ್ದ 2.13 ಮೀ. ಅಗಲ ಮತ್ತು 2.13 ಮೀ. ಎತ್ತರವಾಗಿರುತ್ತದೆ.

ಗುಹಾಲಯದ ಪ್ರಾಂಗಣವನ್ನು ಕಲ್ಲಿನಲ್ಲಿ ಕೆತ್ತಿ ನಿರ್ಮಿಸಲ್ಪಟ್ಟಿದೆ. ಪಡಶಾಲೆ (ಪ್ರಾಂಗಣ)ಯ ಎಡಗಡೆಯಲ್ಲಿ ಎತ್ತರವಾದ ಗೊಮ್ಮಟ (ಬಾಹುಬಲಿ), ಬಲಪಾರ್ಶ್ವದಲ್ಲಿ ಪಾರ್ಶ್ವನಾಥನ ವಿಗ್ರಹವಿದೆ.

ಗರ್ಭಗೃಹದಲ್ಲಿ ಧ್ಯಾನಾಸಕ್ತ ಜಿನದೇವನ ಶಿಲ್ಪವಿದೆ. ಈ ಗುಹೆಯ ಭತ್ತಿನಲ್ಲಿರುವ ಸುಳಿವು ಹೊಳಹುಗಳ ಅಲಂಕಾರ ಮನಸ್ಸನ್ನು ಸೂರೆಗೊಳಿಸುತ್ತದೆ. ಮಂಟಪವನ್ನು ಬೇರ್ಪಡಿಸುವಂತೆ ಇಲ್ಲಿಯ ಕೆತ್ತಿದ ಚೌಕಾಕಾರದ ಕಂಭಗಳು ಇವೆ. ಗರ್ಭಗೃಹ ಪ್ರವೇಶದ್ವಾರದ ಎರಡೂ ಬದಿಯಲ್ಲಿ ಕಮಲವನ್ನು ಹಿಡಿದ ದ್ವಾರಪಾಲಕರು ಹಾಗೂ ಕುಬ್ಜ ವಿಗ್ರಹಗಳನ್ನು ಕೆತ್ತಲಾಗಿದೆ. ವಾಸ್ತು ದೃಷ್ಟಿಯಿಂದ ಈ ಜೈನ ಗುಹೆಯೂ ಸಹ ರಾವಳಫಡಿ ಗುಹಾಲಯದ ಮಾದರಿಯಲ್ಲಿಯೇ ರಚಿತಗೊಂಡಿದೆ. ಇಲ್ಲಿರುವ ಒಂದು ಶಾಸನದಲ್ಲಿ 'ಪಳ್ಳಸ್ವಾಮಿ ಮಹಾದಿವ್ಯ ಉತುಣ' ಎಂದು ಕೆತ್ತಲಾಗಿದೆ. ಬಹುಶ: ಈ ಸ್ಥಪತಿಯೇ ಜೈನ ಗುಹಾಲಯದ ವಾಸ್ತುಶಿಲ್ಪಿಯಿರಬಹುದೆಂಬ ತರ್ಕವು ಪ್ರೊ. ಶ್ರೀನಿವಾಸ ಪಾಡಿಗಾರ ಅವರದಾಗಿದೆ. ಬಂಡೆಗಲ್ಲುಗಳಲ್ಲಿ ಕೊರೆದು ನಿರ್ಮಿಸಿರುವ ಐಹೊಳೆಯ ಜೈನ ಬಸದಿಯು ಈ ಗುಹಾಲಯ ನಿರ್ಮಾಣದ ಉದಾಹರಣೆಯಾಗಿ ಕಾಣಸಿಗುತ್ತದೆ. ಇಲ್ಲಿನ ಅಪೂರ್ವವಾದ ಶಿಲ್ಪಗಳು ಮನಕ್ಕೆ ಆಹ್ಲಾದವೆನಿಸುತ್ತವೆ.

**ಐಹೊಳೆಯ ಬೌದ್ಧ ಚೈತ್ಯಾಲಯ :**

ಐಹೊಳೆಯ ಪಕ್ಕದ ಬೆಟ್ಟದ ಮೇಗುತಿ ಜೀನಾಲಯಕ್ಕೆ ಸಾಗಿದ ಮೆಟ್ಟಿಲುಗಳ ಎಡಪಾರ್ಶ್ವದಲ್ಲಿ ಎತ್ತರದಲ್ಲಿ ಉತ್ತರಾಭಿಮುಖದಲ್ಲಿ ಕೆತ್ತಿ ನಿರ್ಮಿಸಿದ ವಾಸ್ತುಶಿಲ್ಪವೇ ಬೌದ್ಧ ಚೈತ್ಯಾಲಯ. ಇದು ಕರ್ನಾಟಕದಲ್ಲಿ ಕಾಣಸಿಗುವ ಬೌದ್ಧ ಚೈತ್ಯಾಲಯಗಳಲ್ಲಿಯೇ ತುಂಬಾ ಪ್ರಾಚೀನವಾದುದೆಂಬ ಅಭಿಪ್ರಾಯ ಸಂಶೋಧಕರದಾಗಿದೆ. (ಡಾ. ಎಸ್.ರಾಜಶೇಖರ ಚಾಲುಕ್ಯ ದೇವಾಲಯಗಳು, ಚಾಲುಕ್ಯ ಶ್ರೀ ಬಾದಾಮಿ, ಪುಟ – 74). ಇದೊಂದು ಎರಡು ಮಹಡಿಗಳುಳ್ಳ ವಾಸ್ತು ರಚನೆ. ಮೇಲಿನ ಮಹಡಿ ಒಂದು ಚೈತ್ಯವಾಗಿದ್ದು, ಇದರಲ್ಲಿ ಕೂಟ-ಶಾಲ ಮಾದರಿ ಚಿತ್ರವಿದೆ. ಗರ್ಭಗೃಹದ ಬಾಗಿಲ ಎದುರಿನಲ್ಲಿ ಮಧ್ಯ ಅಂಕಣದ ಮೇಲ್ಗಂಡಿನಲ್ಲಿ ಧ್ಯಾನಾಸಕ್ತ ಬುದ್ಧನ ವಿಗ್ರಹವಿದೆ. ಇದು ಸಂಶೋಧನೆಗೊಂಡಿದ್ದು ಡಾ. ಎಸ್. ಶೆಟ್ಟರ ಅವರಿಂದ. ಕೆಳಗಿನ ಅಂತಸ್ತಿನ ಬಾಗಿಲು ವಾಡದ ಶಾಖೆಯಲ್ಲಿ ಬುದ್ಧನ ಉಬ್ಬು ಶಿಲ್ಪಗಳಲ್ಲಿ ಶಿವನ ಜೀವನದ ಕೆಲವು ಪ್ರಸಂಗಗಳನ್ನು, ಜಾತಕ ಕತೆಗಳ ಸನ್ನಿವೇಶಗಳನ್ನು ಕೆತ್ತಿರುವುದು ಕಂಡು ಬರುತ್ತದೆ.



ಐಹೊಳೆ ಬೌದ್ಧ ಚೈತ್ಯಾಲಯ

ಐಹೊಳೆಯಲ್ಲಿ ನಿರ್ಮಾಣಗೊಂಡಿರುವ ಈ ಅರಿಗುಹಾಲಯದ ಮಾದರಿಯಲ್ಲಿರುವ ರಚನೆಯು ಬಂಡೆಗಲ್ಲುಗಳನ್ನೇ ಕೊರೆದು ನಿರ್ಮಿಸಿದ್ದು ಕಂಡು ಬರುತ್ತದೆ. ಈ ಗುಹೆಯಲ್ಲಿ ಪ್ರಾಂಗಣ, ಅಂತರಾಳ ಮತ್ತು ಗರ್ಭಗೃಹ ಮಾತ್ರವಿದ್ದು ಮೇಲೆ ದ್ರಾವಿಡ ಶೈಲಿಯ ವಿಮಾನವಿದೆ. ಮೇಲಿನ ಹಾಗೂ ಕೆಳಗಿನ ಕಟ್ಟಡಕ್ಕೆ ನಾಲ್ಕು ನಾಲ್ಕು ಕಂಬಗಳನ್ನು ರಚಿಸಿದ್ದು, ಮೇಲಂತಸ್ತಿನಂತೆಯೇ ಕೆಳಗಿನಂತಸ್ತಿನಲ್ಲಿ ಪ್ರಾಂಗಣ ಅದರ ಹಿಮ್ಮಗ್ಗಲು ಚೌಕಾದ ಕೋಣೆಯಿದೆ. ಪ್ರಾಂಗಣದ ಮೇಲ್‌ಭತ್ತಿನಲ್ಲಿ 61 ಸೆಂ. ಮೀ. ಗಾತ್ರದ ಬುದ್ಧನ ಚಿತ್ರ ಕೆತ್ತಲಾಗಿದೆ. ಈ ಬೌದ್ಧ ಚೈತ್ಯಾಲಯದ ನಿರ್ಮಾಣ ಕ್ರಿ.ಶ. 5ನೆಯ ಶತಮಾನದಷ್ಟು ಪ್ರಾಚೀನವಾದದ್ದೆಂಬುದು ಎಂ.ಎಂ. ಅಣ್ಣಿಗೇರಿಯವರ ಅಭಿಪ್ರಾಯ. (ಎ.ಎಂ.ಅಣ್ಣಿಗೇರಿ, ಐಹೊಳೆ: ಸಂಸ್ಕೃತಿ ಮತ್ತು ಕಲೆ, ಪುಟ 115).

ಈ ಚೈತ್ಯಾಲಯದ ವಾಸ್ತುಶಿಲ್ಪದ ಬಗೆಗೆ ನಾವು ವಿಶ್ಲೇಷಿಸುವಾಗ ಗರ್ಭಗುಡಿಯ ಮುಂದೆ ಮಂಟಪದ ಸಂಯೋಜನೆಯಿದ್ದು, ಪ್ರದಕ್ಷಿಣಾ ಪಥವಿರುವುದಿಲ್ಲ. ಈ ರೀತಿಯ ಪದವಿನ್ಯಾಸದ ಪ್ರಯೋಗ ಬಾದಾಮಿ ಚಾಲುಕ್ಯರ ರಚನೆಯಲ್ಲಿರುವ ವಿಶೇಷ ಅಂಶವೆಂಬುದನ್ನು ನಾವು ಗಮನಿಸಬೇಕು. ಈ ಬೌದ್ಧ ಚೈತ್ಯಾಲಯದ ತಲವಿನ್ಯಾಸವೂ ಸಹ ವಾಸ್ತುಮಂಡಲವನ್ನು ಅನುಸರಿಸಿ ರೂಪಿಸಿದ ವಾಸ್ತುಶಿಲ್ಪದ ಪ್ರಯೋಗವಾಗಿರುವುದು. ಇದು ಐಹೊಳೆಯಲ್ಲಿ ನಡೆಸಿದ ವಿಶಿಷ್ಟ ವಾಸ್ತುರಚನೆ.

**ಬಾದಾಮಿಯ ಸುಂದರ ಗುಹಾಲಯಗಳು :**



**ಬಾದಾಮಿಯಲ್ಲಿರುವ ಗುಹಾಂತರ್ದೇವಾಲಯಗಳ ಒಟ್ಟು ನೋಟ**

ಬಾದಾಮಿ ಚಾಲುಕ್ಯ ಸ್ಥಪತಿಗಳು ಭಾರತೀಯ ವಾಸ್ತುಶಿಲ್ಪ ಕ್ಷೇತ್ರಕ್ಕೆ ನೀಡಿದ ಅಮೋಘ ಕೊಡುಗೆಗಳೆಂದರೆ ಬಾದಾಮಿಯಲ್ಲಿ ಬೆಟ್ಟಗಳ ಬಂಡೆಗಲ್ಲುಗಳಲ್ಲಿ ಕೊರೆದು ನಿರ್ಮಾಣ ಮಾಡಿರುವ ಸುಂದರವಾದ ನಾಲ್ಕು ಗುಹಾದೇವಾಲಯಗಳು ಕಲ್ಬೆಟ್ಟದಲ್ಲಿ ಬೇಕಿರುವ ಭಾಗಗಳನ್ನುಳಿಸಿಕೊಂಡು ಬೇಡದ ಭಾಗವನ್ನು ತೆಗೆದುಹಾಕಿರುವ ವ್ಯವಕಲನ ಕ್ರಿಯೆಯಲ್ಲಿ ಉದ್ಭವಗೊಂಡವು ಈ ಗುಹಾದೇವಾಲಯಗಳೆಂದು ಡಾ. ಶೀಲಾಕಾಂತ ಪತ್ತಾರರು ತಮ್ಮ "ಬಾದಾಮಿ ಸಾಂಸ್ಕೃತಿಕ ಅಧ್ಯಯನ" ಗ್ರಂಥದಲ್ಲಿ ವಿವರವಾಗಿ ವ್ಯಾಖ್ಯೆ ನೀಡಿದ್ದಾರೆ. ಅವರು ಇಲ್ಲಿನ ವಾಸ್ತು ವಿಶೇಷತೆಗಳ ಬಗ್ಗೆ ವಿವರಿಸುವಾಗ "ರಾಚನಿಕ ಕಟ್ಟಡಗಳಲ್ಲಿ ಬೇಕಾದ ಭಾಗವನ್ನು ತಂದು ಜೋಡಿಸಲಾಗುತ್ತದೆ. ಅದು ಸಂಕಲನ ಕ್ರಿಯೆ. ಇಂತಹ ರಚಿತ ಕಟ್ಟಡಗಳ ನಿರ್ಮಾಣ ಕಾರ್ಯವು ತಳಪಾಯದಿಂದ ಆರಂಭವಾಗಿ ಶಿಖರದಂಚಿನವರೆಗೆ ಏರುತ್ತ ಸಾಗಿದರೆ ಗುಹಾಲಯಗಳ ನಿರ್ಮಾಣ ಕಾರ್ಯವು ಮೇಲಿನಿಂದ ಮೊದಲುಗೊಂಡು ಪಾವಟಿಗೆಗಳವರೆಗೆ ಇಳಿಯುತ್ತ ಬರುತ್ತದೆ. ಹೀಗೆ ಗುಹಾಲಯಗಳ ರಚನಾಕಾರ್ಯ ರಾಚನೀಯ ಕಟ್ಟಡಗಳಿಗಿಂತ ಭಿನ್ನವಾದುದು" ಎಂದು ಹೇಳುತ್ತಾರೆ.

ಬಾದಾಮಿಯಲ್ಲಿ ಕೊರೆದಿರುವ ಜಗತ್‌ಪ್ರಸಿದ್ಧ ಗುಹಾಲಯಗಳು ಚಾಲುಕ್ಯ ಅರಸರು ಪ್ರೀತಿಸಿ, ಗೌರವಿಸಿದ ಶೈವ, ವೈಷ್ಣವ ಹಾಗೂ ಜೈನ ಮತಕ್ಕೆ ಸಂಬಂಧಿಸಿದ ಅಮರವಾದ ಗುಹಾಲಯಗಳನ್ನು ನಿರ್ಮಾಣಗೈದು ತಮ್ಮ ಕಲಾವೈಭವವನ್ನು ಮೆರೆಸಿದ್ದಾರೆ. 'ಕಲ್ಮನೆ' ಎಂದು ಕರೆಯಲ್ಪಟ್ಟ ಬಾದಾಮಿಯ ನಾಲ್ಕು ಗುಹಾಲಯಗಳಲ್ಲಿ ಮೊದಲನೆಯದು ಶಿವಾಲಯವಾಗಿದ್ದರೆ ಎರಡು ಹಾಗೂ ಮೂರನೆಯ ಗುಹಾಲಯಗಳು ವೈಷ್ಣವ ಗುಹಾಲಯಗಳು, ನಾಲ್ಕನೆಯದು ಜೈನ ಗುಹಾಲಯವಾಗಿದೆ. ಬಾದಾಮಿಯ ಜನರಲ್ಲಿ ಇವು ಮೇಣಬಸದಿಗಳು ಎಂದೇ ಪ್ರಸಿದ್ಧವಾಗಿವೆ.

**ಗುಹಾಲಯಗಳ ವಿಶೇಷ ಗುಣಲಕ್ಷಣಗಳು :**

ಬಾದಾಮಿಯ ಗುಹಾಲಯಗಳನ್ನು ದೇವಮಂದಿರಗಳಾಗಿರುವ ಕಾರಣಕ್ಕೆ ಗುಹಾದೇವಾಲಯಗಳೆಂದೂ ಕರೆಯಲಾಗುತ್ತದೆ. ಈ ಪ್ರತಿಯೊಂದು ಗುಹಾಲಯಗಳು ಉತ್ತರಾಭಿಮುಖವಾಗಿ ಬೃಹತ್ ಕಲ್ಲುಬಂಡೆಗಳಲ್ಲಿ ಕೊರೆಯಲ್ಪಟ್ಟಿವೆ. ಮುಂದೆ ವಿಶಾಲವಾದ ಅಂಗಳಗಳನ್ನು ಕಾಣಬಹುದಾಗಿದೆ. ಈ ಗುಹಾಲಯಗಳಲ್ಲಿ ಅಧಿಷ್ಠಾನವು ಭೂಭಾಗದಿಂದ ಎತ್ತರದಲ್ಲಿದ್ದು ಅದರ "ಗಳ" ಭಾಗದಲ್ಲಿ ವಿವಿಧ ಗಣಗಳುಂಟು. ಪ್ರತಿಯೊಂದು ಗುಹಾಲಯಗಳಲ್ಲಿಯೂ ಸಾಮಾನ್ಯ ವಾಸ್ತುಭಾಗಗಳಾದ ಗರ್ಭಗೃಹ, ಮಹಾಮಂಟಪ, ಮೊಗಶಾಲೆಗಳಿವೆ. ಇವು ಐಹೊಳೆಯಲ್ಲಿನ ರಾವಳಫಡಿ ಗುಹಾಲಯ ಹಾಗೂ ಜೈನ ಗುಹಾಲಯಗಳಲ್ಲಿರುವಂತೆ ಗರ್ಭಗೃಹ, ಅಂತರಾಳ, ಸಭಾಮಂಟಪ ಪಾರ್ಶ್ವಕೋಷ್ಠಗಳಂತೆ ವಿಶಾಲವಾಗಿಲ್ಲದೇ ಹೋದರೂ ಇಲ್ಲಿನ ಗುಹಾಲಯಗಳಲ್ಲಿನ ಬೃಹತ್ ಮೂರ್ತಿ ಶಿಲ್ಪಗಳಿಂದಾಗಿ ವಿಶೇಷ ಮಹತ್ವದ್ದೆನಿಸುತ್ತವೆ. ಈ ಗುಹಾಲಯಗಳಲ್ಲಿನ ಗರ್ಭಗೃಹ ಪ್ರವೇಶ ಮಾಡಲು ಮೆಟ್ಟಿಲುಗಳನ್ನೇರಿ ಎತ್ತರದಲ್ಲಿ ನಾವು ಹೋಗಬೇಕು. ಗುಹಾಲಯಗಳು ನಿರಂಧಾರ ಮಾದರಿಯ ರಚನೆಗಳಾಗಿರುವುದರಿಂದ ಅಲ್ಲಿ ಪ್ರದಕ್ಷಿಣಾ ಪಥಗಳಿರುವುದಿಲ್ಲ. ಇಲ್ಲಿರುವ ಕಂಭಗಳು, ಏಕಶಿಲೆಯಲ್ಲೇ ನಿರ್ಮಾಣಗೊಂಡಿರುವುದರಿಂದಾಗಿ ಹೆಚ್ಚಿನ ಕಂಭಗಳು ವಾಸ್ತು ನಿರ್ಮಿತಿಯ ಪ್ರಧಾನ ಅಂಗವೆನಿಸುತ್ತವೆ ಹಾಗೂ ವೈವಿಧ್ಯಪೂರ್ಣವೆನಿಸುತ್ತವೆ.

**1ನೆಯ ಗುಹಾಲಯ :**


1ನೆಯ ಗುಹಾಲಯದ ತಲನಕ್ಷೆ



ಬಾದಾಮಿಯ ಚಾಲುಕ್ಯ ಶಿಲ್ಪಿಗಳಿಂದ ಕೊರೆಯಲ್ಪಟ್ಟ ಮೊದಲನೆಯ ಗುಹಾಲಯವು ಶೈವ ಸಂಬಂಧಿ ವಿಗ್ರಹಗಳಿಂದಾಗಿ ಶೈವ ಗುಹಾಲಯವೆಂದೇ ಕರೆಯಲ್ಪಡುತ್ತದೆ. ಶೈವ ಗುಹಾಲಯದಲ್ಲಿ ಮೊಗಸಾಲೆ, ಸಭಾಮಂಟಪ, ಗರ್ಭಗೃಹದ ಜೊತೆಯಲ್ಲಿ ಪಶ್ಚಿಮಗೋಡೆಯಲ್ಲಿ ಚಿಕ್ಕದಾದ ಗುಹೆಯನ್ನು ಕೊರೆಯಲಾಗಿದೆ. ಇದಕ್ಕೆ ಹೊಂದಿಕೊಂಡ ಗೋಡೆಯ ಮೇಲೆ ಬೃಹತ್ತಾದ ನಟರಾಜನ ಅಪೂರ್ವ ಶಿಲ್ಪವಿದೆ. ಹದಿನೆಂಟು ಕೈಗಳಲ್ಲಿ ತನ್ನ ವಿಶೇಷ ನಾಟ್ಯ ಭಂಗಿಯಲ್ಲಿ ರೂಪುಗೊಂಡು ಮಹಾನಟನ ಈ ವಿಗ್ರಹವು ದೂರದಿಂದಲೇ ತನ್ನ ಆಕರ್ಷಕ ಚೆಲುವಿನಿಂದ ಮನಸೆಳೆಯುತ್ತದೆ. ಸರ್ಪ, ಪಾಶ, ವೀಣೆ, ತ್ರಿಶೂಲ

ಮೊದಲಾದ ಆಯುಧಗಳೊಂದಿಗೆ ಕೆತ್ತಲ್ಪಟ್ಟ ಶಿವನು ನಾಟ್ಯಲೀನನಾಗಿದ್ದಾನೆ. ಕಲಾರಸಿಕರ ಹೃದಯವನ್ನು ಸೂರೆಗೊಳ್ಳುತ್ತಾನೆ. ನಟರಾಜನ ಈ ವಿಗ್ರಹವು ಅಸಂಖ್ಯಾತ ಯಾತ್ರಿಕರ ಮನಸೆಳೆಯುತ್ತದೆ. ಮೊದಲನೆಯ ಗುಹಾಲಯದ ಮುಖ ಮಂಟಪದಲ್ಲಿರುವ ಹರಿಹರ ಹಾಗೂ ಅರ್ಧನಾರೀಶ್ವರ ವಿಗ್ರಹಗಳು ಸುಂದರವಾಗಿದೆ. ಹರಿಹರ ಮೂರ್ತಿಯು ಪೂರ್ವದ ಗೋಡೆಯನ್ನಾವರಿಸಿದ್ದು ಅರ್ಧ ಭಾಗವು ಶಿವನದಾದರೆ ಇನ್ನರ್ಧ ಭಾಗವು ವಿಷ್ಣುವಿನದು. ಶಿವನ ಹತ್ತಿರ ಪಾರ್ವತಿ, ವಿಷ್ಣುವಿನ ಪಕ್ಕದಲ್ಲಿ ಲಕ್ಷ್ಮೀ ಸಾಲಂಕೃತರಾಗಿ ನಿಂತಿದ್ದಾರೆ. ಈ ಎರಡೂ ಶಿಲ್ಪಗಳಲ್ಲಿಯ ಕಲಾತ್ಮಕ ನಿರ್ಮಾಣದಲ್ಲಿ ಶಿವ ಹಾಗು ವಿಷ್ಣು ಅಭಿನ್ನರೆಂಬ ಸಂದೇಶವಿದೆ. ಬೃಹತ್ ಶಿಲ್ಪ ಗಣವನ್ನು ಪಟ್ಟಿಕೆಯಲ್ಲಿ ಸುಂದರವಾಗಿ ಕೆತ್ತಲಾಗಿದೆ.

ಅರ್ಧನಾರೀಶ್ವರ ವಿಗ್ರಹವು ಈ ಗುಹಾಲಯದಲ್ಲಿನ ಇನ್ನೊಂದು ಪರಿಪೂರ್ಣ ಕಲಾಕೃತಿ. ಇದೂ ಕೂಡ ಸಂಯುಕ್ತ ಪ್ರತಿಮೆಯಾಗಿದ್ದು, 'ಶಿವಶಕ್ತಿ'ಯರ ಏಕತೆಯನ್ನು ತೋರ್ಪಡಿಸುತ್ತದೆ. ಬಲಅರ್ಧ ಶಿವನದಾಗಿ ಎಡ ಅರ್ಧ ಭಾಗದಲ್ಲಿ ಪಾರ್ವತಿ ಚಿತ್ರಿತಗೊಂಡಿದ್ದಾಳೆ. ನಂದಿ ಭೃಂಗಿ, ಸೇವಕಿಯರೊಂದಿಗೆ ಚಿತ್ತಾಕರ್ಷಕವಾಗಿ ಈ ಶಿಲ್ಪದಲ್ಲಿ ವೀಣೆಯನ್ನು ನುಡಿಸುವ ಒಂದು ಕೈ ಶಿವನದಾಗಿದ್ದರೆ ಇನ್ನೊಂದು ಕೈಯು ಪಾರ್ವತಿಯದಾಗಿದೆ. ಶಿವಶಕ್ತಿಯರ ಏಕತೆಯನ್ನು ಈ ಅರ್ಧನಾರೀಶ್ವರ ವಿಗ್ರಹ ತೋರ್ಪಡಿಸುತ್ತದೆ. ಈ ಶೈವ ಗುಹೆಯ ಪಶ್ಚಿಮದ ಉಪ ಗುಹೆಯಲ್ಲಿ ಮಹಿಷಮರ್ದಿನಿಯ ಮೂರ್ತಿಯನ್ನು ಕೆತ್ತಲಾಗಿದೆ. ಹಾಗೆಯೇ ಉಪಗುಹೆಯ ಉತ್ತರ ಗೋಡೆಯಲ್ಲಿ ಗಣಪತಿಯ ಮೂರ್ತಿಯನ್ನು ಆತನ ತಲೆಯಮೇಲೆ ಸುಂದರ ಕಮಲದ ಕೆತ್ತನೆಯಿದೆ. ದಕ್ಷಿಣದ ಗೋಡೆಯಲ್ಲಿ ಮಯೂರ ವಾಹನದ ಕಾರ್ತಿಕೇಯನನ್ನು ಸುಂದರವಾಗಿ ನಿರ್ಮಿಸಲಾಗಿದೆ. ಜತೆಗೆ ಶಿವನ ಪರಿವಾರವನ್ನು ಅಲ್ಲಿ ಚಿತ್ರಿಸಲಾಗಿದೆ. ಈ ಶೈವ ಗುಹಾಲಯದ ಮೇಲ್ಪಂಕ್ತಿಯಲ್ಲಿ ಐದು ಹೆಡೆಗಳ ಆದಿಶೇಷನನ್ನು, ವಿದ್ಯಾಧರ ದಂಪತಿಗಳನ್ನು, ದ್ವಾರಪಾಲಕರ ಕೆಳಗಿರುವ ಗಜವೃಷಭ ಶಿಲ್ಪಗಳು ಕಲಾ ಪ್ರೇಮಿಗಳನ್ನು ಆಕರ್ಷಿಸುತ್ತವೆ.


2ನೇ ಗುಹಾಲಯ

**2ನೇ ಗುಹಾಲಯ**

ಶೈವಗುಹೆಯ ಪೂರ್ವ ಭಾಗದತ್ತ ಮೆಟ್ಟಿಲುಗಳನ್ನೇರಿ ಸಾಗಿದರೆ ನಮ್ಮ ದೃಷ್ಟಿಗೆ ಬೀಳುವುದು ವೈಷ್ಣವ ಗುಹಾಲಯ. ಇದು ಶೈವ ಗುಹಾಲಯಕ್ಕಿಂತ ಚಿಕ್ಕದಾಗಿದ್ದರೂ ಗುಹೆಯ ಅಧಿಷ್ಠಾನದ ಶಿಲ್ಪಗಳು ತಮ್ಮ ನಿಖರತೆಯನ್ನು ಉಳಿಸಿಕೊಂಡಿವೆ. ಈ ಲಯನದ ಮೊಗಸಾಲೆಯ ಗೋಡೆಗಳಲ್ಲಿ ಬೃಹದಾಕಾರದ ಶಿಲ್ಪಗಳನ್ನು ಕೆತ್ತಲಾಗಿದೆ. ಚಾಲುಕ್ಯರು ಭೂಮಿಯನ್ನು ಹೊತ್ತ ವರಾಹನಂತೆ ತಾವೂ ಭೂಮಾತೆಯ ರಕ್ಷಕರೆಂಬಂತೆ ವರಾಹವನ್ನು ರಾಜ ಲಾಂಛನವನ್ನಾಗಿಯೂ ಚಿನ್ನದ ನಾಣ್ಯಗಳಲ್ಲಿ ವರಾಹ ಮುದ್ರೆಗಳನ್ನು ಅಚ್ಚುಗೊಳಿಸಿ ಅವುಗಳನ್ನು ವರಾಹ ರೂಪದಲ್ಲಿ ವ್ಯವಹರಿಸಿದ್ದಾಗಿ ತಿಳಿಯುತ್ತದೆ. ಈ ಗುಹೆಯ ಪಶ್ಚಿಮ ಗೋಡೆಯಲ್ಲಿ ವಿಷ್ಣುವಿನ

ವಾಮನಾವತಾರದ ಶಿಲ್ಪವನ್ನು ಕೆತ್ತಲಾಗಿದೆ. ತ್ರಿವಿಕ್ರಮನು ಆಕಾಶದತ್ತ ಕಾಲನ್ನೆತ್ತಿ ನಿಂತಿದ್ದಾನೆ. ಇಲ್ಲಿ ವಿಷ್ಣು ವಿಪ್ರನಾಗಿ ನಿಂತಿದ್ದರೆ, ಆತನೆದುರಲ್ಲಿ ಬಲಿಚಕ್ರವರ್ತಿಯ ಗುರುಗಳು ಅರ್ಘ್ಯ ನೀಡುತ್ತಿರುವ ಚಿತ್ರಣವಿದೆ. ತನ್ನ ಪರಿವಾರದೊಂದಿಗೆ ಬಲಿ ಚಕ್ರವರ್ತಿಯು ಗುರು ಸಮ್ಮುಖದಲ್ಲಿ ಮೂರು ಹೆಜ್ಜೆಗಳ ಭೂಮಿಯ ದಾನವನ್ನು ಬ್ರಾಹ್ಮಣನಿಗೆ ಮಾಡುತ್ತಿದ್ದಾನೆ. ಈ ಸಂದರ್ಭದಲ್ಲಿಯೇ ವಿಷ್ಣು ವಿರಾಟ ರೂಪವನ್ನು ತಳೆದು ಒಂದು ಪಾದದಿಂದ ಭೂಮಿಯನ್ನು ಇನ್ನೊಂದು ಪಾದದಿಂದ ಆಕಾಶವನ್ನು ಆವರಿಸಿದ ದೃಶ್ಯ ಇಲ್ಲಿ ಕೆತ್ತಲ್ಪಟ್ಟಿದೆ. ತ್ರಿವಿಕ್ರಮನ ಏಳು ಕೈಗಳಲ್ಲಿ ವಿವಿಧ ಆಯುಧಗಳಿದ್ದು, ಎಂಟನೆಯ ಕೈಯ ಬೆರಳು ಆಕಾಶದತ್ತ ತೋರಿದೆ. ಮೂರನೇಯ ಹೆಜ್ಜೆಗಾಗಿ ಸ್ಥಳವೆಲ್ಲಿ ಎಂದು ಬಲಿಚಕ್ರವರ್ತಿಯನ್ನು ಕೇಳುವಂತಿದೆ. ಶಿಲ್ಪಿಯ ಅಮೋಘವಾದ ಈ ಮೂರ್ತಿಯು ಒಂದು ಸುಂದರ ಶಿಲ್ಪವಾಗಿದೆ. ಈ ಗುಹಾಲಯದ ಮೊಗಸಾಲೆಯ ತೊಲೆಗಳಲ್ಲಿ ಕೃಷ್ಣನಿಗೆ ಸಂಬಂಧಿಸಿದ ಕಥಾನಕವುಳ್ಳ ಶಿಲ್ಪ ಪಟ್ಟಿಕೆಗಳಿವೆ. ಮೊಗಸಾಲೆಯ ಛತ್ತಿನಲ್ಲಿ ಸ್ವಸ್ತಿಕ ಮತ್ತು ಮತ್ಸ್ಯ ಚಕ್ರದ ಅಲಂಕರಣವಿದೆ. ವರ್ಣರಂಜಿತವಾಗಿದ್ದ ಈ ಕಲ್ಮನೆಯ ಮೇಲ್ಛಾವಣಿಯಲ್ಲಿ ಬಣ್ಣದ ಅವಶೇಷಗಳು ಕಾಣಿಸುತ್ತವೆ.

**ಎರಡನೇಯ ವೈಷ್ಣವ ಗುಹಾಲಯ ವಿಶೇಷಗಳು:**



**ವರಾಹ ವಿಗ್ರಹ ಹಾಗೂ ಗಣಗಳು**

ಇದೊಂದು ವಿಷ್ಣು ಗುಹಾಲಯ. ವಿಷ್ಣುವಿಗೆ ಸಂಬಂಧಿತವಾದ ಹಲವಾರು ದೊಡ್ಡ ಗಾತ್ರದ ಶಿಲ್ಪಗಳನ್ನು ನಾವು ಇಲ್ಲಿ ನೋಡಬಹುದು. ಈ ಗುಹಾಲಯವನ್ನು ವೀಕ್ಷಿಸಲು ಸೋಪಾನಗಳನ್ನೇರಿ ಮೊಗಸಾಲೆಯನ್ನು ನಾವು ಪ್ರವೇಶಿಸಬೇಕು. ಅಲ್ಲಿಯ ದ್ವಾರಪಾಲಕರನ್ನು ಕಂಡು ನಾಲ್ಕು ಕಂಬಗಳ ಸಾಲು ದಾಟಿದೊಡನೆ ಮುಖ ಮಂಟಪವಿದೆ. ಅಲ್ಲಿ ಮತ್ತೆರಡು ಕಂಬಗಳೆದುರಾಗುತ್ತವೆ. ಇಲ್ಲಿರುವ ಬೃಹತ್ ಗಾತ್ರದ ಶಿಲ್ಪಗಳು ನಮ್ಮ ಗಮನವನ್ನು ಸೆಳೆಯುತ್ತವೆ. ಪಶ್ಚಿಮ ಗೋಡೆಯಲ್ಲಿನ ತ್ರಿವಿಕ್ರಮ ಪೂರ್ವ ಗೋಡೆಯಲ್ಲಿಯ ಭೂವರಾಹ ಮೂರ್ತಿಗಳು, ಮಧ್ಯ ಅಂಕಣದಲ್ಲಿ ಕೆತ್ತಿರುವ ವಾಮನವತಾರದ ವಿಗ್ರಹ, ಬೃಹತ್ ತ್ರಿವಿಕ್ರಮ ಮೂರ್ತಿಗಳು ನಮ್ಮ ಗಮನವನ್ನು ಸೆಳೆಯುತ್ತವೆ. ಗಾತ್ರದಲ್ಲಿ ಚಿಕ್ಕದೆನಿಸದರೂ ಗರ್ಭಗೃಹದ ಮುಂದೆ ನಾಲ್ಕು ನಾಲ್ಕು ಕಂಬಗಳ ಪ್ರದೇಶದ ಪ್ರಾಂಗಣವಿದೆ. ಎತ್ತರವಾದ ಗರ್ಭಗೃಹವನ್ನು ಪ್ರವೇಶಿಸಲು ಸೋಪಾನಗಳನ್ನೇರಿಯೇ ಹೋಗಬೇಕು. ಶಿಲ್ಪ ಹಾಗೂ ಕಲಾತ್ಮಕ ದೃಷ್ಟಿಯಿಂದಾಗಿ ಇದೊಂದು ಸುಂದರವಾದ ವೈಷ್ಣವಗುಹೆ. ಮಧ್ಯಾಂಕಣದಲ್ಲಿರುವ ಉಬ್ಬು ಶಿಲ್ಪದಲ್ಲಿನ ಸುದರ್ಶನ ಚಕ್ರ, ತೊಲೆಯ ಮೇಲಿನ ಸಮುದ್ರ ಮಂಥನ ಶಿಲ್ಪಗಳು, ಭಾಗವತ ಕಥಾನಕವುಳ್ಳ ಶಿಲ್ಪಗಳು ನಮ್ಮ ಗಮನ ಸೆಳೆಯುತ್ತವೆ. ಛತ್ತಿನಲ್ಲಿ ಚಿತ್ರಿಸಿರುವ ಸ್ವಸ್ತಿಕ ವಿನ್ಯಾಸದ ಕೆತ್ತನೆ ಆಕರ್ಷಣೀಯವೆನಿಸುತ್ತವೆ.

**2ನೇಯ ವಿಷ್ಣು ಗುಹಾಲಯ ತಲವಿನ್ಯಾಸ**



**2ನೇಯ ಗುಹಾಲಯ ತಲವಿನ್ಯಾಸ**

ಈ ಗುಹಾಲಯವು ಮೊದಲನೆಯ ಶೈವ ಗುಹಾಲಯಕ್ಕಿಂತಲೂ ಭಿನ್ನವೆನಿಸುತ್ತವೆ. "ಭಂಗಿಗಳ ಆಯ್ಕೆ, ಮಕುಟ, ಆಭರಣ, ಪ್ರಭಾಮಂಡಲ, ವೇಷ ಭೂಷಣಗಳ ರಚನೆ, ಮುಖಭಾವ, ರೂಪ–ಸಂಸ್ಕರಣ ಮುಂತಾದವುಗಳಲ್ಲಿನ ವೈಶಿಷ್ಟ್ಯವನ್ನು ಗುರುತಿಸಬಹುದು. ಮುಖ ಮತ್ತು ದೇಹದ ಎತ್ತರದ ಪರಸ್ಪರ ಪ್ರಮಾಣ ಸುಮಾರು 1:4ರಷ್ಟಿದೆ. ಹೀಗಾಗಿ ವ್ಯಕ್ತಿಗಳು ಕುಳ್ಳರಾಗಿ ಕಾಣುತ್ತಾರೆ. ಹಿರಿಯ ಶಿಲ್ಪಗಳಷ್ಟೇ ಅಲ್ಲದೇ ಅಧಿಕತರ ಕಿರುಶಿಲ್ಪಗಳು ಕೂಡಾ ಒಂದೇ ಶೈಲಿಗನುಗುಣವಾಗಿ ರಚಿತವಾಗಿರುವುದರಿಂದ ಈ ಗುಹಾಲಯದ ಹೆಚ್ಚಿನ ಹಿರಿಕಿರಿಯ ಶಿಲ್ಪಗಳೆಲ್ಲವೂ ಒಂದೇ ಶಿಲ್ಪಶ್ರೇಣಿಯ ಪರಿಸರದಲ್ಲಿ ಬೆಳೆದು ಬಂದ ಶಿಲ್ಪಿಗಳ ಕೈಚಳಕದ ಪ್ರತಿನಿಧಿಯಾಗಿವೆ. ದ್ವಾರಪಾಲಕರ ಶಿಲ್ಪಗಳಂತೂ ಉತ್ತರ ದಖನ್ನಿನ ಎಲ್ಲೋರದ, ಎಲಿಫೆಂಟಾದ ಗುಹಾಲಯಗಳ ಶಿಲ್ಪಗಳ ಶೈಲಿ, ಭಾವ, ಅಭಿವ್ಯಕ್ತಿಗಳಲ್ಲಿವೆ. ಆ ಪ್ರದೇಶದಿಂದ ಬಂದ ಶಿಲ್ಪಿಗಳಿವರಾಗಿರಬೇಕು". (ಪ್ರೊ. ಶ್ರೀನಿವಾಸ ಪಾಡಿಗಾರ ಚಾಲುಕ್ಯ ಗುಹಾಲಯಗಳ ಶಿಲ್ಪ ಬಾದಾಮಿ ಚಾಲುಕ್ಯರು ಲೇಖನ ಸಂಪುಟ. ಪುಟ -345).

ಎರಡನೇಯದಾದ ಈ ವಿಷ್ಣು ಗುಹಾಲಯದ ಪೂರ್ವದತ್ತ ಮತ್ತೆ ಮೆಟ್ಟಿಲುಗಳನ್ನೇರಿದರೆ ವಿಶಾಲ ಅಂಗಳವನ್ನು ಹೊಂದಿದ ಸುಂದರ ಮಹಾವಿಷ್ಣು ಗುಹಾಲಯವಿದೆ. ಇಲ್ಲಿನ ಕಂಬವೊಂದರ ಮೇಲೆ ಕೆತ್ತಿದ ಶಾಸನದಲ್ಲಿ ಇದನ್ನು "ಮಹಾವಿಷ್ಣು ಗೃಹ" ವೆಂದು ಕರೆದಿದ್ದರೆ ಇನ್ನೊಂದು ಶಾಸನವು ಕಲ್ಮನೆಯೆಂದು ಹೆಸರಿಸಿದೆ. ಚಾಲುಕ್ಯ ಗುಹಾಲಯಗಳಲ್ಲಿ ತುಂಬಾ ಆಕರ್ಷಕವಾಗಿರುವುದು. ಕ್ರಿ.ಶ. 578ರಲ್ಲಿ ನಿರ್ಮಿಸಿದ ಈ ಗುಹಾಲಯವು ಹೆಚ್ಚು ಕಲಾತ್ಮಕವಾಗಿ ರೂಪುಗೊಂಡಿದೆ. ವಾಸ್ತು ಕಲಾದೃಷ್ಟಿಯಿಂದ ಇದು ಮಹತ್ವದ ಗುಹಾದೇವಾಲಯವಾಗಿಯೂ ಪರಿಗಣಿಸಲ್ಪಡುತ್ತದೆ.

**3ನೇಯ ಮಹಾವಿಷ್ಣು ಗುಹಾಲಯ :**

ಈ ಬೃಹದಾಕಾರದ ಮೇಣಬಸದಿಯ ವಾಸ್ತು ವೈಭವವನ್ನು ನೋಡಿ ಸಂತೃಪ್ತಿ ಹೊಂದಬೇಕಾದರೆ ಸೋಪಾನವನ್ನೇರಿ ಜಗಲಿಯಲ್ಲಿ ಪಶ್ಚಿಮ ಭಾಗದಲ್ಲಿನ ಗೋಡೆಯಲ್ಲಿ ಕೆತ್ತಿದ ಸು. 4 ಮೀಟರ್ ಎತ್ತರದ ತ್ರಿವಿಕ್ರಮನ ಶಿಲ್ಪ ಅದಕ್ಕೆದುರಿಗಿದ್ದ ಪೂರ್ವಗೋಡೆಯಲ್ಲಿ ಕೆತ್ತಿದ ಅಷ್ಟ ಭುಜಗಳ ವಿಷ್ಣುವಿನ ಶಿಲ್ಪ ನಮ್ಮ ಗಮನ ಸೆಳೆಯುತ್ತದೆ. ಇಂತಹ ಇನ್ನಿತರ ನಾಲ್ಕು ಬೃಹತ್ ವಿಗ್ರಹಗಳು ಮುಖ ಮಂಟಪದ ಎರಡೂ ಗೋಡೆಗಳಲ್ಲಿ ನಮಗೆ ಕಾಣಸಿಗುತ್ತವೆ. ಅವುಗಳಲ್ಲಿ ಅನಂತಾಸೀನ ವಿಷ್ಣು ವಿಗ್ರಹ, ಭೂದೇವಿ ಹೊತ್ತ ವರಾಹ, ಹರಿಹರ ಹಾಗೂ ನರಸಿಂಹ ವಿಗ್ರಹಗಳು ನೋಡುವ ಕಣ್ಣುಗಳ ಹಸಿವನ್ನು ಹಿಂಗಿಸುತ್ತವೆ. ಈ ವಿಶಾಲ



ಬಾದಾಮಿಯ 3ನೇ ಗುಹಾಲಯದ ತಲನಕ್ಷೆ



3ನೇ ಗುಹಾಲಯದ ಹೊರನೋಟ

ಗುಹಾಲಯದಲ್ಲಿರುವ 24 ಕಂಬಗಳಲ್ಲಿನ ಕಲಾತ್ಮಕವಾದ ಕೆತ್ತನೆ, ಮೇಲ್ ಛತ್ತಿನಲ್ಲಿಯ ಕಲೆಯ ಬೆಡಗನ್ನು ವೀಕ್ಷಿಸಿದಾಗ ಚಾಲುಕ್ಯ ಶಿಲ್ಪಿಯ ಕಲಾ ವೈಖರಿ ಅದ್ಭುತವೆನಿಸುತ್ತದೆ. ಈ ಗುಹಾಲಯದ ನಿರ್ಮಾಣದ ಬಗೆಗೂ ಸಹ ಇಲ್ಲಿ ಉಲ್ಲೇಖಿತಗೊಂಡ ಮಂಗಲೀಶನ ಶಾಸನದಿಂದಾಗಿ ಖಚಿತತೆ ಲಭಿಸುತ್ತದೆ. ಇದರ ರಚನೆ ಕ್ರಿ.ಶ. 578 ಎಂದು ಗೊತ್ತಾಗುತ್ತದೆ. ಈ ಗುಹಾಲಯದ ಮುಂದಿರುವ 6 ಕಂಬಗಳಲ್ಲೂ ಶಿಲ್ಪ ಕಲಾವಿದರು ತಮ್ಮ ಕಲ್ಪಕ ಶಕ್ತಿಯನ್ನು ಪ್ರದರ್ಶಿಸಿದ್ದಾರೆ.

ಮೂರನೇಯದಾದ ಈ ಮಹಾವಿಷ್ಣು ಗುಹೆಯು ಎಪ್ಪತ್ತು ಅಡಿಗಳಷ್ಟು ಅಗಲವಾಗಿದ್ದು, ಉದ್ದಾದ ಅಧಿಷ್ಠಾನದಲ್ಲಿ ಕೊರೆಯಲ್ಪಟ್ಟಿದೆ. ಅಧಿಷ್ಠಾನದಲ್ಲಿಯ ಕಟ್ಟೆ, ಗುಹಾಲಯ ಛತ್ತಿನಲ್ಲಿರುವ ಸುಂದರವಾದ ಗರುಡನ ಮೂರ್ತಿ, ವರ್ಣಚಿತ್ರಗಳು ನಮಗೆ ಕಾಣಸಿಗುತ್ತವೆ. ಗುಹಾಲಯದಲ್ಲಿ ಕೆತ್ತಿರುವ ಕಂಬಗಳು ಅವುಗಳಿಗೆ ಸಂಯೋಜಿಸಲ್ಪಟ್ಟ ಬೋದಿಗೆಗಳಲ್ಲಿ ಕೆಲವು ಲೌಕಿಕ ಶಿಲ್ಪಗಳನ್ನು ಕೆತ್ತಿದ್ದು ಕಂಡು ಬರುತ್ತದೆ. ಮಹಾವಿಷ್ಣುವಿನ ಅವತಾರ ಕಲ್ಪನೆಗಳನ್ನು ಪ್ರತಿರೂಪವಾಗಿ ಚಿತ್ರಿಸಿದ ಈ ಮಹಾ ಗುಹಾಲಯದ ಪಶ್ಚಿಮ ಗೋಡೆಯಲ್ಲಿ ತ್ರಿವಿಕ್ರಮನ ವಿರಾಟ ರೂಪದ ವಿಗ್ರಹವಿದೆ. ಗುಹಾಲಯದ ಪೂರ್ವ ಗೋಡೆಯಲ್ಲಿ ಅನಂತಾಸೀನ ವಿಷ್ಣುವಿನ ಬೃಹತ್ತಾದ ಮೂರ್ತಿಯಿದೆ. ವಿಷ್ಣುವಿನ ಮೇಲೆ ಐದು ಹೆಡೆಯುಳ್ಳ ಅನಂತನ ಶಿಲ್ಪವಿದೆ. ಅನಂತನಿಗೊರಗಿದ ಗರುಡನೂ ಈ ಶಿಲ್ಪದಲ್ಲಿ ಮೂಡಿ ಬಂದಿದ್ದಾನೆ. ಈ ಶಿಲ್ಪದ ಕೆಳ ಪಟ್ಟಿಕೆಯಲ್ಲಿ ಸಂಗೀತಗಾರರ ಗಣಮೇಳವಿದೆ. ಈ ಮೂರನೆಯ ಗುಹೆಯಲ್ಲಿ ಭೂವರಾಹನ ಬೃಹತ್ ಶಿಲ್ಪವಿದೆ. ಭೂದೇವಿಯನ್ನು ಕೆಳ ಎಡಗೈಯಿಂದ ಎತ್ತಿ ಹಿಡಿದ ವರಾಹಸ್ವಾಮಿಯ ಭಂಗಿ ಆಕರ್ಷಕವಾಗಿ ಮೂರ್ತ್ವಗೊಂಡಿದ್ದು ಇಲ್ಲಿ ಶಿಲ್ಪಿಯು ತನ್ನ ಕಲಾ ಜಾಣ್ಮೆಯನ್ನು ಶಿಲ್ಪ ನಿರ್ಮಾಣ ಕಾರ್ಯದಲ್ಲಿ ಅಭಿವ್ಯಕ್ತಿ ಪಡಿಸಿದ್ದು ನಮ್ಮ ಗಮನಕ್ಕೆ ಬರುತ್ತದೆ. ಎದುರಿನ ಪಶ್ಚಿಮ ಗೋಡೆಯಲ್ಲಿ ನರಸಿಂಹನ ಭವ್ಯವಾದ ವಿಗ್ರಹವು ನೋಡುವವರನ್ನು ಆಕರ್ಷಿಸುವಂತಿದೆ. ಚತುರ್ಭುಜನಾದ ನರಸಿಂಹನು ತನ್ನ ಕೈಗಳಲ್ಲಿ ಶಂಖ, ಚಕ್ರಗಳನ್ನು ಹಿಡಿದು ನಿಂತುಕೊಂಡ ನಿಲುವು ಅಪರೂಪದ್ದಾಗಿ ಕೆತ್ತಲ್ಪಟ್ಟಿದೆ. ಗದೆಯ ಮೇಲೆ ಎಡಗೈಯನ್ನೂರಿದ ಈ ಶಿಲ್ಪದಲ್ಲಿ ಕೈ-ಕಾಲುಗಳನ್ನು ಪೂರ್ಣವಾಗಿ ಕೆತ್ತಲಾಗಿದೆ. ನರಸಿಂಹನ ಪಕ್ಕದಲ್ಲಿಯೇ ಹರಿಹರನ ವಿಗ್ರಹವಿದೆ. ಇದೂ ಸಹ ಬೃಹದಾಕಾರದಿದ್ದು ಅರ್ಧ ಭಾಗದಲ್ಲಿ ಶಿವನಿಗೆ ಸರ್ಪ, ಅರ್ಧ ಚಂದ್ರ, ಪರಶುಗಳಿಂದ ಅಲಂಕರಿಸಲಾಗಿದೆ. ಇಲ್ಲಿ ಶಿವ ಜಟಾಮುಕುಟ ಹೊಂದಿದ್ದಾನೆ. ಇನ್ನರ್ಧ ಭಾಗದಲ್ಲಿ ವಿಷ್ಣು ಮುಕುಟಧರನಾಗಿದ್ದು, ಶಂಖಧಾರಿಯೂ ಆಗಿದ್ದಾನೆ. ಈ ಗುಹಾಲಯದ ತೊಲೆಗಳಲ್ಲಿ ಮಹಾಭಾರತದ



ಮಹಾವಿಷ್ಣು



ಮಿಥುನ ಶಿಲ್ಪ

ವಿಷ್ಣು ಪುರಾಣದ ಕಥಾನಕಗಳಿಂದಾಯ್ದ ಸಂದರ್ಭಗಳ ಶಿಲ್ಪಗಳನ್ನು ಶಿಲ್ಪಿಗಳು ಚಿತ್ರಿಸಿದ್ದಾರೆ. ಈ ಮಹಾ ಗುಹಾಲಯವು ಹತ್ತಾರು ಶಿಲ್ಪಪ್ರಯೋಗಗಳ ಗುಚ್ಛವಾಗಿದೆ.

ಗುಹಾಲಯಗಳ ನಿರ್ಮಾಣದಲ್ಲಿ ಸ್ಥಪತಿಗಳು ಕೆಲವು ಶಿಲ್ಪಕಲಾ ತಾಂತ್ರಿಕತೆಯನ್ನು ಬಳಕೆ ಮಾಡಿದ್ದು ಕಂಡು ಬರುತ್ತದೆ. ಗುಹಾಲಯಗಳಲ್ಲಿನ ಮುಂಜೂರಿನ ಕಲ್ಪನೆಯಿಂದಾಗಿ ಒಳಗಿನ ಶಿಲ್ಪಗಳನ್ನು ರಕ್ಷಿಸುವ ಕಾರ್ಯ ಸುಲಭವಾಗಿ ಮಾಡಲಾಗಿದೆ. ಕಂಬಗಳಲ್ಲಿನ ಮದನಕೈ ವಿಗ್ರಹಗಳು ಮೊಹಕವಾಗಿ ಕೆತ್ತಲ್ಪಟ್ಟಿವೆ. ಕಂಬಗಳ ಪೂರ್ವ, ಪಶ್ಚಿಮ ಪಾರ್ಶ್ವಗಳಲ್ಲಿರುವ ಕೆಲವು ಮಿಥುನ ಶಿಲ್ಪಗಳು ವೈವಿಧ್ಯಮಯವಾಗಿ ರಚನೆಗೊಂಡಿವೆ. ಈ ಗುಹಾಲಯದಲ್ಲಿನ ಕಪೋತದಲ್ಲಿರುವ ಗರ್ಭಗೃಹದತ್ತ ಮುಖಮಾಡಿದ ಗರುಡನ ಬೃಹತ್ ಶಿಲ್ಪವು ಮನಸೆಳೆಯುತ್ತದೆ. ಮುಖಮಂಟಪದ ತೊಲೆಗಳ ಒಳಮಗ್ಗಲಲ್ಲಿ ಕೆಲವು ಪೌರಾಣಿಕ ಕಥೆಗಳನ್ನಾಧರಿಸಿದ ಶಿಲ್ಪಗಳ ಕೆತ್ತನೆಯಿದೆ.

ಬಾದಾಮಿಯ ಪ್ರತಿಯೊಂದು ಗುಹಾಲಯಗಳಲ್ಲಿ ಮೂರು ವಾಸ್ತು ಪ್ರಕಾರಗಳು ಇರುವುದು ನಮ್ಮ ಗಮನಕ್ಕೆ ಬರುತ್ತದೆ. ಮೊದಲನೆಯದಾಗಿ ಮುಖಮಂಟಪ, ನಂತರದಲ್ಲಿ ರಂಗ ಮಂಟಪ ಅಥವಾ ಸಭಾಮಂಟಪ, ಆಮೇಲೆ ಗರ್ಭಗೃಹ ಸ್ವಲ್ಪ ಎತ್ತರದಲ್ಲಿದ್ದು, ರಂಗಮಂಟಪದಿಂದ ಮೆಟ್ಟಿಲೇರಿ ಪ್ರವೇಶಿಸುವಂತಿರುತ್ತವೆ. ಬೃಹತ್ ಕಲ್ಲು ಬಂಡೆಯನ್ನೇ ಕೊರೆದು ನಿರ್ಮಾಣಗೈದ ವಾಸ್ತು ಶಿಲ್ಪಗಳ ಕೌಶಲ್ಯವನ್ನು ನಾವು ಮೆಚ್ಚಲೇಬೇಕು.

**4ನೇಯ ಗುಹಾಲಯ :**

ಮೂರನೇಯ ಗುಹಾಲಯದಿಂದ ಮತ್ತೆ ಪೂರ್ವದತ್ತ ಪಾವಟಿಗೆಗಳನ್ನೇರಿದರೆ ನಮಗೆ ಪುಟ್ಟದಾದ ಜಿನಾಲಯವೊಂದು ಕಣ್ಣಿಗೆ ಗೋಚರಿಸುತ್ತದೆ. ಹೆಚ್ಚಿನ ಅಲಂಕಾರವಿಲ್ಲದ ಸರಳ ಸಾದಾ ಗುಹಾಲಯವೇ ಜೈನ ಲಯಣ. ಇಲ್ಲಿಯ ಸಭಾ ಮಂಟಪವು ಮುಖಮಂಟಪಕ್ಕಿಂತಲೂ ಚಿಕ್ಕ ಗಾತ್ರದ್ದಾಗಿದೆ. ಈ ಜಿನಾಲಯದಲ್ಲಿ ಮುಖಮಂಟಪದ ಕಂಬದ ಕೆಳಗಿರುವ ಸಿಂಹಗಳು ಆಸರೆ ನೀಡುತ್ತಿರುವಂತೆ ಶಿಲ್ಪಿಗಳು ಕೆತ್ತನೆ ಮಾಡಿದ್ದಾರೆ. ಈ ಜಿನಾಲಯದಲ್ಲಿಯ ಗರ್ಭಗೃಹದಲ್ಲಿ ಮಹಾವೀರನ ವಿಗ್ರಹ ಪೂರ್ವ ಪಶ್ಚಿಮ ಗೋಡೆಗಳಲ್ಲಿ ಬಾಹುಬಲಿ ಹಾಗೂ ಪಾರ್ಶ್ವನಾಥರ ಶಿಲ್ಪಗಳಿವೆ. ಈ ಗುಹಾಲಯದ ಸಭಾ ಮಂಟಪದ ಗೋಡೆಗಳಲ್ಲಿ ಶಿಲ್ಪಗಳನ್ನು ನಿರ್ಮಿಸಲಾಗಿಲ್ಲವೆಂಬುದು ಗಮನಿಸಬೇಕಾದ ಅಂಶ.

ಬಾದಾಮಿಯಲ್ಲಿ ಕೊರೆಯಲ್ಪಟ್ಟಿರುವ ಗುಹೆಗಳಲ್ಲಿ ನಾಲ್ಕನೇಯದಾದ ಈ ಜೈನ ಗುಹಾಲಯವು ಇನ್ನಿತರ ಮೂರು ಗುಹೆಗಳಿಗಿಂತಲೂ ಚಿಕ್ಕದಾಗಿದೆ. ಮುಖಮಂಟಪ ಹಾಗೂ ಒಳಮಂಟಪವೂ ಸಹ ಇತರ ಗುಹಾಲಯಗಳಷ್ಟು ಹೆಚ್ಚಿನ ವಿಸ್ತಾರ ಹೊಂದಿರುವುದಿಲ್ಲ. ಇಲ್ಲಿ ಅಡ್ಡಲಾಗಿರುವ ನಾಲ್ಕು ಕಂಬಗಳು ಮೊಗಸಾಲೆಯಲ್ಲಿ ನಮಗೆದುರಾಗುತ್ತವೆ. ಈ ಕಂಬಗಳು ಅಲ್ಲಲ್ಲಿ ಶಿಥಿಲಗೊಂಡದ್ದು ಕಂಡು ಬರುತ್ತದೆ. ಎರಡನೇಯ ಸಾಲಿನಲ್ಲಿ ಎರಡುಕಂಬಗಳು ಗುಹಾಲಯದೊಳಗಿನ ಮುಖಮಂಟಪವನ್ನು ವಿಭಾಗಿಸುತ್ತದೆ. ಮೇಲೆತ್ತರದಲ್ಲಿ ಗರ್ಭಗೃಹ ನಿರ್ಮಾಣಗೊಂಡಿದೆ.



**ಜೈನ ಗುಹಾಲಯ**



**ಪಾರ್ಶ್ವನಾಥ**

ಈ ಜೈನ ಗುಹಾಲಯದ ಕಂಬಗಳಲ್ಲಿ ತೀರ್ಥಂಕರ ವಿಗ್ರಹವನ್ನು ಕೆತ್ತಲ್ಪಟ್ಟಿದ್ದು, ಗೋಡೆಯಲ್ಲಿ ಮಹಾವೀರನ ಶಿಷ್ಯ ಗೌತಮನ ವಿಗ್ರಹ ಹಾಗೂ 23ನೇ ತೀರ್ಥಂಕರನಾದ ಪಾರ್ಶ್ವನಾಥನ ವಿಗ್ರಹವಿದೆ. ಗರ್ಭಗೃಹದಲ್ಲಿ ಸಿಂಹಾಸನಾರೂಢ ಮಹಾವೀರನ ಮೂರ್ತಿಯನ್ನು ಸುಂದರವಾಗಿ ಕೆತ್ತಲಾಗಿದೆ. ಗೋಡೆಗಳು ಹಾಗೂ ಕಂಬಗಳಲ್ಲಿ ಬೇರೆ ಬೇರೆ ತೀರ್ಥಂಕರರ ಶಿಲ್ಪಗಳಿವೆ. ಇದು ತುಂಬಾ ತಡವಾಗಿ ರಚಿಸಿರುವ ಗುಹಾಲಯವಾಗಿದ್ದು ಈ ಗುಹಾಲಯವು 31 ಅಡಿ ಅಗಲ ಹಾಗೂ 16 ಅಡಿ ಆಳವಾದದ್ದಾಗಿದೆ. ಇಲ್ಲಿ ಕೆತ್ತಿರುವ ಬಾಹುಬಲಿಯ ವಿಗ್ರಹದಲ್ಲಿ ಬಳ್ಳಿಗಳು ಕೈಕಾಲುಗಳನ್ನು ಬಳಸಿಕೊಂಡಿವೆ. ಈ ಎರಡೂ ವಿಗ್ರಹಗಳ ಸಮೀಪದಲ್ಲಿ ಜಿನಮೂರ್ತಿಯಿದ್ದು ಅದನ್ನು ಸುತ್ತುವರೆದ 24 ಜಿನಬಿಂಬಗಳಿವೆ. ಗರ್ಭಗೃಹದಲ್ಲಿ

ತೀರ್ಥಂಕರ ಬೃಹತ್ ಮೂರ್ತಿ ಕೆತ್ತಲ್ಪಟ್ಟಿರುತ್ತದೆ. ಇಲ್ಲಿನ ಮಂಟಪಗಳಲ್ಲಿ ಗರ್ಭಗೃಹ ಬಾಗಿಲು ಚೌಕಟ್ಟಿನ ಸುತ್ತಲೂ ಕಲಾತ್ಮಕವಾದ ಕೆತ್ತನೆಯನ್ನು ಕಾಣಬಹುದು. ಈ ಗುಹಾಲಯದಲ್ಲಿರುವ ಶಿಲ್ಪಶೈಲಿ ವೈವಿಧ್ಯತೆಗಳಲ್ಲಿ ವ್ಯತ್ಯಾಸವಿರುವುದರಿಂದ ರಚನಾ ಕಾಲದಲ್ಲಿ ಭಿನ್ನತೆಯಿರುವ ಬಗ್ಗೆ ಸಂಶೋಧಕರ ಅಭಿಪ್ರಾಯಗಳಿವೆ.

ಬಾದಾಮಿಯಲ್ಲಿರುವ ವಾಸ್ತು ಶಿಲ್ಪಗಳಲ್ಲಿ ಗುಹಾಲಯಗಳದೇ ಒಂದು ವಿಶಿಷ್ಟತೆಯಿದ್ದು, ಅದಕ್ಕೆ ಉಜ್ವಲವಾದ ಪರಂಪರೆಯಿದೆ. ಈ ಗುಹಾಲಯಗಳಲ್ಲಿ ಮೊಗಸಾಲೆ ಮತ್ತು ಮಂಟಪಗಳನ್ನು ಬೇರ್ಪಡಿಸುವಂಥ ಕಂಬಗಳು, ಕಟ್ಟಿಗೆಯ ಕಟ್ಟಡದಲ್ಲಿರುವಂತೆ ತೊಲೆಗಳು ಅವುಗಳ ಮೇಲೆ ಶಿಲ್ಪಿಗಳಿಂದ ಅಲಂಕೃತಗೊಂಡ ಸುಂದರ ಕೆತ್ತನೆ ಶಿಲ್ಪಗಳು, ತರಂಗ ಮಾದರಿಯ ಬೋದಿಗಳು, ಗರ್ಭಗೃಹದಲ್ಲಿ ಕಂಡು ಬರುವಂಥ ಅಲಂಕರಣದ ವಿಕಾಸ ಇವೆಲ್ಲವೂ ಗುಹಾವಾಸ್ತು ಕಲೆಯಲ್ಲಿನ ಬೆಳವಣಿಗೆಯ ಲಕ್ಷಣಗಳಾಗಿವೆ. ಈ ಗುಹಾಲಯಗಳ ವಾಸ್ತು ಕಲೆಯ ಬಗೆಗಿನ ಅಧ್ಯಯನವು ಅಂದು ಚಾಲುಕ್ಯ ಸ್ಥಪತಿಗಳು ನಡೆಸಿದ ವಿವಿಧ ವಾಸ್ತು ಪ್ರಯೋಗಗಳ ಕುರಿತಂತೆ ಹೊಸ ಬೆಳಕನ್ನು ನೀಡುತ್ತದೆ.

# 6. ಬಾದಾಮಿ ಚಲುಕ್ಯರ ರಾಚನಿಕ ದೇವಾಲಯಗಳು

**ಚಾಲುಕ್ಯರ ರಾಚನಿಕ ದೇವಾಲಯಗಳು :**

ಬಾದಾಮಿ ಚಾಲುಕ್ಯರು ತಮ್ಮ ಸಾಮ್ರಾಜ್ಯದ ಹಿರಿಮೆ ಹೆಚ್ಚಿಸಲು ತಮ್ಮ ಅಧೀನದ ಐಹೊಳೆ, ಬಾದಾಮಿ, ಪಟ್ಟದಕಲ್ಲು, ಮಹಾಕೂಟ, ಆಲಂಪೂರ, ಮೊದಲಾದ ಸ್ಥಳಗಳಲ್ಲಿ ವೈವಿಧ್ಯ ಕಲಾ ಬೆಡಗಿನ ದೇವಾಲಯಗಳನ್ನು ನಿರ್ಮಿಸಿದ್ದಾಗಿ ಕಂಡು ಬರುತ್ತದೆ. ಬಾದಾಮಿಯಲ್ಲಿ ನಿರ್ಮಿತಗೊಂಡ ಕೆಲವು ರಾಚನಿಕ ದೇವಾಲಯಗಳೆಂದರೆ, ಮೇಲಿನ ಶಿವಾಲಯ, ಕೆಳಗಿನ ಶಿವಾಲಯ, ಮಾಲೆಗಿತ್ತಿ ದೇವಾಲಯ, ಭೂತನಾಥ ಹಾಗೂ ಜಂಬುಲಿಂಗ ದೇವಾಲಯಗಳನ್ನು ಐಹೊಳೆಯಲ್ಲಿ ಕಟ್ಟಲ್ಪಟ್ಟ ಹುಚ್ಚಿಮಲ್ಲಿಗುಡಿ, ಲಾಡಖಾನ್, ಭಗವತಿ (ಗೌಡರ) ದೇವಾಲಯ, ದುರ್ಗಾ ದೇವಾಲಯ, ಮಹಾಕೂಟದ ಸಂಗಮೇಶ್ವರ ಹಾಗೂ ಮಲ್ಲಿಕಾರ್ಜುನ ದೇವಾಲಯಗಳು, ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯ, ಮಲ್ಲಿಕಾರ್ಜುನ ದೇವಾಲಯ, ಇವೇ ಮೊದಲಾದ ಸ್ಮಾರಕಗಳಲ್ಲಿ ವೈವಿಧ್ಯ ವಾಸ್ತುಶಿಲ್ಪಗಳ ಪ್ರಯೋಗಗಳನ್ನು ಗಮನಿಸಬಹುದಾಗಿದೆ. ಒಟ್ಟಾರೆ ಚಾಲುಕ್ಯರ ಕಾಲದ ಈ ರಾಚನಿಕ ದೇಗುಲಗಳ ಶಿಲ್ಪಗಳು ಅಂತಿಮ ಹಂತದವರೆಗೂ ತಮ್ಮದೇ ಕೆಲವು ವಿಶಿಷ್ಟವಾದ ಪ್ರತಿಮಾ ಲಕ್ಷಣಗಳು ಹಾಗೂ ಶೈಲಿ ವೈವಿಧ್ಯತೆಯ ದೃಷ್ಟಿಯಿಂದ ಪ್ರಯೋಗಶೀಲ ಸ್ಮಾರಕಗಳಾಗಿ ಕಾಣುತ್ತವೆ. ಚಾಲುಕ್ಯ ವಾಸ್ತುಶಿಲ್ಪಿಗಳ ಕಲಾಪ್ರತಿಭೆಯನ್ನು ಪರಿಚಯಿಸುತ್ತವೆ.

**ಚಾಲುಕ್ಯ ಪೂರ್ವ ವಾಸ್ತುಶಿಲ್ಪಗಳ ಪ್ರಯೋಗಗಳು :**

ಬಾದಾಮಿ ಚಾಲುಕ್ಯ ಅರಸರು ತಮ್ಮ ಸಾಮ್ರಾಜ್ಯವನ್ನು ಸ್ಥಾಪಿಸುವ ಪೂರ್ವದಲ್ಲಿಯೇ ಕರ್ನಾಟಕವನ್ನು ಬೇರೆ ಬೇರೆ ವಂಶದ ರಾಜರುಗಳು ಆಳ್ವಿಕೆ ಮಾಡಿದ ದೃಷ್ಟಾಂತಗಳೊದಗುತ್ತವೆ. ದೇಶದಲ್ಲಿ ಬಹುದೊಡ್ಡ ಸಾಮ್ರಾಜ್ಯ ಕಟ್ಟಿದ ಮೌರ್ಯರು, ಆಂಧ್ರದ ಶಾತವಾಹನರು, ಬನವಾಸಿಯ ಕದಂಬರು, ಕ್ರಿ.ಶ. ಪೂರ್ವ ಮೂರನೆಯ ಶತಮಾನದಿಂದ ಕ್ರಿ.ಶ. 6ನೆಯ ಶತಮಾನದವರೆಗೆ ಈ ಹಲವು ರಾಜ ಮನೆತನದವರು ಆಳಿದ್ದಾರೆ. ಈ ಅವಧಿಯಲ್ಲಿ ಇವರೆಲ್ಲರೂ ನಿರ್ಮಿಸಿದ ದೇವಾಲಯಗಳ ಬಗ್ಗೆ ಹೆಚ್ಚಿನ ಅಂಶ ತಿಳಿದು ಬರುವುದಿಲ್ಲ. ಕೇವಲ ಅವರ ಶಾಸನಗಳು ಮತ್ತು ಬೆರಳೆಣಿಕೆಯ ದೇವಾಲಯದ ಅವಶೇಷಗಳು ಮಾತ್ರ ದೊರೆಯುತ್ತವೆ.

ಮೌರ್ಯ ಚಕ್ರವರ್ತಿಗಳು ಚಂದ್ರಗುಪ್ತನ ಕಾಲದಿಂದಲೂ ಕರ್ನಾಟಕದೊಂದಿಗೆ ಸಂಪರ್ಕ ಇಟ್ಟುಕೊಂಡ ಬಗೆಗೆ ಅನೇಕ ಐತಿಹಾಸಿಕ ಆಧಾರಗಳನ್ನು ಇತಿಹಾಸ ಸಂಶೋಧಕರು ನೀಡುತ್ತಾರೆ. ಚಂದ್ರಗುಪ್ತನು ತನ್ನ ಗುರು ಭದ್ರಬಾಹುವಿನ ಸಂಗಡ ಶ್ರವಣಬೆಳಗೊಳಕ್ಕೆ ಬಂದ ಬಗ್ಗೆ, ಅಲ್ಲಲ್ಲಿ ನಡೆದ ಕೆಲವು ಉತ್ಖನನಗಳಲ್ಲಿ ಲಭಿಸಿದ ಸಾಕ್ಷಾಧಾರಗಳನ್ನು ಬಾದಾಮಿ, ಐಹೊಳೆ, ಪಟ್ಟದಕಲ್ಲು, ವಡಗಾಂವ, ಮಾಧವಪುರ, ಬ್ರಹ್ಮಗಿರಿ, ಬಳ್ಳಿಗಾವಿ, ಬನವಾಸಿ, ಮೊದಲಾದೆಡೆಯಲ್ಲಿ ಕಂಡು ಬಂದಿರುವ ಶಾತವಾಹನರ

ಕಾಲದ ಕಟ್ಟಡಗಳ ಅವಶೇಷಗಳಿಂದ ಇಲ್ಲಿ ಚಾಲುಕ್ಯ ಪೂರ್ವದಲ್ಲಿಯೂ ಕೆಲವು ಸ್ಮಾರಕಗಳ ನಿರ್ಮಾಣಕಾರ್ಯ ನಡೆದಿರುವ ಬಗೆಗೆ ಹಲವು ಉದಾಹರಣೆಗಳನ್ನು ಇತಿಹಾಸ ಸಂಶೋಧಕರು ಗುರುತಿಸುತ್ತಾರೆ. ಶಾತವಾಹನರ ಕಾಲದ ಸ್ತೂಪದ ಅವಶೇಷಗಳನ್ನು ಕಲಬುರಗಿ ಜಿಲ್ಲೆಯ ಚಿತ್ತಾಪುರ ತಾಲೂಕಿನ ಸನ್ನತಿಯಲ್ಲಿ ಕ್ರಿ.ಶ. ಒಂದು-ಎರಡನೆಯ ಶತಮಾನದ ಬೌದ್ಧರ ಸ್ತೂಪದಿಂದಾಗಿ ಇಲ್ಲಿ ಬೌದ್ಧರ ನೆಲೆಯಿದ್ದ ಬಗ್ಗೆ ಚಿಕ್ಕ ಶಾಸನಗಳು, ಅವಶೇಷಗಳು ಪ್ರಬುದ್ಧವಾದ ವಿಚಾರಗಳೂ ಗೊತ್ತಾಗುತ್ತವೆ. ಶಾತವಾಹನರ ಕಾಲದಲ್ಲಿ ಬಳಸಿದ್ದ ಇಟ್ಟಿಗೆಯ ಕೆಲವು ಕಟ್ಟಡಗಳು ಬ್ರಹ್ಮಗಿರಿ, ಬನವಾಸಿ, ವಡಗಾಂವ, ಮಾಧವಪುರ ಮತ್ತು ಪಟ್ಟದಕಲ್ಲುಗಳಲ್ಲಿ ದೊರೆತಿರುವ ಕುರಿತು ಡಾ. ರಾಜಶೇಖರ ಸಿಂದಗಿ ಅಭಿಪ್ರಾಯ ಪಡುತ್ತಾರೆ. ದಖ್ಖನ್ನಿನ ಪಶ್ಚಿಮ ಭಾಗದ ಅಜಂತಾ ಮೊದಲಾದೆಡೆಯಲ್ಲಿ ಗುಹಾಚೈತ್ಯಾಲಯಗಳು ಗಜ ಪ್ರಷ್ಠಾಕಾರದಲ್ಲಿ ಕೊರೆದ ಬಗೆಗೂ ಈ ಬೌದ್ಧ ಧರ್ಮಿಯರ ಸ್ಮಾರಕಗಳ ಬಗೆಗೂ ಸಹ ಕೆಲವು ಉದಾಹರಣೆಗಳನ್ನು ಅವರು ನೀಡುತ್ತಾರೆ. ಪಟ್ಟದಕಲ್ಲಿನಲ್ಲಿ ಹಾಗೂ ಐಹೊಳೆಯ ದೇವಾಲಯಗಳಲ್ಲಿ ಕದಂಬ ಅರಸರ ಕಾಲದ ಕೆಲವು ಇಟ್ಟಿಗೆಯ ಕಟ್ಟಡಗಳ ಕುರಿತಂತೆ ಉತ್ಖನನ ಕಾಲದ ಹಲವಾರು ಸಂಶೋಧನ ವಿಚಾರಗಳು, ಚಾಲುಕ್ಯ ಪೂರ್ವ ಕಾಲದ ಸ್ಮಾರಕ ನಿರ್ಮಾಣಕಾರ್ಯದಲ್ಲಿ ನಡೆಸಲಾದ ಶಿಲ್ಪ ಪ್ರಯೋಗಗಳ ಕುರಿತ ವಿಷಯಗಳುಂಟು.

ಗೋವಾ ಪ್ರದೇಶದಲ್ಲಿ ಕೊರೆಯಲ್ಪಟ್ಟ ಕೆಲವು ಗುಹೆಗಳ ಅಧ್ಯಯನದಲ್ಲಿ ಡಾ. ಎಸ್.ರಾಜಶೇಖರ ಅವರು ಕಂಡುಕೊಂಡಿರುವ ಕೆಲವು ಸಂಶೋಧನಾ ವಿಚಾರಗಳಲ್ಲಿ ಇವು ಹೆಚ್ಚಾಗಿ ಶೈವ ಸಂಪ್ರದಾಯಕ್ಕೆ ಸೇರಿದವುವಾಗಿದ್ದು ಈ ಗುಹೆಗಳಲ್ಲಿ ಯಾವುದೇ ಬಗೆಯ ಶಿಲ್ಪಗಳು ಕಂಡು ಬಾರದೆ, ಗರ್ಭಗೃಹಗಳಲ್ಲಿ ಸ್ಥಾಪಿತ ಶಿವಲಿಂಗಗಳಿದ್ದ ಬಗ್ಗೆ ತಿಳಿಸುತ್ತಾರೆ. ಬಾದಾಮಿ ಚಾಲುಕ್ಯರ ಕಾಲದಲ್ಲಿ ಕೊರೆಯಲ್ಪಟ್ಟ ಗುಹಾಲಯಗಳನ್ನು ಪ್ರಾಚೀನ ವೈದಿಕ ಗುಹಾಲಯಗಳೆಂತಲೂ ಸುಮಾರು 100 ವರ್ಷಗಳಷ್ಟು ಪ್ರಾಚೀನವಾದ ಗುಹಾಲಯಗಳು ಗೋವಾ ಪ್ರದೇಶದ ಶೈವ ಗುಹಾಲಯಗಳು ಎಂದೂ ಅವರು ತಮ್ಮ ಕೃತಿಯಲ್ಲಿ ದಾಖಲಿಸುತ್ತಾರೆ.

ತುಂಬಾ ಪ್ರಾಚೀನ ದೇಗುಲಗಳೆಂದರೆ ಗುಹೆಗಳೇ ಎಂದು ಖ್ಯಾತ ಕಲಾ ವಿದ್ವಾಂಸ ಪ್ರೊ. ಎಸ್.ಕೆ.ರಾಮಚಂದ್ರರಾವ್ ಅಭಿಪ್ರಾಯ ಪಡುತ್ತಾರೆ. ಸತ್ತವರನ್ನು ಒಪ್ಪ ಮಾಡಿ ಗುಹೆಗಳಲ್ಲಿ ಕಾಪಿಡುತ್ತಿದ್ದ ಪದ್ಧತಿಯು ಹಿಂದೆ ಬಹುಕಾಲದಿಂದ ರೂಢಿಯಲ್ಲಿತ್ತು. ಪ್ರಕೃತಿ ನಿರ್ಮಿತ ಗುಹೆಗಳಲ್ಲಿ ಅರಿವಿಲ್ಲದ ಪ್ರದೇಶದಲ್ಲಿ ಜನರೇ ಗುಹೆ ನಿರ್ಮಿಸಿಕೊಂಡ ಕುರಿತೂ ಕೆಲವು ನಿದರ್ಶನಗಳಿವೆ. ಸ್ತೂಪದ ಕಲ್ಪನೆ ಈ ಪ್ರಾಚೀನ ಗುಹೆಗಳಿಂದ ಮೊದಲಾಯಿತೆಂದು ಪ್ರೊ. ರಾಮಚಂದ್ರರಾವ್ ಕೆಲವು ವಿಚಾರಗಳನ್ನು ವಿಶದೀಕರಿಸುತ್ತಾರೆ.

ದೇವಾಲಯಗಳ ಉಗಮ, ವಿಕಾಸ ಕುರಿತು ತಮ್ಮ ಅಧ್ಯಯನ ಗ್ರಂಥದಲ್ಲಿ ಆಲಯದ ಕಟ್ಟಡಗಳ ಬಗೆಗಿನ ವಿಚಾರಗಳು ಹೀಗಿವೆ. "ನಮ್ಮ ದೇಶದಲ್ಲಿ ದೇವಾಲಯಗಳೆಂದರೆ ಬರಿಯ ಕಟ್ಟಡವಲ್ಲ. ಅದೊಂದು ಸಂಕೇತ, ದೈವತ್ವದ ಕಲ್ಪನೆ, ಕಲ್ಪನೆಗೆ ಪ್ರಾದೇಶಿಕವಾದ ಒಂದು ಹರವನ್ನೂ, ಭೌತಿಕವಾದ ಒಂದು ರೂಪವನ್ನೂ ಒದಗಿಸುವುದು ಸಹಜ. ಇದರ ಅಗತ್ಯವೂ ಇದೆ. ಆದರೆ ಒಮ್ಮೆ ರೂಪ ತಳೆಯಿತೆಂದರೆ ಕಲ್ಪನೆಯು ಅದನ್ನೇ ಅವಲಂಬಿಸಿ ಅಷ್ಟಕ್ಕೇ ಸೀಮಿತವಾಗಿರಬೇಕೆಂಬ ನಿಯಮವಿಲ್ಲ. ಮೊದಲಿಗೆ ಕಲ್ಲು ಗುಂಡೆಗಳ ವೃತ್ತವಾಗಿದ್ದು, ಬರುಬರುತ್ತ ಗುಡಿಗಳು, ಅಂಕಣಗಳು, ಮಂಟಪಗಳು, ಪ್ರದಕ್ಷಿಣಾ ಪಥಗಳು, ಪುಷ್ಕರಿಣಿಗಳು, ಮೊದಲಾಗಿ ಬೆಳೆಯಿತು. ದೇಗುಲಗಳ ಪರಿಸರದೊಳಗೆ ಹಲವು ಕಡೆ ಹಳ್ಳಿಗಳು, ನಗರಗಳು

ಮೂಡಿ ಬಂದವು. ದೇಗುಲಗಳ ವ್ಯವಸ್ಥೆಯನ್ನು ನಿರ್ವಹಿಸಲು ದೊಡ್ಡ ದೊಡ್ಡ ಸಂಸ್ಥೆಗಳೇ ಮೈದಳೆದವು" ಎಂದು ಬರೆಯುತ್ತ "ನಮ್ಮ ದೇಶದಲ್ಲಿ ಶಾಸ್ತ್ರೋಕ್ತ ದೇವಾಲಯಗಳು ಸಿದ್ಧವಾಗ ತೊಡಗಿದುದು ಯಾವಾಗ ಎಂಬುದನ್ನು ಖಚಿತವಾಗಿ ಹೇಳಲು ಸಾಧ್ಯವಿಲ್ಲ"ವೆಂಬುದಾಗಿ ಪ್ರೊ. ಎಸ್.ಕೆ.ರಾಮಚಂದ್ರರಾಯರು ಹೇಳುತ್ತಾರೆ. ಮೊದಲು ಗುಡಿಗಳು ತಾತ್ಕಾಲಿಕ ತಾಣಗಳಾಗಿದ್ದವೆಂತಲೂ, ಈ ದೇಗುಲಗಳು ಮಣ್ಣು, ಬಿದಿರು ಮರ, ತಡಿಕೆಗಳಿಂದ ಸಿದ್ಧವಾದ ಗುಡಿಗಳಾಗಿರುತ್ತಿದ್ದ ಬಗೆಗೂ ನಮಗೆ ಹಲವು ಪ್ರಾಚೀನ ದೇವಾಲಯಗಳ ಬಗೆಗೂ ತಿಳಿದು ಬರುತ್ತದೆ.

**ಐಹೊಳೆ ವಾಸ್ತುಶಿಲ್ಪಗಳ ಅನುಪಮ ಕೇಂದ್ರ:**

ಐಹೊಳೆಯ ದೇವಾಲಯಗಳ ವಿವಿಧ ಸಮೂಹಗಳು ಆಕರ್ಷಕ ದೃಶ್ಯವನ್ನು ನೀಡುತ್ತವೆ. ವಿವಿಧ ರಾಚನಿಕ ಈ ದೇವಾಲಯಗಳು ವಾಸ್ತುಶಿಲ್ಪವನ್ನು ಅಧ್ಯಯನ ಮಾಡುವ ಮನಸ್ಸುಗಳಿಗೆ – ವಿದ್ಯಾರ್ಥಿಗಳು, ಸಂಶೋಧಕರು ಹಾಗೂ ಕಲಾ ಇತಿಹಾಸದ ಪ್ರಾಧ್ಯಾಪಕರುಗಳಿಗೆ ಪ್ರಯೋಜನಕಾರಿ ಎನಿಸುತ್ತದೆ. ಪರಿಣಾಮದಲ್ಲಿ ಮೇಗುತಿ ದೇವಾಲಯದ ಬೆಟ್ಟದ ಪಶ್ಚಿಮದಲ್ಲಿ ಅನತಿ ದೂರದ ಬಯಲು ಪ್ರದೇಶದಲ್ಲಿ ಪರಶುರಾಮನ ಪರಶು ಸ್ಪರ್ಶದಿಂದ ಪುನೀತಳಾದ ಕೆಂಪಾಗಿ ಹರಿಯುತ್ತಿರುವ ಮಲಪ್ರಭೆಯ ಪರಿಸರದಲ್ಲಿ ಗುಡ್ಡದ ಇಳಿಜಾರಿನಿಂದ ಹಿಡಿದು ಈ ಮಲಪ್ರಭೆಯ ದಡದವರೆಗೂ ಹಬ್ಬಿದ ಪ್ರದೇಶದಲ್ಲಿ ಭಾರತೀಯ ದೇವಾಲಯಗಳ ತೊಟ್ಟಿಲುವೇನೋ ಎಂಬಂತೆ ಅಸಂಖ್ಯ ದೇವಸ್ಥಾನಗಳು ರಚಿಸಲ್ಪಟ್ಟಿವೆ.

ಇಂಥ ಸ್ಥಳದಾಯ್ಕೆಯು ಮಂದಿರಗಳ ರಚನಾರ್ಥಕವಾಗಿ ದೃಷ್ಟಿಯನ್ನಿಟ್ಟುಕೊಂಡಿರುವ ಪರಿಕಲ್ಪನೆಯ ತಾಣಗಳು ಇಡೀ ಭಾರತ ದೇಶದಲ್ಲಿ ಸಮೀಕ್ಷಿಸಿದಾಗ ಐಹೊಳೆಯಲ್ಲಿರುವಂತೆ ಮತ್ತೆಲ್ಲೂ ಕಾಣಸಿಗವು. ಇದು ಕರ್ನಾಟಕದ ವಾಸ್ತುಶಿಲ್ಪದ ಹಾಗೂ ಭೂಗರ್ಭಶಾಸ್ತ್ರಜ್ಞರ ಅನನ್ಯ ಕೊಡುಗೆಯೆಂದೆ ಹೇಳಬಹುದು.

ಚಾಲುಕ್ಯರ ಹಾಗೂ ಗುಪ್ತರ ಸಮಕಾಲೀನ ವಾಸ್ತುಶಿಲ್ಪದ ಸಮ್ಮಿಲನವನ್ನು ಈ ದೇವಾಲಯಗಳಲ್ಲಿ ಸ್ಪಷ್ಟವಾಗಿ ನೋಡಬಹುದಾಗಿದೆ. ಈ ಪ್ರಕ್ರಿಯೆಯು ಔತ್ತರೇಯ ಗುಪ್ತರ ಹಾಗೂ ಚಾಲುಕ್ಯರ ವಾಸ್ತುಶಿಲ್ಪದ ವಿನ್ಯಾಸಗಳ ಸಂಗಮದಲ್ಲಿ ಕಾಣುತ್ತೇವೆ. ಇದೊಂದು ಎರಡೂ ಪ್ರದೇಶಗಳ ವಾಸ್ತುಶಿಲ್ಪದ ಸಂಗಮವನ್ನು ಸಮೀಕ್ಷಿಸುವ ಆಂದೋಲನವೆಂದು ಗ್ರಹಿಸಬಹುದು. ಇದಲ್ಲದೇ ಈ ದೇವಾಲಯಗಳನ್ನು ನಿರ್ಮಿಸುವ ಕಾಲಘಟ್ಟದ ಆಂದೋಲನವು ಪೂರ್ತಿ ಭಾರತೀಯವಾಗಿಯೂ, ಸ್ವತಂತ್ರವಾಗಿಯೂ ಇದ್ದುದು ಕಂಡು ಬರುತ್ತದೆ. ಇದರಲ್ಲಿ ವಿಶೇಷವಾಗಿ ಇವೆರಡೂ ಚಾಲುಕ್ಯರ ಹಾಗೂ ಗುಪ್ತರ ವಾಸ್ತು ಪ್ರಯೋಗಗಳಲ್ಲಿ ಒಂದಕ್ಕೊಂದು ಪೂರಕವಾಗಿವೆ. ಈ ಸಾಂಗಮಿಕ ಕೊಡುಗೆಯು ಬಹಳಷ್ಟು ಪರಿಶ್ರಮವಾದದ್ದು, ವೈಚಾರಿಕವಾಗಿದ್ದು ಮತ್ತು ಪ್ರಜ್ಞಾಪೂರ್ವಕವಾಗಿ ನೀಡಿದ್ದು ಆಗಿದೆ. (ಡಾ. ಆರ್.ಎಸ್.ಗುಪ್ತ, ಆರ್ಟ ಆ್ಯಂಡ್ ಆರ್ಕಿಟೆಕ್ಚರ್ ಆಫ್ ಐಹೊಳೆ).

ತನ್ನ ಈ ಎರಡು ಶತಮಾನಗಳ ದೇವಾಲಯ ರಚನಾ ಕ್ರಮದಲ್ಲಿ ಈ ಸ್ಥಪತಿಗಳು ಹಾಗೂ ವಾಸ್ತುಶಿಲ್ಪಿಗಳು ನೀಡಿದ ಕೊಡುಗೆಯು ಮುಂಬರುವ ದೇವಾಲಯಗಳ ಬೆಳವಣಿಗೆಗೆ ನಾಂದಿಯಾದವು. ಈ ರಚನಾ ಆಂದೋಲನವು ಪ್ರಾಚೀನ ಶಿಲ್ಪಶಾಸ್ತ್ರ ಗ್ರಂಥಗಳ ಮಾರ್ಗದರ್ಶನದಲ್ಲಿ ಚಾಚೂ ತಪ್ಪದಂತೆ ಮುಂದುವರೆದಿದ್ದು ಇಲ್ಲಿ ಕಂಡು ಬರುತ್ತದೆ. ಐಹೊಳೆಯಲ್ಲಿರುವ ಚಾಲುಕ್ಯರ ವಾಸ್ತುಶಿಲ್ಪದ ಕೊಡುಗೆಯು ದಕ್ಷಿಣ ಭಾರತದ ತತ್ಪೂರ್ವದಲ್ಲಿ ನಿರ್ಮಾಣವಾದ ಪಶ್ಚಿಮ ಭಾರತದ ಗುಹಾಂತರ ದೇವಾಲಯಗಳ ರಚನಾ

ಪ್ರಭಾವವು ಇಲ್ಲಿ ಬೀರಿದ್ದನ್ನು ಸ್ಪಷ್ಟವಾಗಿ ಕಾಣುತ್ತೇವೆ. ಈ ಗುಹಾಂತರ ದೇವಾಲಯಗಳು ಹಾಗೂ ರಾಚನಿಕ ದೇವಾಲಯಗಳು ಒಂದಕ್ಕೊಂದು ಪೂರಕವಾಗಿದ್ದರೂ ಒಂದು ತಮ್ಮದೇ ಆದ ಸ್ವತಂತ್ರ ಮಾರ್ಗವನ್ನು ಹಿಡಿದಿವೆ. ಈ ರಾಚನಿಕ ದೇವಾಲಯಗಳ ಕಟ್ಟುವಿಕೆಯಲ್ಲಿ ವ್ಯವಸ್ಥಿತವಾಗಿ ಹೊಡೆದ ಕಲ್ಲುಗಳನ್ನು ಚೌಕಾದ ಲಂಬಕದಲ್ಲಿ ಮೇಲಕ್ಕೇರಿಸುವ ಅಭಿಯಾಂತ್ರಿಕ ಕಲೆ ಇಲ್ಲಿದೆ. ಈ ರಾಚನಿಕ ಕಲೆಯು ಗುಹಾಂತರ ದೇವಾಲಯಗಳ ನಿರ್ಮಾಣಕ್ಕಿಂತ ಭಿನ್ನವಾಗಿದ್ದು ಬಹಳ ನೈಪುಣ್ಯತೆಯಿಂದ ಕೂಡಿದೆ. ಈ ಪದ್ಧತಿಯ ಅಳವಡಿಕೆಯಿಂದ ಮುಂಬರುವ ಸಮಯದಲ್ಲಿ ಭಾರತೀಯ ರಾಚನಿಕ ದೇವಾಲಯಗಳಲ್ಲಿ ನಿರ್ಮಿಸುವಂಥ ವಿಧಾನ ಬಹಳಷ್ಟು ರೂಢಿಯಲ್ಲಿ ಅಳವಡಿಸಲಾಯಿತು. ಈ ತರಹದ ದೇವಾಲಯಗಳ ರಚನಾ ವಿಧಾನದಲ್ಲಿ ಮೂಲತ: ಪುಟ್ಟದಾದ ಗರ್ಭಗೃಹ ಹಾಗೂ ಒಂದೆರಡು ಕಂಬಗಳ ಸಂಯೋಜನೆಯಿಂದ ಪ್ರಾರಂಭವಾದ ಈ ಪ್ರಕ್ರಿಯೆಯಲ್ಲಿ ಬೆಳೆಯುತ್ತ ಹೋದ ಹಾಗೆ ವಿವಿಧ ಅಂಗಗಳನ್ನು ನೀಡಿತು. ಅಂದರೆ ಮುಖ ಮಂಟಪ, ಸಭಾ ಮಂಟಪ, ನೃತ್ಯ ಮಂಟಪ, ಅಂತರಾಳ, ಗರ್ಭಗೃಹ ಹಾಗೂ ಪ್ರದಕ್ಷಿಣಾ ಪಥವುಳ್ಳ ಸಾಂಧಾರ ಶೈಲಿಯಲ್ಲಿ ವಿಸ್ತಾರವಾಗಿ ಬೆಳೆಯಿತು. ಈ ರೀತಿಯಾಗಿ ಚಿಕ್ಕ ವಿನ್ಯಾಸದಿಂದ ಬೃಹತ್ ವಿನ್ಯಾಸದವರೆಗೆ ವಾಸ್ತುಶಿಲ್ಪದ ತಲವಿನ್ಯಾಸದ ಬೆಳವಣಿಗೆಯಾದದ್ದು ಕಂಡು ಬರುತ್ತದೆ. ಈ ವಿನ್ಯಾಸದ ಬೆಳವಣಿಗೆಯ ಓಟದಲ್ಲಿ ದೇವಾಲಯಗಳ ಶಿಖರ ರಚನೆಗಳೂ ಕೂಡಾ ಅಷ್ಟೇ ಸ್ಫೂರ್ತಿದಾಯಕವಾಗಿ ಮೇಲೆತ್ತರಕ್ಕೆ ಹೋಗಿವೆ.

ಒಂದು ಸರಳ, ಸಾಮಾನ್ಯ ಪ್ರಾರಂಭಾವಸ್ಥೆಯಿಂದ ಐಹೊಳೆಯ ದೇವಾಲಯ ಸಮೂಹ, ಲಾಡಖಾನ್ ದೇವಾಲಯ, ಹುಚ್ಚಿಮಲ್ಲಿ ದೇವಾಲಯಗಳ ಮೂಲಕ ಬೆಳವಣಿಗೆ ಹೊಂದುತ್ತ ಶಿಖರವಾಸ್ತು ದುರ್ಗಾದೇವಾಲಯಗಳಲ್ಲಿ ಪರಿಪೂರ್ಣಗೊಂಡಂತೆ ಶಿಖರವಿನ್ಯಾಸ ಬೆಳೆದು ಬಂದ ದಾರಿಯನ್ನು ನಾವು ನೋಡಬಹುದು. ಈ ಶಿಖರವಿನ್ಯಾಸ ಬೆಳೆಯುತ್ತ ಹೋದಂತೆ ಎರಡು ಪ್ರಮುಖವಾದ ವಾಸ್ತು ಶಿಖರ ಶಾಖೆಗಳು ನಿರ್ಮಾಣವಾದವು. ಒಂದು ಬಿಲ್ಲಿನಾಕಾರದಲ್ಲಿ ನಾಲ್ಕೂ ಬದಿಯಿಂದ ಮೇಲಕ್ಕೇರುವ ಶಿಖರ (Curve Lines) ಇದು ಕಂಸಾಕೃತಿಯಲ್ಲಿ ರೂಪುಗೊಂಡಿದ್ದು, ಇನ್ನೊಂದು ಮೆಟ್ಟಲು ಮೆಟ್ಟಿಲಾಕಾರದ ಪಿರ್ಯಾಮಿಡ್‌ನಂತಿರುವ ಶಿಖರ ಶೈಲಿಯು ಇಲ್ಲಿ ಬೆಳೆದುದನ್ನು ಕಾಣುತ್ತೇವೆ. ಈ ಒಂದು ದೃಷ್ಟಿಯಲ್ಲಿ ನೋಡಿದಾಗ ಕಂಸಾಕೃತಿಯ ಶಿಖರ ಹಾಗೂ ಕಟ್ಟೆಯಾಕಾರದ ಪಿರ್ಯಾಮಿಡ್ ಶಿಖರ ಇದೇ ಕರ್ನಾಟಕ ಭಾಗದಲ್ಲಿ ಬಾದಾಮಿ ಚಾಲುಕ್ಯರ ವಾಸ್ತುಶಿಲ್ಪದ ನೆಲೆವೀಡಾದ ಐಹೊಳೆ, ಪಟ್ಟದಕಲ್ಲು, ಬಾದಾಮಿಗಳಲ್ಲಿ ಬೆಳೆದು ಬಂದುದು ಸುಸ್ಪಷ್ಟ. ಈ ಪ್ರದೇಶವು ಔತ್ತರೇಯ ಹಾಗೂ ದಾಕ್ಷಿಣಾತ್ಯ ದೇವಾಲಯಗಳ ವಾಸ್ತುಶಿಲ್ಪದ ಸಂಗಮವೆಂದು ನಿರ್ಣಯಿಸಬಹುದು. ಈ ವ್ಯಾಖ್ಯಾನವನ್ನು ಬಹಳಷ್ಟು ಕಲಾ ಇತಿಹಾಸಕಾರರೂ ಒಪ್ಪಿಕೊಂಡಿದ್ದಾರೆ. ಇದು ಇಡೀ ಕರ್ನಾಟಕವು ಹೆಮ್ಮೆಪಡುವಂತಹ ವಿಷಯ. ಅದಾಗಿ ಇಡಿಯಾಗಿ ಹೇಳಬಯಸುವದೇನೆಂದರೆ ಇಡೀ ಭಾರತದ ದೇವಾಲಯಗಳ ಮೂಲ ವಾಸ್ತುಶಿಲ್ಪದ ಬೆಳವಣಿಗೆಯನ್ನು ಅಭ್ಯಾಸ ಮಾಡುವುದಾದರೆ ಈ ತಾಣಗಳನ್ನು ನಾವಿಲ್ಲಿ ನಿರೀಕ್ಷಿಸಲೇಬೇಕು.

**ಬಾದಾಮಿ ಚಾಲುಕ್ಯರ ರಾಚನಿಕ ದೇವಾಲಯಗಳು**

ಚಾಲುಕ್ಯರ ಕಾಲದ ವಾಸ್ತುಶಿಲ್ಪಗಳ ರಚನೆಯ ಪೂರ್ವದಲ್ಲಿ ಐಹೊಳೆಯಲ್ಲಿ ಹಲವು ದೇವಾಲಯಗಳು ನಿರ್ಮಾಣಗೊಂಡಿದ್ದರ ಬಗೆಗೆ ಹಲವಾರು ವಿದ್ವಾಂಸರ ಊಹೆಗಳಿವೆ. ಖ್ಯಾತ ಸಂಶೋಧಕ ಬಿ.ವೆಂಕೋಬರಾಯರು ತಮ್ಮ (ಮೈಸೂರು ದೇಶದ ವಾಸ್ತುಶಿಲ್ಪ, ಪು. ಸಂ. 66) ಗ್ರಂಥದಲ್ಲಿ ಹೀಗೆ ವಿವರಿಸುತ್ತಾರೆ.

"ಸ್ವತಂತ್ರ ದೇವಾಲಯಗಳು ಮೊದಲು ದಕ್ಷಿಣ ಭಾರತದಲ್ಲಿ ಕಾಣಿಸಿಕೊಂಡಿದ್ದು ಐಹೊಳೆಯಲ್ಲಿ. ದೇವಾಲಯದ ಪ್ರಥಮ ಪ್ರಯತ್ನ ನಡೆದಿದ್ದು ಇಲ್ಲಿಯೇ. ಉತ್ತರ ಮತ್ತು ದಕ್ಷಿಣ ಭಾರತದ ಶಿಲ್ಪಕಲೆಯ ಚಾತುರ್ಯಗಳನ್ನು ಅಕ್ಕಪಕ್ಕದಲ್ಲಿ ಕಾಣುವುದು ಇಲ್ಲಿಯೇ. ಮತ್ತು ದಕ್ಷಿಣದಲ್ಲೆಲ್ಲ ಹರಡಿ ದ್ರಾವಿಡ ಶೈಲಿಯೆಂದು ಹೆಸರು ಪಡೆದ ವಾಸ್ತು ರೀತಿಯ ಕಟ್ಟಡಗಳು ಇಲ್ಲಿಂದಲೇ ಹೊರಕ್ಕೆ ಹೊರಟವು. ಇದೂ ಅಲ್ಲದೇ ಉತ್ತರ ಭಾರತದ ಶೈಲಿಗಳ ಮಿಲನವು ನಡೆಯುತ್ತ ಬಂದು ಮೂರನೆಯದಾದ ಕರ್ನಾಟಕ ಶೈಲಿಯು ಹೇಗೆ ಹುಟ್ಟಿತೆಂಬುದನ್ನು ಕಾಣುವುದು ಇಲ್ಲಿಯೇ" ಎಂಬ ಮಾತನ್ನು ತಿಳಿದಾಗ ಐಹೊಳೆಯ ವಾಸ್ತುಶಿಲ್ಪಗಳ ಹಿರಿಮೆ ಗರಿಮೆಗಳ ಅರಿವು ನಮಗಾಗದೇ ಇರದು.

ಐಹೊಳೆಯಲ್ಲಿರುವ ಎಲ್ಲ ದೇವಾಲಯಗಳನ್ನು ನಾವು ವೀಕ್ಷಣೆ ಮಾಡಿದಾಗ, ಅಧ್ಯಯನಗೈದಾಗ ಒಂದು ವಿಚಾರ ಸ್ಪಷ್ಟವಾಗುತ್ತದೆ. ಇಲ್ಲಿರುವ ಒಂದೊಂದು ವಾಸ್ತುಶಿಲ್ಪಗಳು ಭಿನ್ನ ಭಿನ್ನ ಶೈಲಿ-ತಂತ್ರಗಾರಿಕೆಯ ಪ್ರಯೋಗಗಳಾಗಿವೆ. ಒಂದೊಂದರಲ್ಲಿಯೂ ಶಿಲ್ಪಿಯ ವಾಸ್ತು ಕಲಾ ತಂತ್ರಗಾರಿಕೆಯ ಪರಿಚಯವಾಗುತ್ತದೆ. ಇಲ್ಲಿರುವ ವಾಸ್ತುರಚನೆಗಳಲ್ಲಿಯ ವಾಸ್ತುಶಿಲ್ಪ ವೈವಿಧ್ಯತಾ ವೈಭವ ಕಣ್ಮನಗಳ ಹಸಿವನ್ನು ಹಿಂಗಿಸುತ್ತದೆ.

ದೇವಾಲಯಗಳ ಪ್ರಯೋಗಶಾಲೆಯಂತಿರುವ ಐಹೊಳೆಯ ವಾಸ್ತುಶಿಲ್ಪಗಳ ನಿರ್ಮಾಣ ಕುರಿತು ಇತಿಹಾಸ ಸಂಶೋಧಕ ಡಾ. ಸಿಂದಗಿ ರಾಜಶೇಖರ ಹೀಗೆ ಒಂದೆಡೆ ಉಲ್ಲೇಖಿಸುತ್ತಾರೆ. "ದೇವಾಲಯಗಳ ವೈವಿಧ್ಯದಿಂದ ಬೇರೆ ಯಾವ ಸ್ಥಳವೂ ಐಹೊಳೆಯಷ್ಟು ಸಮೃದ್ಧವಾಗಿಲ್ಲ. ಹೀಗೆ ಬೇರೆ ಬೇರೆ ಸಂಪ್ರದಾಯ ಮತ್ತು ಶೈಲಿಗಳಿಗೆ ಸೇರಿದ ದೇವಾಲಯಗಳನ್ನು ಭಾರತದ ಯಾವ ಸ್ಥಳದಲ್ಲೂ ನೋಡಲು ಸಾಧ್ಯವಿಲ್ಲ. ವೈವಿಧ್ಯ ಇಲ್ಲಿ ಎದ್ದು ಕಾಣುತ್ತದೆ. ಬೇರೆ ಬೇರೆ ಬಗೆಯ ದೇವಾಲಯ ಶೈಲಿಗಳನ್ನು ಬೆಳೆಸುವ ಕಡೆಗೆ ವಾಸ್ತು ಶಿಲ್ಪಿಗಳು ಇಲ್ಲಿ ಗಮನವನ್ನು ಕೇಂದ್ರೀಕರಿಸಿದರು. ಸಾಂಧಾರ ಮತ್ತು ನಿರಂಧಾರ ಎರಡೂ ಬಗೆಯ ದೇವಾಲಯಗಳನ್ನು ಅವರು ಕಟ್ಟಿದರು. ಮೇಗುತಿ, ಹುಚ್ಚಿಮಲ್ಲಿಗುಡಿ, ದುರ್ಗಾಭಗವತಿ (ಗೌಡರಗುಡಿ) ಮತ್ತು ಚಿಕ್ಕಿ ಗುಡಿಗಳು ಸಾಂಧಾರ ಮಾದರಿಯವಾದರೆ, ತಾರಪ್ಪ, ಹುಚ್ಚಪ್ಪಯ್ಯಗುಡಿ, ಹುಚ್ಚಪ್ಪಯ್ಯನ ಮಠ, ಗಳಗನಾಥ, ಸೂರ್ಯ, ಚಕ್ರಗುಡಿ ಮತ್ತು ಮಲ್ಲಿಕಾರ್ಜುನ ದೇವಾಲಯಗಳು ನಿರಂಧಾರ ಬಗೆಯವು. ಚಾಲುಕ್ಯ ವಾಸ್ತುಶಿಲ್ಪಿಗಳು, ರೇಖಾನಾಗರ ಶಿಖರಗಳಿರುವ ದೇವಾಲಯಗಳನ್ನು ನಿರ್ಮಿಸಿದರು. ಹುಚ್ಚಿಮಲ್ಲಿಗುಡಿ, ದುರ್ಗಾ, ಚಕ್ರಗುಡಿ, ಸೂರ್ಯ ಮತ್ತು ಹುಚ್ಚಪ್ಪಯ್ಯ ಗುಡಿ ಇಂಥವು. ಹಾಗೆಯೇ ಕದಂಬನಾಗರ ಶಿಖರಗಳಿರುವ ದೇವಾಲಯಗಳನ್ನೂ ಕಟ್ಟಿದರು. ಮಲ್ಲಿಕಾರ್ಜುನ ಮತ್ತು ಗಳಗನಾಥ ಇಂತಹ ದೇವಾಲಯಗಳು - ದ್ರಾವಿಡ ಶಿಖರದಿಂದ ಕೂಡಿದ ಬಾದಾಮಿ ಚಾಲುಕ್ಯರ ಅತಿ ಪ್ರಾಚೀನ ದೇವಾಲಯಗಳಲ್ಲಿ ಒಂದು. ಇರುವ ಗರ್ಭಗೃಹದ ಮೇಲೆ ಇನ್ನೊಂದು ಗರ್ಭಗೃಹವನ್ನು ನಿರ್ಮಿಸಿ ಅಂತಸ್ತುಗಳ ದೇವಾಲಯವನ್ನು ಕಟ್ಟುವ ಪ್ರಯೋಗವನ್ನು ಮಾಡಲಾಯಿತು. ಲಾಡಖಾನ್ ದೇವಾಲಯದಲ್ಲಿ ಇದನ್ನು ನೋಡಬಹುದು. ಲೌಕಿಕ ಉಪಯೋಗಗಳಿಗಾಗಿ ಈ ವಿಶಾಲವಾದ ಸಭಾಭವನಗಳನ್ನು ನಿರ್ಮಿಸಲಾಯಿತು. ಮುಂದೆ ಇವುಗಳನ್ನು ದೇವಾಲಯಗಳನ್ನಾಗಿ ಪರಿವರ್ತಿಸಲಾಯಿತು. (ಡಾ.ಎಸ್.ರಾಜಶೇಖರ - ಬಾದಾಮಿ ಚಾಲುಕ್ಯರು ಲೇಖನ ಸಂಪುಟ, ಪು. 311).

ಹೀಗೆ ಬಾದಾಮಿ ಚಾಲುಕ್ಯ ದೇವಾಲಯಗಳ ನಿರ್ಮಾಣ ಹಾಗೂ ವಾಸ್ತು ಪ್ರಯೋಗ ಕುರಿತು ಅನೇಕ ವಿದ್ವಾಂಸರು ಉಲ್ಲೇಖಿಸಿರುವ ವಿಷಯದಂತೆ "ಐಹೊಳೆ ವಾಸ್ತು ಶಿಲ್ಪಗಳ ಪ್ರಯೋಗಶಾಲೆ" ಎಂಬುದಕ್ಕೆ ಎರಡನೇ ಮಾತಿಲ್ಲ.

ಬಾದಾಮಿ ಚಾಲುಕ್ಯರ ನೂರಾರು ವಾಸ್ತುಶಿಲ್ಪಗಳಲ್ಲಿಯೇ ಅಧ್ಯಯನ ದೃಷ್ಟಿಯಿಂದ ಕೆಲವೇ ದೇವಾಲಯಗಳನ್ನಿಲ್ಲಿ ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ಅವುಗಳಲ್ಲಿ ತಲವಿನ್ಯಾಸ ಪ್ರಯೋಗ, ವಾಸ್ತು ರಚನಾಂಗಗಳು, ಶೈಲಿ, ವಿಶೇಷತೆಗಳ ಕುರಿತು ವಿಶ್ಲೇಷಣೆ ಮಾಡಲಾಗಿದೆ. ಅವುಗಳನ್ನು ಹೀಗೆ ಪಟ್ಟಿ ಮಾಡಬಹುದು.

ಐಹೊಳೆಯ ಕೆಲವು ರಾಚನಿಕ ದೇವಾಲಯಗಳಲ್ಲಿ 1) ಗೌಡರ ದೇವಾಲಯ, 2) ಲಾಡಖಾನ ದೇವಾಲಯ, 3) ಕೊಂತಿ ದೇವಾಲಯ, 4) ತಾರಬಸಪ್ಪ ದೇವಾಲಯ, 5) ಹುಚ್ಚಿಮಲ್ಲಿ ದೇವಾಲಯ, 6) ಮಲ್ಲಿಕಾರ್ಜುನ ದೇವಾಲಯ, 7) ಚಿಕ್ಕಿ ಗುಡಿ, 8) ಹುಚ್ಚಪ್ಪಯ್ಯ ದೇವಾಲಯ, 9)ಗಳಗನಾಥ ಮತ್ತು ಹುಚ್ಚಪ್ಪಯ್ಯ ಮಠ, 10) ಮೇಗುತಿ ಜಿನಾಲಯ, 11) ದುರ್ಗಾ ದೇವಾಲಯ, 12) ರಾಮಲಿಂಗ ದೇವಾಲಯ.

ಬಾದಾಮಿಯ ಪ್ರಮುಖ ದೇವಾಲಯಗಳೆಂದರೆ, 1) ಮಾಲೆಗಿತ್ತಿ ದೇವಾಲಯ 2)ಮೇಲಿನ ಶಿವಾಲಯ 3) ಜಂಬುಲಿಂಗ ದೇವಾಲಯ 4) ಭೂತನಾಥ ದೇವಾಲಯ.

ಮಹಾಕೂಟದ ದೇವಾಲಯಗಳಲ್ಲಿ 1) ಮಹಾಕೂಟೇಶ್ವರ ದೇವಾಲಯ 2) ಮಲ್ಲಿಕಾರ್ಜುನ ದೇವಾಲಯ 3) ಸಂಗಮೇಶ್ವರ ದೇವಾಲಯ 4) ಬಾಣಂತಿ ಗುಡಿ.

ಪಟ್ಟದಕಲ್ಲು ಪರಿಸರದಲ್ಲಿ ಕಂಡು ಬರುವ ವಾಸ್ತುಶಿಲ್ಪಗಳಲ್ಲಿ 1) ಗಳಗನಾಥ ದೇವಾಲಯ 2) ಪಾಪನಾಥ ದೇವಾಲಯ 3) ಮಲ್ಲಿಕಾರ್ಜುನ ದೇವಾಲಯ 4) ಸಂಗಮೇಶ್ವರ ದೇವಾಲಯ 5) ವಿರೂಪಾಕ್ಷ ದೇವಾಲಯ.

ಇನ್ನು ಇವೆಲ್ಲವುಗಳ ರಚನಾ ವಿಶೇಷಗಳ ಬಗೆಗೆ ನಾವು ಗಮನಹರಿಸುವುದು ಅವಶ್ಯವೆನಿಸುತ್ತದೆ.

ಐಹೊಳೆಯಲ್ಲಿ ಕಾಣಬರುವ ವಿವಿಧ ಸಮೂಹ ದೇವಾಲಯಗಳು ಆಕರ್ಷಕ ದೃಶ್ಯವನ್ನೀಯುತ್ತವೆ. ವಿವಿಧ ರಾಚನಿಕ ದೇವಾಲಯಗಳು ವಾಸ್ತುಕಲೆಯ ಬಗೆಗೆ ಅಧ್ಯಯನ ಮಾಡಬಯಸುವ ಮನಸ್ಸುಗಳಿಗೆ ಪ್ರಯೋಜನಕಾರಿ ಎನಿಸುತ್ತವೆ. ಖ್ಯಾತ ಇತಿಹಾಸ ಸಂಶೋಧಕ ಡಾ. ಆರ್.ಎಸ್.ಗುಪ್ತೆ ತಮ್ಮ ಒಂದು ಗ್ರಂಥದಲ್ಲಿ ಐಹೊಳೆಯ ಅಪೂರ್ವ ವಾಸ್ತುಶಿಲ್ಪಗಳ ಕುರಿತು ನೀಡುವ ವ್ಯಾಖೆ ಹೀಗಿದೆ. "ಇಂಥ ಸ್ಥಳದ ಆಯ್ಕೆಯು ದೇವಾಲಯಗಳ ರಚನಾರ್ಥಕ ದೃಷ್ಟಿಯನ್ನಿಟ್ಟುಕೊಂಡು ಪರಿಕಲ್ಪನೆಯ ತಾಣಗಳು ಇಡೀ ಭಾರತ ದೇಶದಲ್ಲಿ ಸಮೀಕ್ಷಿಸಿದಂತೆ ಮತ್ತೆಲ್ಲೂ ಕಾಣಸಿಗವು. ಇದು ಕರ್ನಾಟಕದ ವಾಸ್ತುಶಿಲ್ಪದ ಹಾಗೂ ಭೂಗರ್ಭಶಾಸ್ತ್ರಜ್ಞರ ಅನನ್ಯ ಕೊಡುಗೆಯೆಂದೇ ಹೇಳಬಹುದು. ಇದು ಚಾಲುಕ್ಯರ ಹಾಗೂ ಗುಪ್ತರ ಸಮಕಾಲೀನ ವಾಸ್ತುಶಿಲ್ಪದ ಸಮ್ಮಿಲನವನ್ನು ಈ ಐಹೊಳೆ ದೇವಾಲಯಗಳಲ್ಲಿ ಸ್ಪಷ್ಟವಾಗಿ ನಾವು ನೋಡಬಹುದು. ಈ ಪ್ರಕ್ರಿಯೆಯು ಔತ್ತರೇಯ ಗುಪ್ತರ ಹಾಗೂ ದಾಕ್ಷಿಣಾತ್ಯ ಚಾಲುಕ್ಯರ ವಾಸ್ತುಶಿಲ್ಪದ ವಿನ್ಯಾಸಗಳ ಸಂಗಮವನ್ನಿಲ್ಲಿ ಕಾಣುತ್ತೇವೆ. ಇದೊಂದು ಎರಡೂ ಪ್ರದೇಶಗಳ ವಾಸ್ತುಕಲೆಯ ಸಂಗಮವನ್ನು ಸಮ್ಮಿಶ್ರಿಸುವ ಒಂದು ಆಂದೋಲನವೆಂದು ಗ್ರಹಿಸಬಹುದು. ಇದಲ್ಲದೇ ಈ ದೇವಾಲಯಗಳನ್ನು ನಿರ್ಮಾಣಗೈವ ಕಾಲಘಟ್ಟದ ಆಂದೋಲನವು ಪೂರ್ತಿ ಭಾರತೀಯವಾಗಿಯೂ, ಸ್ವತಂತ್ರವಾಗಿದ್ದುದೂ ಕಂಡು ಬರುತ್ತದೆ. ಇದರಲ್ಲಿ ವಿಶೇಷವಾಗಿ ಚಾಲುಕ್ಯರ ಹಾಗೂ ಗುಪ್ತರ ವಾಸ್ತು ಪ್ರಯೋಗಗಳಲ್ಲಿ ಒಂದಕ್ಕೊಂದು ಪೂರಕವಾಗಿದ್ದುದು ನಮಗೆ ಗೋಚರಿಸುತ್ತದೆ. ಈ ಸಾಂಗಮಿಕ ಕೊಡುಗೆಯು ಬಹಳಷ್ಟು ಪರಿಶ್ರಮವಾದದ್ದು ಹಾಗೂ ವೈಚಾರಿಕವಾದದ್ದು. ಅಷ್ಟೇ ಪ್ರಜ್ಞಾಪೂರ್ವಕವಾಗಿ ನೀಡಿದ ಕೊಡುಗೆಯು ಮುಂಬರುವ ದೇವಾಲಯಗಳ ಬೆಳವಣಿಗೆಗೆ ನಾಂದಿಯಾದವು. ಈ ರಚನಾ ಆಂದೋಲನವು ಪ್ರಾಚೀನ

ಶಿಲ್ಪ ಶಾಸ್ತ್ರ ಗ್ರಂಥಗಳ ಮಾರ್ಗದರ್ಶನದಲ್ಲಿ ಚಾಚೂ ತಪ್ಪದಂತೆ ಮುಂದುವರೆದದ್ದು ಇಲ್ಲಿ ಕಾಣಸಿಗುತ್ತದೆ. (The Art and Architecture of Aihole – Dr. R.S. Gupte) ಈ ಕಾರಣಗಳಿಂದ ಚಾಲುಕ್ಯ ನಾಡಿನ ಐಹೊಳೆ, ಬಾದಾಮಿ, ಪಟ್ಟದಕಲ್ಲುಗಳಲ್ಲಿ ಈ ಹಿಂದೆ ನಡೆದ ವಾಸ್ತುಕಲಾ ಪ್ರಯೋಗಗಳು ಔತ್ತರೇಯ ಹಾಗೂ ದಾಕ್ಷಿಣಾತ್ಯ ದೇವಾಲಯಗಳ ವಾಸ್ತುಶಿಲ್ಪದ ಸಂಗಮವೆಂದು ನಾವು ನಿರ್ಣಯಿಸಬಹುದು. ಈ ವ್ಯಾಖ್ಯಾನವನ್ನು ನಾವಷ್ಟೇ ಅಲ್ಲ ಬಹಳಷ್ಟು ಜನ ಕಲಾ ಇತಿಹಾಸಕಾರರೂ ಒಪ್ಪಿಕೊಂಡಿದ್ದಾರೆ ಕೂಡಾ. ಇದು ಇಡೀ ಕರ್ನಾಟಕವೇ ಹೆಮ್ಮೆ ಪಡುವಂಥ ವಿಷಯವಾಗಿದೆ ಎಂಬುದನ್ನು ನಾವು ಒಪ್ಪಿಕೊಳ್ಳಲೇಬೇಕು.

**ಐಹೊಳೆಯ ಮಹತ್ವದ ರಾಚನಿಕ ದೇವಾಲಯಗಳು:**

**ಗೌಡರ (ಭಗವತಿ) ದೇವಾಲಯ:**

ಚಾಲುಕ್ಯ ವಾಸ್ತುಶಿಲ್ಪಿಗಳು ಐಹೊಳೆಯ ಪರಿಸರದಲ್ಲಿ ನಿರ್ಮಾಣ ಮಾಡಿದ ಒಂದೊಂದೇ ದೇವಾಲಯಗಳನ್ನು ವಾಸ್ತು ಶಾಸ್ತ್ರಕ್ಕನುಗುಣವಾಗಿ ಈ ಕೆಳಗಿನಂತೆ ವಿಶ್ಲೇಷಿಸಬಹುದು.

ದೇವಾಲಯ ರಚನೆಗೆ ಶ್ರೀಕಾರಗೈದವರಲ್ಲಿ ಗುಪ್ತರು ಮಹತ್ವದ ಸ್ಥಾನವನ್ನು ಪಡೆದುಕೊಳ್ಳುತ್ತಾರೆ. ಆ ಕಾಲದಿಂದಲೂ ವಾಸ್ತು ಮಂಡಲದ ಆಧಾರದಲ್ಲಿ ದೇವಾಲಯ ರಚನಾಕಾರ್ಯ ನಡೆದಿದೆ. ಇಲ್ಲಿ ಗರ್ಭಗೃಹವು ಕೇಂದ್ರದಲ್ಲಿದ್ದು ಅದರ ಸುತ್ತಲೂ ಪ್ರದಕ್ಷಿಣೆಗೆ ಅವಕಾಶವಾಗುವಂತೆ ಪ್ರದಕ್ಷಿಣಾ ಪಥವಿದೆ. ನಾಲ್ಕು ದಿಕ್ಕುಗಳಲ್ಲಿ ದ್ವಾರಗಳಿರುವದು ನಮ್ಮ ಗಮನಕ್ಕೆ ಬರುತ್ತದೆ. ಈ ಮಾದರಿಯಂತೆಯೇ ಐಹೊಳೆಯ ದೇವಾಲಯವು ನಿರ್ಮಿತವಾಗಿದೆ. ಇಲ್ಲಿ ಗೌಡರ ಗುಡಿಯನ್ನು ಭಗವತಿ ದೇವಾಲಯವೆಂದೂ ಕರೆಯಲಾಗುತ್ತದೆ.

ಇದೊಂದು ಅಪೂರ್ವವಾದ ದೇವಾಲಯವಾಗಿದ್ದು, ನಡುವೆ ಇರುವ ಗರ್ಭಗೃಹ, ಸುತ್ತಲಿನ ಪ್ರದಕ್ಷಿಣಾ ಪಥ ಸುತ್ತಲಿರುವ ಕಂಭಗಳ ಆಧಾರದಲ್ಲಿ ಪಕ್ಕದಲ್ಲಿರುವ ಲಾಡಖಾನ್ ಗುಡಿಗಿಂತಲೂ ಆಳವಾದ ಅಡಿಪಾಯದಲ್ಲಿ ನಿರ್ಮಿತಗೊಂಡಿದೆ.

ಐಹೊಳೆಯಲ್ಲಿರುವ ದೇವಾಲಯಗಳಲ್ಲಿ ವೈಶಿಷ್ಟ್ಯವೆನಿಸುವ ಈ ದೇವಾಲಯವು 16 ಚಚ್ಚೌಕಾದ ಕಂಭಗಳಲ್ಲದೇ ಮಧ್ಯದಲ್ಲಿನ ನಾಲ್ಕು ಕಂಭಗಳಿಂದ ಸಂಯೋಜಿಸಲ್ಪಟ್ಟ ಈ ದೇವಾಲಯದ ಮೇಲೆ ಇಳಿಜಾರಾದ ಮೇಲ್ಛಾವಣಿಯಿದೆ. ನಡುವೆ ಗರ್ಭಗೃಹ ಸುತ್ತಲೂ ಪ್ರದಕ್ಷಿಣಾಪಥ. ಗರ್ಭಗೃಹದಲ್ಲಿ ದುರ್ಗಾಭಗವತಿಯ ವಿಗ್ರಹವಿತ್ತೆಂದು ಪ್ರೊ. ಶ್ರೀನಿವಾಸ ಪಾಡಿಗಾರ ಹೇಳುತ್ತಾರೆ. (ಬಾದಾಮಿ ಚಾಲುಕ್ಯರ ಶಾಸನಗಳು ವಾಸ್ತು ಮತ್ತು ಶಿಲ್ಪಕಲೆ, ಪುಟ–46).



ಗೌಡರ ದೇವಾಲಯ ಊರ್ಧ್ವ ನೋಟ



ಗೌಡರ ದೇವಾಲಯ ತಲವಿನ್ಯಾಸ



ಗೌಡರ ದೇವಾಲಯ

ಈ ದೇವಾಲಯದ ದ್ವಾರ ಬಂಧವು ಔತ್ತರೇಯ ಲಕ್ಷಣಗಳಿಂದ ರೂಪುಗೊಂಡಿದ್ದು, ಲಲಾಟದಲ್ಲಿ ಗಜಲಕ್ಷ್ಮೀಯ ವಿಗ್ರಹ ಕೆತ್ತಲಾಗಿದೆ. ದೇವಾಲಯದ ಅಂಚಿನಗುಂಟ ಕಕ್ಷಾಸನಗಳನ್ನು ಸಂಯೋಜಿಸಲಾಗಿದೆ. ಈ ದೇವಾಲಯದಲ್ಲಿ ಮಂಟಪ, ಗರ್ಭಗುಡಿ ಮತ್ತು ಪ್ರದಕ್ಷಿಣಾ ಪಥಗಳಿದ್ದು, ಗರ್ಭಗೃಹದ ದ್ವಾರಬಾಗಿಲು ಮಧ್ಯದಲ್ಲಿ ಗರುಡನು ನಾಗಗಳನ್ನು ತೂರಿ ಅಂತರಿಕ್ಷದಲ್ಲಿ ಹಾರುತ್ತಿರುವ ದೃಶ್ಯ ನಯನಮನೋಹರವಾಗಿದೆ. ಗೌಡರ ಗುಡಿಯ ಮಂಟಪದ ಒಂದು ತೊಲೆಯ ಮೇಲೆ ಎಂಟನೆಯ ಶತಮಾನದ ಒಂದು ಕನ್ನಡ ಶಾಸನವಿದೆ. ಇದರಲ್ಲಿ ಆಯ್ಯಾವೊಳೆಯ ಮಹಾಚಾತುರ್ವೇದಿಗಳಾದ ಐನೂರು ಮಹಾಜನರು, ಎಂಟು ನಗರಗಳು ಮತ್ತು 120 ಊರಾಳುವವರು ದುರ್ಗಾಭಗವತಿದೇವಿಗೆ ಭೂದಾನ ಕೊಟ್ಟಿದ್ದನ್ನು ಈ ಶಾಸನ ತಿಳಿಸಿಕೊಡುತ್ತದೆ. ಈ ದೇವಾಲಯದ ನಿರ್ಮಾಣಕಾಲವು ಐದನೆಯ ಶತಮಾನದ್ದೆಂಬುದು ಇತಿಹಾಸ ಸಂಶೋಧಕರ ಅಭಿಪ್ರಾಯ.

ಗೌಡರ ಗುಡಿಯ ರಚನೆ ಕುರಿತ ವಾಸ್ತುವಿನ್ಯಾಸ ಕಟ್ಟಡದ ರಚನೆ ಕುರಿತ ವಿವರ ಹೀಗಿದೆ.

ಪೂರ್ವ ದಿಕ್ಕಿಗೆ ಮುಖಮಾಡಿ ನಿರ್ಮಿಸಿರುವ ಈ ದೇವಾಲಯವು ಲಾಡಖಾನ್ ದೇವಾಲಯದ ಆಗ್ನೇಯಕ್ಕೆ 6 ಮೀ. 10 ಸೆಂ.ಮೀ. ಅಂತರದಲ್ಲಿದೆ. ಹಿಂದೆ ಗೌಡರ ಮನೆತನದವರು ಈ ದೇವಸ್ಥಾನದ ಪಕ್ಕದಲ್ಲಿದ್ದ ಕಾರಣದಿಂದ ಈ ದೇವಾಲಯಕ್ಕೆ ಗೌಡರ ದೇವಾಲಯವೆಂದು ಕರೆಯಲಾಗುತ್ತಿದೆ. ಇದು 1 ಮೀ. 52 ಸೆಂ.ಮೀ. ಎತ್ತರದ ಅಧಿಷ್ಠಾನದ ಮೇಲೆ ಕಟ್ಟಲ್ಪಟ್ಟಿದ್ದು 16 ಚಚ್ಚೌಕಾರದ ಕಂಭಗಳು

ಹೊರಗೋಡೆಗಳಲ್ಲಿವೆ. ಮಂಟಪದ ನಾಲ್ಕು ನಡುವಿನ ಕಂಭಗಳು ದೇವಾಲಯದ ಮಂಟಪದ ಛತ್ತನ್ನು ಹೊತ್ತು ನಿಂತಿವೆ. ಈ ನಾಲ್ಕೂ ಮಧ್ಯದ ಕಂಭಗಳು ದೇವಾಲಯದ ಗರ್ಭಗೃಹದ ಮುಂದಿನ ಮಂಟಪವನ್ನು ಮೂರು ಭಾಗಗಳಲ್ಲಿ ವಿಂಗಡಿಸುತ್ತದೆ. ಮೇಲ್ ಬದಿಯಲ್ಲಿ ಛತ್ತನ್ನು ಇಳಿಜಾರಾಗಿ ಹೊಂದಿಸಲಾಗಿದೆ.

ಈ ದೇವಾಲಯಕ್ಕೆ ಗರ್ಭಗುಡಿ, ಪ್ರದಕ್ಷಿಣಾಪಥ, ಮಂಟಪ ಭಾಗಗಳಿವೆ. ಗರ್ಭಗುಡಿಯ ದ್ವಾರದ ಚೌಕಟ್ಟನ್ನು ಸುಂದರ ಕೆತ್ತನೆಯಿಂದ ಅಲಂಕರಿಸಲಾಗಿದೆ. ಚೌಕಟ್ಟಿನ ತೋಳುಗಳಲ್ಲಿ ಹೂವಿನ ಸುಳಿವುಗಳ ಕುಸುರಿಕಾರ್ಯವಿದೆ. ಗರ್ಭಗೃಹದ ಬಾಗಿಲದ ನಡುವಿನಲ್ಲಿ ಮನುಷ್ಯರೂಪಿ ಗರುಡನು ನಾಗಗಳ ಬಾಲಗಳನ್ನು ತನ್ನ ಎರಡೂ ಕೈಗಳಿಂದ ತೂರಿದಂತೆ ಕೆತ್ತಲಾಗಿದೆ. ಗರುಡನ ಮೇಲ್ಭಾಗದಲ್ಲಿ ಲಕ್ಷ್ಮೀಯನ್ನು ಸುಂದರವಾಗಿ ಆನೆಗಳ ಮಧ್ಯದಲ್ಲಿ ಚಿತ್ರಿಸಲಾಗಿದೆ. ಗೌಡರ ದೇವಾಲಯದ ಗರ್ಭಗುಡಿ 2ಮೀ. 20 ಸೆಂ.ಮೀ. ಉದ್ದ 1.ಮೀ. 60 ಸೆಂ.ಮೀ. ಅಗಲ ಅಳತೆಯಲ್ಲಿದೆ. ಮೇಲಿನ ಛತ್ತು ಸಮತಟ್ಟಾಗಿದ್ದು, ಗರ್ಭಗುಡಿಯ ಮೂರೂ ಹೊರಗೋಡೆಗಳಲ್ಲಿ ಮೂರು ಕಮಾನುಗಳನ್ನು ರೂಪಿಸಲಾಗಿದೆ. ಅಲ್ಲಿ ಯಾವುದೇ ವಿಗ್ರಹವನ್ನು ಸಂಯೋಜಿಸಿರುವುದಿಲ್ಲ.

ಕಕ್ಷಾಸನವನ್ನು ದೇವಾಲಯ ಮುಂಭಾಗವನ್ನು ಬಿಟ್ಟು ಮೂರೂ ಭಾಗದಲ್ಲಿ ನಿರ್ಮಿಸಲಾಗಿದೆ. ಅವುಗಳಲ್ಲಿ ಅಮೃತ ಕಲಶಗಳನ್ನು ಕೆತ್ತಲಾಗಿದೆ. ಹಿಂದೆ ಭಗವತಿ ದೇವಾಲಯವೆಂದು ಕರೆಯಲ್ಪಟ್ಟ ಈ ವಾಸ್ತು ಶಿಲ್ಪವು ಇಲ್ಲಿನ ಪ್ರಾಚೀನ ದೇವಾಲಯಗಳಲ್ಲಿಯೇ ಮೊದಲಿನದೆಂದು ಇತಿಹಾಸ ಸಂಶೋಧಕರ ಅಭಿಪ್ರಾಯವಾಗಿದೆ.

ವಾಸ್ತು ಶಾಸ್ತ್ರದಲ್ಲಿ ಉಲ್ಲೇಖಿಸಲ್ಪಟ್ಟ ವಾಸ್ತು ಮಂಡಲದ ಪ್ರಕಾರ ನಿರ್ಮಾಣಗೊಂಡ ಈ ದೇವಾಲಯವು ಏಕ ಬೇರಾಲಯದಂತೆ ನಿರ್ಮಾಣಗೊಂಡಿದೆ. ದೇವಾಲಯದ ಊರ್ಧ್ವಮುಖ ರಚನೆಗಳಲ್ಲಿಯ ಉಪಪೀಠ ಅಧಿಷ್ಠಾನ, ಜಗತೀ, ಭಿತ್ತಿ, ಕುಡ್ಯಸ್ತಂಭ ಹಾಗೂ ಪ್ರಸ್ತರಗಳಿವೆ. ಮೇಲ್ಕಟ್ಟಡದ ಪ್ರಾಚೀನತೆಯ ಉದಾಹರಣೆಗೆ ಐಹೊಳೆಯ ಗೌಡರ ಗುಡಿ, ಮಹಾಕೂಟದ ಹಿರೇಮಹಾಕೂಟೇಶ್ವರ ದೇವಾಲಯಗಳನ್ನು ಉದಾಹರಿಸಬಹುದು. ಈ ದೇವಾಲಯಗಳಲ್ಲಿ ಮೇಲ್ಕಟ್ಟಡವೇ ಇರುವುದಿಲ್ಲ.

ದೇವಾಲಯದ ತಿರ್ಯಙ್ಮುಖ ರಚನೆಯ ಬಗ್ಗೆ ವಿವರಿಸುವಾಗ ಐಹೊಳೆಯ ಗೌಡರ ಗುಡಿಯಲ್ಲಿ ಗರ್ಭಗೃಹ, ಅದರ ಸುತ್ತಲೂ ಪ್ರದಕ್ಷಿಣಾಪಥ, ನವರಂಗ ಹಾಗೂ ಮಂಟಪಗಳನ್ನು ಗುರುತಿಸಬಹುದಾಗಿದೆ. ಒಟ್ಟಾರೆ ದೇವಾಲಯ ವಾಸ್ತುವಿನ ರಚನಾಕ್ರಮಗಳ ಪ್ರಯೋಗಗಳು ಬಾದಾಮಿ, ಐಹೊಳೆ, ಪಟ್ಟದಕಲ್ಲುಗಳಲ್ಲಿರುವ ಚಾಲುಕ್ಯ ವಾಸ್ತುಶಿಲ್ಪಗಳಲ್ಲಿ ನಡೆದಿರುವುದು ನಮ್ಮ ಗಮನಕ್ಕೆ ಬರುತ್ತದೆ.

**ದೇವಾಲಯದ ಸಾಲಂಕೃತ ಭಾಗಗಳು :**

ಪ್ರತಿಯೊಂದು ದೇವಾಲಯಕ್ಕೂ ಭದ್ರತೆಗೆ ಸ್ತಂಭಗಳೇ ಮುಖ್ಯವಾದವು. ಹೊರಗಿನಿಂದ ನೋಡಿದಾಗ ದೇವಾಲಯವು ಭಿತ್ತಿಯ ಆಧಾರದಲ್ಲಿ ನಿಂತಿರುವಂತೆ ಕಂಡರೂ ವಾಸ್ತವವಾಗಿ ಅದು ನಿಂತಿರುವುದು ಸ್ತಂಭಗಳ ಆಧಾರದಲ್ಲಿಯೆ! ಈ ಕಾರಣದಿಂದಲೇ ದೇವಾಲಯಗಳಲ್ಲಿ ಸ್ತಂಭಗಳು ಪ್ರಮುಖವಾದವು. ಈ ಕಂಭಗಳು ಅರ್ಧಮಂಟಪ, ನವರಂಗ, ಮುಖಮಂಟಪ ಮುಂತಾದೆಡೆಯಲ್ಲಿ ಸಂಯೋಜನೆಗೊಂಡಿರುತ್ತವೆ. ಹಾಗೆಯೇ ಗೌಡರ ಗುಡಿಯಲ್ಲೂ ಸಹ ಸ್ತಂಭಗಳು (ಕಂಭಗಳು) ಇಡೀ ದೇವಾಲಯದ ಬಹು ಮುಖ್ಯ ಭಾಗದಂತೆ ಬಳಕೆಗೊಂಡಿವೆ. ಈ ದೇವಾಲಯದ ಗರ್ಭಗೃಹದ ದ್ವಾರ, ಲಲಾಟ, ದ್ವಾರ ಶಾಖಾಗಳಲ್ಲಿ ವೈವಿಧ್ಯ ಶಿಲ್ಪ ಪ್ರಯೋಗಗಳು ನಮ್ಮ ಗಮನಕ್ಕೆ ಬರುತ್ತವೆ. ದೇವಾಲಯದ

ಇನ್ನೊಂದು ಭಾಗ "ಸೋಪಾನ". ಯಾವುದೇ ದೇವಾಲಯಕ್ಕೂ ಎತ್ತರವಾದ ಅಧಿಷ್ಠಾನವಿದ್ದಾಗ ದೇವಾಲಯದ ನೆಲಮಟ್ಟ ತಲುಪಲು "ಸೋಪಾನ" ಅತ್ಯಾವಶ್ಯಕ. ಇದನ್ನು ಮೆಟ್ಟಲುಗಳೆಂದೂ ಸಹ ಕರೆಯಲಾಗುತ್ತದೆ. ಗೌಡರ ದೇವಾಲಯದಲ್ಲಿ ಸೋಪಾನವೂ ಇದ್ದು, ದೇವಾಲಯ ಪ್ರವೇಶಕ್ಕೆ ಅನುಕೂಲ ಕಲ್ಪಿಸಿದೆಯಲ್ಲದೇ, ಎತ್ತರ ಅಧಿಷ್ಠಾನದ ಈ ದೇವಾಲಯಕ್ಕೆ ವಿಶೇಷ ಸೊಬಗನ್ನೂ ಸಹ ನೀಡಿದೆ.

**ಲಾಡಖಾನ್ ದೇವಾಲಯ :**

ಐಹೊಳೆಯಲ್ಲಿರುವ ಲಾಡಖಾನ್ ದೇವಾಲಯವನ್ನು ಚಾಲುಕ್ಯ ದೇವಾಲಯಗಳಲ್ಲಿಯೇ ಪ್ರಾಚೀನವಾದದ್ದೆಂದು ಅನೇಕ ವಾಸ್ತು ತಜ್ಞರು ಹೇಳುತ್ತಿದ್ದುದು ಗೌಡರ ಗುಡಿಯ ಉತ್ಖನನದಿಂದ ಅದು ಅತ್ಯಂತ ಪ್ರಾಚೀನತೆ ಹೊಂದಿದೆಂಬುದನ್ನು ಖ್ಯಾತ ಪ್ರಾಕ್ತನ ಶಾಸ್ತ್ರಜ್ಞ ಡಾ. ಎಸ್.ಆರ್.ರಾವ್ ಖಚಿತಪಡಿಸಿದ್ದಾರೆ. ಅದೇ ರೀತಿ ಕೊಂತಿ ಗುಡಿಯು ಮೊದಲ ದೇವಾಲಯವೆಂದು ಆರ್.ಎಸ್.ಗುಪ್ತೆ ಮುಂತಾದವರು ಅಭಿಪ್ರಾಯಪಟ್ಟರೆ, ಐಹೊಳೆಯ ಜ್ಯೋತಿರ್ಲಿಂಗ ಗುಡಿಗಳ ಗುಂಪಿನಲ್ಲಿರುವ ಎರಡು ಚಿಕ್ಕ ಹಾಗೂ ಮಂಟಪ ರೂಪದಲ್ಲಿ ನಿಂತ ದೇವಾಲಯಗಳು ಅತ್ಯಂತ ಪ್ರಾಚೀನವಾದ ದೇಗುಲಗಳೆಂದು ಕೆ.ವ್ಹಿ.ಸೌಂದರರಾಜನ್ ಅವರು ತಮ್ಮ ಊಹೆಯನ್ನು ಸಮರ್ಥಿಸಲು ಹಲವಾರು ದೃಷ್ಟಾಂತಗಳನ್ನು ನೀಡುತ್ತಾರೆ. ಅದೇನೇ ಇರಲಿ, ಐಹೊಳೆಯ ಲಾಡಖಾನ್ ದೇವಾಲಯವು ಪ್ರಾಚೀನ ದೇವಾಲಯಗಳಲ್ಲೊಂದು ಎಂದು ಹೇಳಿದರೆ ಯಾವ ಉತ್ಪ್ರೇಕ್ಷೆಯಿಲ್ಲ.



ಲಾಡಖಾನ್ ದೇವಾಲಯ ಊರ್ಧ್ವ ನೋಟ



ಲಾಡಖಾನ್ ದೇವಾಲಯ ತಲವಿನ್ಯಾಸ

ಇದೊಂದು ಶೈವ ದೇವಾಲಯ. ಇಲ್ಲಿ ವಾಸಗೊಂಡಿದ್ದ ಲಾಡಖಾನ್ ಎಂಬುವನಿಂದ ದೇವಾಲಯಕ್ಕೆ ರೂಢಿಗತವಾಗಿ ಈ ಹೆಸರು ಪ್ರಚಲಿತದಲ್ಲಿದೆ. ದೇವಾಲಯದ ತಲವಿನ್ಯಾಸ, ಊರ್ಧ್ವರಚನೆ ಹಾಗೂ ವಿವಿಧ ಭಾಗಗಳಲ್ಲಿ ಒಂದು ರೀತಿಯ ನೂತನ ಪ್ರಯೋಗ ನಡೆದಿರುವುದು ನಮ್ಮ ಅವಗಾಹನೆಗೆ ಬರುವುದು.

ಈ ದೇವಾಲಯದ ರಚನೆಯಲ್ಲಿನ ಕೆಲವು ವಿಶೇಷ ಅಂಶಗಳನ್ನು ಹೀಗೆ ವಿವರಿಸಬಹುದು. ಲಾಡಖಾನ್ ದೇವಾಲಯದ್ದು ಮಂಟಪ ಪ್ರಕಾರದ ವಾಸ್ತುಶಿಲ್ಪ ಹದಿನಾರು ಕಂಬಗಳನ್ನು ಹೊಂದಿದ ಇದು ವಿಶಾಲವಾದ ಚಚ್ಚೌಕಾಕೃತಿಯ ಮಂಟಪವನ್ನು ಒಳಗೊಂಡಿರುತ್ತದೆ. ಸುತ್ತಲ ಗೋಡೆಗಳಲ್ಲಿ ಜಾಲಂಧ್ರದ ಕಿಡಕಿಗಳನ್ನು ದೊಡ್ಡ ಗಾತ್ರದಲ್ಲಿ ಸಂಯೋಜಿಸಲಾಗಿದೆ. ಪೂರ್ವದಿಕ್ಕಿಗೆ ಮುಖಮಾಡಿ ನಿರ್ಮಿಸಲ್ಪಟ್ಟ ಈ ದೇವಾಲಯದ ಪ್ರವೇಶದಲ್ಲಿ ಮುಖ ಮಂಟಪವಿದೆ. ಆಯತಾಕಾರದ ಗರ್ಭಗೃಹವನ್ನು ಚಿಕ್ಕ ಗಾತ್ರದಲ್ಲಿ

ರೂಪಿಸಿದ್ದು, ಹಿಂಗೋಡೆಯ ಮಧ್ಯದಿಂದ ಮಂಟಪ ಭಾಗದಲ್ಲಿ ಈ ಗರ್ಭಗೃಹ ಕಟ್ಟಲ್ಪಟ್ಟಿದೆ. ಗರ್ಭಗೃಹದಲ್ಲೀಗ ಲಿಂಗವಿದೆ. ಮೂಲತ: ಸೂರ್ಯ ಇಲ್ಲವೇ ಬೇರೆ ದೇವತೆಯ ವಿಗ್ರಹವನ್ನು ಇಲ್ಲಿ ಇರಬಹುದೆಂದು ಪ್ರೊ. ಶ್ರೀನಿವಾಸ ಪಾಡಿಗಾರರು ಅಭಿಪ್ರಾಯ ಪಡುತ್ತಾರೆ. ಮಂಟಪದ ಛಾವಣಿ ಮಧ್ಯದಲ್ಲಿ ಸಮತಟ್ಟಾಗಿ ರೂಪುಗೊಂಡಿದ್ದು ದೇವಾಲಯದ ನಾಲ್ಕು ಭಾಗಗಳಲ್ಲಿ ಎರಡು ಹಂತದಲ್ಲಿ ಇಳಿಜಾರಾಗಿ ಸಂಯೋಜನೆಗೊಂಡಿದೆ. ಮಂಟಪದ ಮಧ್ಯದಲ್ಲಿ ನಾಲ್ಕು ಕಂಬಗಳ ನಡುವೆ ದೊಡ್ಡ ಗಾತ್ರದ ನಂದಿ ವಿಗ್ರಹವಿದೆ. ಈ ಕಂಬಗಳಿರುವ ಸ್ಥಾನದ ಮೇಲ್ಭಾಗದಲ್ಲಿ ಮತ್ತೆ ಒಂದು ಚೌಕಾದ ಗರ್ಭಗುಡಿಯಿದೆ. ಇದರಲ್ಲಿ ಸೂರ್ಯನ ವಿಗ್ರಹವಿದ್ದ ಬಗ್ಗೆ ಇತಿಹಾಸ ಸಂಶೋಧಕರು ಅಭಿಪ್ರಾಯ ಪಡುತ್ತಾರೆ. ಈ ಗರ್ಭಗೃಹದ ಮೂರು ದಿಕ್ಕುಗಳ ಗೋಡೆಗಳಲ್ಲಿ ವಿಷ್ಣು, ಸೂರ್ಯ, ಅರ್ಧನಾರೀಶ್ವರ ಉಬ್ಬು ಶಿಲ್ಪಗಳಿರುವುದು ನಮ್ಮ ಗಮನಕ್ಕೆ ಬರುತ್ತದೆ. ಮೇಲ್ಛಾವಣಿಯಲ್ಲಿಯ ಈ ಗರ್ಭಗೃಹ ತಲುಪಲು ಮುಖ ಮಂಟಪದಲ್ಲಿ ಕಲ್ಲಿನ ಏಣಿಯನ್ನು ನಿರ್ಮಿಸಲಾಗಿದೆ. ಮುಖ ಮಂಟಪದ ಅಂಚಿನ ಗುಂಟಲೂ ಕಕ್ಷಾಸನಗಳಿವೆ. ಇದರ ಕಂಭಗಳ ಹೊರಭಾಗದಲ್ಲಿ ಗಂಗಾ, ಯಮುನಾ, ಮಿಥುನ, ಮುಂತಾದ ಶಿಲ್ಪಗಳನ್ನು ಕೆತ್ತಲಾಗಿದೆ. ಒಂದು ಕಂಭದಲ್ಲಿ ಚಾಲುಕ್ಯ ರಾಜ ಲಾಂಛನದ ಶಿಲ್ಪವಿದೆ. ದೇವಾಲಯದ ವಾಸ್ತುರಚನೆಯನ್ನು ನೋಡಿದಾಗ ಇದೊಂದು 'ಪಂಚಾಯತ ಭವನ'ದಂತೆ ಹೋಲುತ್ತದೆ. ಈ ಕಾರಣದಿಂದಲೇ ಐಹೊಳೆಯ ದೇವಾಲಯಗಳನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿದ ಕಸಿನ್ಸ ಹಾಗೂ ಪರ್ಸಿಬ್ರೌನ್‌ರವರು ಇದನ್ನು 'ಚಾವಡಿ ಮಾದರಿ' ಕಟ್ಟಡವೆಂದೂ ಪ್ರಾಚೀನ ದೇವಾಲಯವಾಗಿರುವ ಇದರ ರಚನೆ ಕ್ರಿ.ಶ. 450ರಲ್ಲಿ ಆಗಿರಬಹುದೆಂದು ತರ್ಕಿಸಿದ್ದನ್ನು ಇತ್ತೀಚಿನ ಕೆಲವು ಆಧಾರಗಳಿಂದಾಗಿ ಈ ದೇವಾಲಯ ಏಳನೆಯ ಶತಮಾನದ ಅಂತ್ಯದ್ದು ಇಲ್ಲವೇ ಎಂಟನೇಯ ಶತಮಾನದ ಪ್ರಾರಂಭದ ವಾಸ್ತು ಶಿಲ್ಪವೆಂದು ಈಚಿನ ಸಂಶೋಧಕರ ಅಭಿಪ್ರಾಯಕ್ಕೆ ಹೆಚ್ಚಿನ ಒತ್ತು ನೀಡುತ್ತಾರೆ.

**ದೇವಾಲಯ ವಾಸ್ತು ವಿಶೇಷ :**

ಈ ದೇವಾಲಯದಲ್ಲಿ ಎರಡೇ ಭಾಗಗಳಿವೆ. ಮೊದಲನೆಯದು ಮುಖಮಂಟಪ. ಇದು 10.19 ಮೀ. ಉದ್ದ 5.66 ಮೀ. ಅಗಲಳತೆಯದಿದ್ದು, ಪ್ರತಿ ಸಾಲಿನಲ್ಲಿ ನಾಲ್ಕು ಕಂಬಗಳ ಮೂರು ಅಡ್ಡ ಸಾಲುಗಳಿವೆ.


ಲಾಡಖಾನ್ ದೇವಾಲಯ

ಮುಖಮಂಟಪದ ಹನ್ನೆರಡು ಕಂಬಗಳು ಮುಖಮಂಟಪದ ಛತ್ತನ್ನು ಹೊತ್ತು ನಿಂತಿವೆ. ದೇವಾಲಯ ಪ್ರವೇಶ ಮಾರ್ಗವನ್ನು ಹೊರತುಪಡಿಸಿ ಉಳಿದ ಹೊರಮಗ್ಗಲ ಕಂಬಗಳ ನಡುವೆ ಕಕ್ಷಾಸನಗಳಿವೆ. ಮುಖಮಂಟಪ ಪ್ರವೇಶ ಮಾಡಲು ಹೊರಗಿನ ನೆಲಮೆಟ್ಟಿಲಿನಿಂದ ಸೋಪಾನಗಳಿವೆ.

ಲಾಡಖಾನ್ ದೇವಾಲಯದ ಮುಖಮಂಟಪವು ಕಂಬಗಳಲ್ಲಿ ಮೂರ್ತಗೊಂಡಿದ್ದರೆ ಅದರ ಮಂಟಪವು ಹದಿನಾರು ಬೃಹತ್ ಕಂಭಗಳ ಮೇಲೆ ನಿಂತಿದೆ. ಇಲ್ಲಿರುವ ಕಂಭಗಳು ಅಡ್ಡ ಹಾಗೂ ಉದ್ದವಾಗಿ ಪ್ರತಿ ಸಾಲಿನಲ್ಲಿ ನಾಲ್ಕು ನಾಲ್ಕರಂತೆ ಇರುತ್ತವೆ. ಮಂಟಪವು ಚೌಕಾಕೃತಿಯಲ್ಲಿದ್ದು, ನಡುವಿನಲ್ಲಿರುವ ನಾಲ್ಕು ಕಂಭಗಳು ಸ್ವಲ್ಪ ಎತ್ತರದ ನೆಲಗಟ್ಟಿನ ಮೇಲೆ ನಿಂತಿವೆ. ಇವುಗಳ ಮಧ್ಯದಲ್ಲಿ ನಂದಿಯು ಗರ್ಭಗೃಹಕ್ಕೆದುರಾಗಿ ಕುಳಿತಿದ್ದಾನೆ.

ಈ ವಾಸ್ತು ರಚನೆಯಲ್ಲಿ ಕಂಭಗಳನ್ನು ನಿಲ್ಲಿಸಿ ಅವುಗಳ ನಡುವಿನ ಸ್ಥಳವನ್ನು ಗೋಡೆ ಮತ್ತು ಜಾಲಂಧ್ರಗಳನ್ನು ಸಂಯೋಜಿಸಿ ಮಂಟಪದ ಹೊರಗೋಡೆ ಮಾಡಿದ್ದು ನಮ್ಮ ಗಮನಕ್ಕೆ ಬರುತ್ತದೆ. ದಕ್ಷಿಣ ಮತ್ತು ಉತ್ತರದ ಗೋಡೆಗಳಲ್ಲಿ ಮೂರು ದೊಡ್ಡ ಗಾತ್ರದ ಜಾಲಂಧ್ರದ ಕಿಡಕಿಗಳಿವೆ. ಹಾಗೆಯೇ ಮುಖಮಂಟಪದಿಂದ ಈ ಮಂಟಪದೊಳಗೆ ಪ್ರವೇಶಿಸುವ ದ್ವಾರದ ಎಡ ಹಾಗೂ ಬಲಕ್ಕೆ ಸಹಿತ ಚೆನ್ನಾಗಿ ಕೆತ್ತಿದ ಎರಡೆರಡು ಜಾಲಂಧ್ರದ ಕಿಟಕಿಗಳಿವೆ. ಈ ಜಾಲಂಧ್ರದ ಕಿಟಕಿಗಳ ಮೂಲಕವಾಗಿ ಮಂಟಪದ ಒಳಗೆ ಗಾಳಿ, ಬೆಳಕು ಬರುತ್ತದೆ.



ಜಾಲಂಧ್ರ

ಲಾಡಖಾನ್ ದೇವಾಲಯದ ವಾಸ್ತುಕಲಾ ಶೈಲಿಯು ಒಂದು ವಿಶೇಷತೆಯನ್ನು ಹೊಂದಿದೆ. ಮಂಟಪ ಪ್ರಕಾರದ ದೇವಾಲಯದ ಈ ಪ್ರಯೋಗದಲ್ಲಿ ಶಿಲ್ಪಿಗಳ ವಿಶೇಷವಾದ ಪರಿಣತಿಯನ್ನು ಕಾಣಬಹುದು. ಮಂಟಪದ ಛತ್ತನ್ನು ಇಳಿಜಾರಾಗಿ ನಿರ್ಮಿಸಿದ್ದು ಈ ಕಲ್ಲುಗಳು ಕಟ್ಟಿಗೆ ಫಳಿಗಳಂತೆಯೇ ತುದಿಗೆ ಅಗಲವಾಗುತ್ತಲೂ ಈ ಹಾಸುಗಲ್ಲುಗಳ ನಡುವಿನ ಬಿರುಕುಗಳಲ್ಲಿ ಮಳೆನೀರು ಸೇರಬಾರದೆಂಬಂತೆ ಹೊಡೆದ ಕಲ್ಲಿನ ಪಟ್ಟಿಗಳನ್ನು ಇಟ್ಟು ಬಿರುಕು ಮುಚ್ಚಿರುವುದು ನಮಗೆ ಕಾಣಸಿಗುತ್ತದೆ.

**ವಾಸ್ತು ಮಂಡಲ ಪ್ರಯೋಗ :**

ಲಾಡಖಾನ್ ದೇವಾಲಯದ ರಚನೆಯಲ್ಲಿ ವಾಸ್ತುಮಂಡಲದ ಪ್ರಯೋಗ ಕಂಡು ಬರುತ್ತದೆ. ಗರ್ಭಗೃಹವನ್ನು ವಾಸ್ತುಮಂಡಲದ ಒಂದು ಅಂಚಿಗೆ ಇರಿಸಿಯೂ ದೇವಾಲಯಗಳನ್ನು ರೂಪಿಸಬಹುದೆಂಬ ಉದಾಹರಣೆಯು ಲಾಡಖಾನ್ ದೇವಾಲಯದಲ್ಲಿ ನಮಗೆ ಸಿಕ್ಕುತ್ತದೆ. ಇದರಿಂದ ಗರ್ಭಗುಡಿಯ ಮುಂದೆ ಮಂಟಪಕ್ಕೆ ಅವಕಾಶವಾಗುತ್ತದೆ. ಆದರೆ ಈ ಸಂದರ್ಭದಲ್ಲಿ ಗರ್ಭಗುಡಿಯನ್ನು ಪ್ರದಕ್ಷಿಣೆ ಮಾಡಲು ಪ್ರದಕ್ಷಿಣಾ ಪಥವಿರುವುದಿಲ್ಲ. ಚಾಲುಕ್ಯ ಮತ್ತು ಪಲ್ಲವರ ಆಳ್ವಿಕೆಯ ಪ್ರಾರಂಭಿಕ ಕಾಲದಲ್ಲಿ ಈ ರೀತಿಯ ಪದವಿನ್ಯಾಸವನ್ನು ಅನುಸರಿಸಿ ದೇವಾಲಯಗಳನ್ನು ಕಟ್ಟಿರುವುದು ಕಂಡು ಬರುತ್ತದೆ. (ಡಾ. ಜಿ. ಜ್ಞಾನಾನಂದ, ವಾಸ್ತುಪುರುಷ ನೆಲೆ ಹಿನ್ನಲೆ, ಪು. 71).

**ವಾಸ್ತುಶಿಲ್ಪ ವಿಶೇಷಗಳು :**

ಲಾಡಖಾನ್ ದೇವಾಲಯದ ವಾಸ್ತು ಸ್ವರೂಪ ಚತುಶ್ರಾಕಾರವೆನಿಸಿದ್ದು ದೇವಾಲಯದ ಮುಂಭಾಗದಲ್ಲಿ ಮುಖಮಂಟಪ ಹೊಂದಿರುವ ಇದರ ಚತುಶ್ರಾಕಾರ ರಚನೆಯ ಮಧ್ಯ ಭಾಗದಲ್ಲಿ ನಾಲ್ಕು ದೊಡ್ಡ ಕಂಬಗಳ ಚತುಷ್ಕವಿದೆ. ಸುತ್ತ ಆಲಿಂದ ರಚನೆಯಿದೆ. ಈ ಆಲಿಂದ ರಚನೆಯಲ್ಲಿ ಎರಡು ಹಂತಗಳಿದ್ದು ಸುತ್ತಲೂ ಇಳಿಜಾರಾದ ಛಾವಣಿಯನ್ನು ಹೊಂದಿದೆ. ಆಲಿಂದ ರಚನೆಯಲ್ಲಿ ಕಂಭಗಳು ಎತ್ತರ ಗಾತ್ರದಲ್ಲಿ ಸ್ಥಾನಕ್ಕೆ ಹೊಂದಿಕೊಂಡಂತಿವೆ. ಹೊರಭಾಗದ ಎರಡನೆಯ ಹಂತದ ಆಲಿಂದ ರಚನೆಯ ಮೂಲೆಯಲ್ಲಿ ಕಂಭಗಳಗೆ ಬದಲಾಗಿ ಕುಡ್ಯ ಸ್ತಂಭಗಳುಂಟು. ಹಿಂಬದಿಯ ಭಿತ್ತಿಗೆ ಅಂಟಿಕೊಂಡಂತೆ ಆ ನಂತರದಲ್ಲಿ ರಚನೆಗೊಂಡ ಗರ್ಭಗೃಹವು ಚತುಷ್ಕ ಹಾಗೂ ಆಲಿಂದದ ಕಂಭಗಳನ್ನು ಆಧರಿಸಿಕೊಂಡಿದೆ. ಆ ಮುಂದಿನ ಹನ್ನೆರಡು ಕಂಭಗಳ ಮುಖಮಂಟಪದ ರಚನೆಯಿದ್ದು ಅದು ಕಕ್ಷಾಸನಗಳನ್ನು ಒಳಗೊಂಡಿದೆ. ಸಾರ್ವಜನಿಕ ಸಭೆಗಳನ್ನು ನಡೆಸುವ “ಸಭಾಗೃಹ” ಮಾದರಿಯ ಈ ದೇವಾಲಯದ ಮಾದರಿ ಔತ್ಯರೇಯ ಗ್ರಂಥಗಳಲ್ಲಿನ “ಸಭಾ” ಪ್ರಕಾರದ್ದಾಗಿದೆ. ದೇವಾಲಯಗಳು ನಿಶ್ಚಿತ ಆಕಾರ ತಳೆಯುವ ಮುನ್ನ ಇಂಥ ಸಾರ್ವಜನಿಕ ಕಟ್ಟಡಗಳಾದವು ಎಂಬುದಕ್ಕೆ ಲಾಡಖಾನ್ ದೇವಾಲಯವು ಸೂಕ್ತ ಉದಾಹರಣೆಯಾಗಿದೆ. ಈ ದೇವಾಲಯದ ಹೊರಗೋಡೆಯಲ್ಲಿ ಕ್ರಿ.ಶ. ಎಂಟನೇಯ ಶತಮಾನದ ಶಾಸನವಿದ್ದು, ಅದರಲ್ಲಿ ಐಹೊಳೆಯಲ್ಲಿದ್ದ ಅಯ್ಯಾವೊಳೆ ಐನೂರ್ವರ ಬಣ್ಣನೆಯಿದೆ. ಈ ಮಹಾಜನರು ಇಲ್ಲಿ ಸಭೆ ನಡೆಸುತ್ತಿದ್ದ ಬಗ್ಗೆ ತಿಳಿಯುತ್ತದೆ.

ಲಾಡಖಾನ್ ದೇವಾಲಯದ ಮಂಟಪ ಭಾಗದ ಮಧ್ಯದಲ್ಲಿರುವ ಚತುಷ್ಕ ಸ್ತಂಭಗಳಿಗೆ ಭಿತ್ತಿ ಫಲಕಗಳಿಂದ ಗರ್ಭಗೃಹವನ್ನಾಗಿ ಮಾಡಬಹುದಿತ್ತು. ಆ ನಂತರದಲ್ಲಿ ಹಿಂಬದಿಯ ಗೋಡೆಯನ್ನಾಧರಿಸಿ ಆಲಿಂದ ರಚನೆಗೆ ಭಿತ್ತಿಯನ್ನು ಅಳವಡಿಸಿಕೊಂಡು ಈ ದೇವಾಲಯದಲ್ಲಿ ಗರ್ಭಗೃಹವನ್ನಾಗಿ ನಿರ್ಮಿಸಿದ್ದು ಒಂದು ವಿನೂತನ ಪ್ರಯೋಗ. ಲಾಡಖಾನ್ ದೇವಾಲಯುದ ತಿರ್ಯಜ್ಮುಖ ರಚನೆಯಲ್ಲಿ ಕಂಡುಬರುವ ಲಕ್ಷಣಗಳೆಂದರೆ ಸೋಪಾನ, ಮುಖಮಂಟಪ, ಮಂಟಪ ಹಾಗೂ ಗರ್ಭಗೃಹ ಭಾಗಗಳು ಮಾತ್ರ, ಊರ್ಧ್ವ ರಚನೆಯಲ್ಲಿ ಅಧಿಷ್ಠಾನ, ಭಿತ್ತಿ ಪ್ರಸ್ತರ ಮಾತ್ರ. ದೇವಾಲಯದ ಮೇಲೆ ಮತ್ತೊಂದು ಗರ್ಭಗೃಹದ ರಚನೆ ಮಾಡಿದ್ದು, ಒಂದು ಹೊಸದಾದ ವಾಸ್ತು ಪ್ರಯೋಗವೆನ್ನಬಹುದು. “ದೇವಾಲಯಗಳ ತೂಗುವ ತೊಟ್ಟಿಲು” ಎಂಬ ಹೆಗ್ಗಳಿಕೆ ಪಡೆದಿರುವ ಐಹೊಳೆಯ ಈ ದೇವಾಲಯ ಒಂದು ವಿಶಿಷ್ಟ ವಾಸ್ತುಶಿಲ್ಪ.



ಗರ್ಭಗೃಹ

**ದೇವಾಲಯ ವಾಸ್ತುಶೈಲಿಯ ಬೆಳವಣಿಗೆ :**

ಬಾದಾಮಿ ಚಾಲುಕ್ಯ ಶಿಲ್ಪಿಗಳು ಐಹೊಳೆ ಪರಿಸರದಲ್ಲಿ ಮಾಡಿರುವ ಪ್ರಯೋಗಗಳು ಅಪರಿಮಿತವಾದವು. ಇಲ್ಲಿನ ವಿವಿಧ ರಚನೆಗಳು ಶಾಲಾ ಮೂಲದಿಂದ ಆರಂಭಗೊಂಡವು ಎಂದೇ

ಹೇಳಲಾಗುತ್ತದೆ. ದೇವಾಲಯಗಳ ಮುಂದಿನ ಬೆಳವಣಿಗೆಯನ್ನು ಐಹೊಳೆಯ ಪ್ರಸಿದ್ಧ ರಾವಳಫಡಿ ಗುಹಾಲಯ ಪಕ್ಕದಲ್ಲಿಯ ಎರಡು ಚಿಕ್ಕ ವಾಸ್ತುಶಿಲ್ಪಗಳ ಮೂಲಕ ಕಾಣಬಹುದು. ಶಿಖರವಿಲ್ಲದ ಸಾಧಾರಣವಾದ ಏಕಾಲಿಂದ ರಚನೆಯಲ್ಲಿ ಮುಖ್ಯ ವಾಸ್ತು ಲಕ್ಷಣಗಳಾದ ಚತುಷ್ಕದೊಂದಿಗೆ ಗರ್ಭಗೃಹ, ಅದಕ್ಕೆ ಹೊಂದಿಕೊಂಡಿರುವ ಮುಖಮಂಟಪವಿದ್ದರೆ, ಇನ್ನೊಂದು ಏಕಾಲಿಂದವು ಶಿಖರವನ್ನು ಹೊಂದಿದೆ. ಇದು ಅತಿ ಒರಟಾದ ಕಲ್ಲುಗಳಿಂದ ರಚನೆಗೊಂಡದ್ದೆನಿಸುತ್ತದೆ. ಈ ಪುಟ್ಟ ದೇವಾಲಯದಲ್ಲಿ ಶಿಖರರಚನೆಯ ಆರಂಭದ ಚಿನ್ಹೆ ಕಂಡು ಬರುತ್ತದೆ. ಇಂಥ ರಚನೆಗಳು ಮಹಾಕೂಟದಲ್ಲಿ ಸಂಪೂರ್ಣವಾಗಿ ಬೆಳೆದ ಶಿಖರವುಳ್ಳವು ಹೆಚ್ಚಿನ ಸಂಖ್ಯೆಯಲ್ಲಿ ಕಾಣಸಿಗುತ್ತವೆ. ಐಹೊಳೆಯ ಜ್ಯೋತಿರ್ಲಿಂಗ ಸಮೂಹ ದೇವಾಲಯಗಳಲ್ಲಿಯೂ ನಮಗೆ ಇಂಥ ದೇವಾಲಯಗಳು ನೋಡಲು ಸಿಗುತ್ತವೆ.

**ಕೊಂತಿ ದೇವಾಲಯದ ಪ್ರಾಚೀನತೆ :**

ಐಹೊಳೆಯ ಪ್ರೇಕ್ಷಣೀಯ ದೇವಾಲಯಗಳಲ್ಲಿ ನಾಲ್ಕು ಗುಡಿಗಳ ಒಂದು ಅಪರೂಪದ್ದಾದ ಐಹೊಳೆಯ ಮಧ್ಯಸ್ಥಾನದಲ್ಲಿರುವ ಕೊಂತಿ ದೇವಾಲಯ ಪ್ರಾಚೀನತೆಯನ್ನು ಹೊಂದಿರುವಂತಿದೆ. ಈ ದೇವಾಲಯ ಸಮುಚ್ಚಯದಲ್ಲಿ ಮೂರು ದೇವಾಲಯಗಳು ಇವೆ. ಎರಡು ವಾಸ್ತುಶಿಲ್ಪಗಳು ಪೂರ್ವಕ್ಕೆದುರಾಗಿದ್ದು, ಒಂದು ಪಶ್ಚಿಮಕ್ಕೂ ಇನ್ನೊಂದು, ಉತ್ತರಾಭಿಮುಖವಾಗಿದೆ. ಇವೆಲ್ಲವುಗಳ ಮುಂದೆ ಸ್ವತಂತ್ರವಾದ ಮುಖಮಂಟಪಗಳುಂಟು. ಈ ಎಲ್ಲ ದೇವಾಲಯಗಳಲ್ಲಿ ಪೂರ್ವಾಭಿಮುಖವಿರುವ ದೇವಾಲಯವು 6.6 ಮೀ. ಅಗಲ ಮತ್ತು 13.3 ಮೀ. ಉದ್ದಳತೆಯದಾಗಿದ್ದು, ಭೂಭಾಗದಿಂದ ಮೆಟ್ಟಿಲುಗಳನ್ನೇರಿ ಮಂಟಪವನ್ನು ಪ್ರವೇಶಿಸಬಹುದು. ಇದು ಪ್ರಾಚೀನ ದೇವಾಲಯವೆಂಬ ಹೆಗ್ಗಳಿಕೆಗೆ ಪಾತ್ರವಾದದ್ದಾಗಿದೆ.



ಕೊಂತಿ ದೇವಾಲಯ

**ಕೊಂತಿ ಗುಡಿ ಸಮೂಹ**

ಕೊಂತಿ ದೇವಾಲಯದ ಮುಂಭಾಗದಲ್ಲಿ 6 ಕಂಬಗಳಿವೆ. ಮಂಟಪ ಮಧ್ಯದಲ್ಲಿ ನಾಲ್ಕು ಕಂಬಗಳ ಎರಡು ಸಾಲುಗಳಿವೆ. ಈ ಮಂಟಪದ ಪಶ್ಚಿಮ ಭಾಗದಲ್ಲಿ ಹೊಂದಿಕೊಂಡಂತೆ ಗರ್ಭಗೃಹವನ್ನು ರೂಪಿಸಲಾಗಿದೆ. ಇದು ಚಚ್ಚೌಕಾರ(ಚತುರಶ್ರ)ದಾಗಿದ್ದು ಈ ಗರ್ಭಗೃಹದ ಉದ್ದ 1.68 ಮೀ. ಅಗಲವು 1 ಮೀ. ಅಳತೆಯಲ್ಲಿದ್ದು ಇದೂ ಸಹ ಲಾಡಖಾನ್ ದೇವಾಲಯದಲ್ಲಿನ ಗರ್ಭಗೃಹದಂತೆಯೇ ಹೊರಗೋಡೆಗೆ ಹೊಂದಿ ಗರ್ಭಗುಡಿಯಿರುವುದರಿಂದ ಇಲ್ಲಿ ಪ್ರದಕ್ಷಿಣಾ ಪಥವಿರುವುದಿಲ್ಲ ಹಾಗೂ ಐಹೊಳೆಯಲ್ಲಿನ ಕೆಲವು ದೇವಾಲಯಗಳಲ್ಲಿರುವಂತೆ ಈ ಕೊಂತಿಗುಡಿಗೆ ಪ್ರತ್ಯೇಕವಾದ ಮುಖಮಂಟಪ ಹಾಗೂ ಅಂತರಾಳಗಳಿಲ್ಲ ಎಂಬುದು ನಾವು ಗಮನಿಸಬೇಕಾದ ವಿಷಯ. ದೇವಾಲಯದ ಕಂಭಗಳಲ್ಲಿ ದೇವರು ಹಾಗೂ ಮಾನವರ ಶಿಲ್ಪಗಳನ್ನು ಕೆತ್ತಲಾಗಿದ್ದು, ಅವು ಸುಂದರವಾಗಿವೆ. ಅದರಲ್ಲಿ ನರಸಿಂಹ ಅವತಾರದ ವಿಗ್ರಹವನ್ನು

ಇನ್ನೊಂದೆಡೆಯಲ್ಲಿ ಗಜಾಸುರ ಸಂಹಾರದ ಶಿಲ್ಪವು ತುಂಬಾ ಆಕರ್ಷಕವಾಗಿವೆ. ಈ ದೇವಾಲಯದ ಮೇಲ್‌ಛತ್ತಿನಲ್ಲಿಯ ಮೂರು ಅಂಕಣಗಳಲ್ಲಿ ಬ್ರಹ್ಮ, ಉಮಾಮಹೇಶ್ವರ, ಅನಂತನಯನ ಮೂರ್ತಿಗಳು ಬಿಡಿಬಿಡಿಯಾಗಿ ಸುಂದರವಾಗಿವೆ. ಹೊರಗೋಡೆಗಳಲ್ಲೂ ವಿಷ್ಣು, ನಟರಾಜ ವಿಗ್ರಹಗಳು ಕೆತ್ತಲ್ಪಟ್ಟಿವೆ. ಈ ದೇವಾಲಯದ ಗರ್ಭಗುಡಿ ಪಕ್ಕದ ಕಂಭಗಳ ಮೇಲೆ ದ್ವಾರಪಾಲಕರ ಆಕರ್ಷಕ ಶಿಲ್ಪಗಳಿವೆ. ಇಲ್ಲಿ ದ್ವಾರಪಾಲಕರ ಹಾಗೂ ಛತ್ತಿನ ಮಧ್ಯದಲ್ಲಿ ಶಿವನ ವಿಗ್ರಹವಿರುವ ಕಾರಣದಿಂದ ಇದೊಂದು ಶೈವದೇವಾಲಯವೆಂಬುದಾಗಿ ಇತಿಹಾಸ ತಜ್ಞರು ಅಭಿಪ್ರಾಯ ಪಡುತ್ತಾರೆ. ಕಂಭಗಳಲ್ಲಿ ಕೆತ್ತಿರುವ ರಸಿಕ ದಂಪತಿಗಳ ಶಿಲ್ಪ, ತ್ರಿಪುರಾಂತಿಕ ಶಿವನ ಮೂರ್ತಿ ಮುಂತಾದ ವಿಗ್ರಹಗಳ ಕೆತ್ತನೆ ಆಕರ್ಷಕವೆನಿಸುತ್ತವೆ. ಈ ದೇವಾಲಯದ ಮುಂದೆ ಚಾಲುಕ್ಯರ ಕಾಲದ ಶಾಸನವೊಂದಿದ್ದು ಇದರಲ್ಲಿ "ಆರ್ಯಪುರ ಅಧಿಷ್ಠಾನದ ಮಹಾ ಚಾತುರ್ವಿದ್ಯಾ ಸಮುದಾಯದ ಐದುನೂರು ಜನರು ಭೂಮಿಯನ್ನು ಇಪ್ಪತ್ತೊಂದು ಗದ್ಯಾಣ ಕೊಟ್ಟು ಖರೀದಿಸಿ ಬ್ರಾಹ್ಮಣರಿಗೆ ದಾನಮಾಡಿದ ಉಲ್ಲೇಖವಿದೆ. ಈ ದೇವಾಲಯದ ರಚನೆ ಕ್ರಿ.ಶ. 750.

**2ನೇ ಕೊಂತಿ ದೇವಾಲಯ**

ಕೊಂತಿ ಗುಡಿಯ 1ನೇಯ ಗುಡಿಯ ಎದುರಿನಲ್ಲಿರುವ ಈ ಕೊಂತಿ 2ನೇ ದೇವಾಲಯದ ನಡುವೆ ಮುಖಮಂಟಪವಿದೆ. ಇದು ಎರಡೂ ದೇವಾಲಯಗಳನ್ನು ಜೋಡಿಸುವಂತಿದೆ. ಇದನ್ನು ನಂತರದಲ್ಲಿ ಸಂಯೋಜಿಸಿರಬೇಕೆನಿಸುತ್ತದೆ. ಎತ್ತರವಾದ ಈ ಮಂಟಪದ ಕಂಭಗಳ ಮೇಲಕ್ಕೆ ಛತ್ತಿದೆ. ಅದು ಸಮತಟ್ಟಾಕಾರದ್ದಾಗಿದೆ. ಈ ಕಂಭಗಳಿಗೆ ಬೋದುಗೆಗಳು, ಯಾಳಿಗಳು ಕೆಳಗೆ ಕುಬ್ಜಮೂರ್ತಿಗಳಿವೆ. ಇಲ್ಲಿನ ಕಂಭಗಳು 3 ಮೀ. ಎತ್ತರವಾಗಿವೆ.

2ನೇಯ ಕೊಂತಿ ಗುಡಿಯು ತಳವಿನ್ಯಾಸದಲ್ಲಿ ಚಚ್ಚೌಕಾಕಾರದ್ದಾಗಿದ್ದು, ಪ್ರವೇಶದ ಎರಡೂ ಮಗ್ಗಲಿಗೆ ಎರಡೆರಡು ಕಂಭಗಳಿವೆ. ದಕ್ಷಿಣದ ಗೋಡೆಯಲ್ಲೊಂದು ಕಂಭವಿದೆ. ಈ ದೇವಾಲಯದ ಪಶ್ಚಿಮ ಹಾಗೂ ಉತ್ತರದ ಗೋಡೆಗಳನ್ನು ನಂತರದಲ್ಲಿ ಕಟ್ಟಿರಬಹುದೆಂಬ ತರ್ಕವಿದೆ. ಈ ದೇವಾಲಯದ ಕಂಭಗಳಲ್ಲಿ ವಿವಿಧ ದೇವರ ಶಿಲ್ಪಗಳಿವೆ. ಈ ದೇವಾಲಯದಲ್ಲೂ ಗರ್ಭಗೃಹವಿದೆ. ಅದರ ದ್ವಾರದಲ್ಲಿ ಸುಂದರ ಹಾಗೂ ಕಲಾತ್ಮಕವಾದ ಕೆತ್ತನೆಗಳಿವೆ. ದ್ವಾರದ ಹತ್ತಿರ ಗಣೇಶ ಮತ್ತು ಮಹಿಷಾಸುರ ಮರ್ದಿನಿಯರನ್ನು ಕೆತ್ತಿ ಸಂಯೋಜಿಸಲಾಗಿದೆ. ಈ ದೇವಾಲಯದ ಅಂಕಣದ ಛತ್ತಿನಲ್ಲಿ ನಡುವೆ ಬ್ರಹ್ಮದೇವ, ಸುತ್ತಮುತ್ತಲಿನ ಖಾನೆಗಳಲ್ಲಿ ಅಷ್ಟದಿಕ್ಪಾಲಕರನ್ನು ಕೆತ್ತಿ ಅಲ್ಲಿ ಸಂಯೋಜಿಸಲಾಗಿದೆ. ಪ್ರತಿಯೊಂದು ದಿಕ್ಕಿಗೂ ಸೂಕ್ತ ಅಧಿದೇವತೆಗಳನ್ನು ಸ್ಥಾಪಿಸಲಾಗಿದೆ. ಕೆಲವು ದಿಕ್ಪಾಲಕರ ಶಿಲ್ಪಗಳು ನಶಿಸಿವೆ. ಈ ದೇವಾಲಯದ ರಚನೆಯೂ ಸಹ ಕ್ರಿ.ಶ. 7ನೇ ಶತಮಾನ.



2ನೇಯ ಕೊಂತಿ ಗುಡಿ ಮಂಟಪ

**3ನೇ ಕೊಂತಿಗುಡಿ**

3ನೇ ಕೊಂತಿಗುಡಿಯ ತಲವಿನ್ಯಾಸವು ಮೊದಲನೆಯ ಕೊಂತಿ ಗುಡಿಯಂತಿದೆ. ಈ ದೇವಾಲಯದ ಕಾಲ ಕ್ರಿ.ಶ. 9ನೇ ಶತಮಾನವಿರಬೇಕು. ಈ ದೇವಾಲಯುದಲ್ಲಿಯೂ ವುುಂದೆ 6 ಕಂಭಗಳಿವೆ. ಅವುಗಳ ಹತ್ತಿರದ ನಾಲ್ಕು ಕಂಭಗಳ ಮಧ್ಯದಲ್ಲಿ ಗರ್ಭಗೃಹಕ್ಕೆ ಹೋಗಲು ವಾರ್ಗವನ್ನು ಬಿಟ್ಟು ಜಾಲಂಧ್ರದ ಗೋಡೆಯನ್ನು ಕಟ್ಟಲಾಗಿದೆ. ಇಲ್ಲಿ ಗರ್ಭಗುಡಿ ನೇರವಾಗಿ ಗೋಚರಿಸುವುದಿಲ್ಲ. ಇಲ್ಲಿನ ಗರ್ಭಗೃಹವು ವಿಶೇಷ ಆಕರ್ಷಕವಾಗಿ ಕಟ್ಟಲ್ಪಟ್ಟಿದೆ. ದ್ವಾರದ ಎಡ ಬಲಗಡೆಯಲ್ಲಿ ದ್ವಾರಪಾಲಕರ ಸುಂದರ ಶಿಲ್ಪಗಳಿವೆ. ಈ ದೇವಾಲಯದಲ್ಲೂ ಪ್ರದಕ್ಷಿಣಾಪಥ ಇರುವು-ದಿಲ್ಲವಾದ್ದರಿಂದ ಇದೊಂದು ನಿರಂಧಾರ ಪದ್ಧತಿಯ ದೇವಾಲಯ. ದೇವಾಲಯದ ಕಂಬಗಳಲ್ಲಿ ಗಜ, ವೃಷಭ ಹಾಗೂ ವರಾಹ ಮುಂತಾದ ವಿಗ್ರಹಗಳನ್ನು ಸುಂದರವಾಗಿ ಕೆತ್ತಲಾಗಿದೆ. ಈ ವಾಸ್ತುಶಿಲ್ಪದಲ್ಲೂ ವಾಸ್ತು ಮಂಡಲ ಪದವಿನ್ಯಾಸದ ಲಕ್ಷಣಗಳಿರುವುದು ನಮ್ಮ ಗಮನಕ್ಕೆ ಬರುತ್ತದೆ. ಜಲಹರ, ಸೋಪಾನಗಳನ್ನು ಈ ದೇವಾಲಯದಲ್ಲಿ ಕಲ್ಪಿಸಲಾಗಿದೆ. ದೇವಾಲಯ ಮೇಲ್ಮಾಳಿಗೆಯು ಸಮತಟ್ಟಾಗಿದ್ದು, ಉಳಿದ ಭಾಗದಲ್ಲಿ ಇಳಿಜಾರಾಗಿದೆ. ಇದೂ ಒಂದು ಸುಂದರವಾದ ದೇವಾಲಯವೆನ್ನಬಹುದು.


3ನೇ ಕೊಂತಿಗುಡಿ

**ವಾಸ್ತು ಶಿಲ್ಪ ವಿಶೇಷಗಳು :**

ಕೊಂತಿ ದೇವಾಲಯ ಸಮೂಹದಲ್ಲಿರುವ ಮೂರು ದೇವಾಲಯಗಳಲ್ಲೂ ಗರ್ಭಗೃಹ, ಮಂಟಪ ಭಾಗಗಳಿದ್ದು, ದೇವಾಲಯದ ಊರ್ಧ್ವಕ್ರಮದಲ್ಲಿ ಅಧಿಷ್ಠಾನ, ಪಾದ, ಪ್ರಸ್ತರಗಳಿವೆ. ಶಿಖರ ವಿನ್ಯಾಸ ಪ್ರಯೋಗ ಇಲ್ಲದ್ದು ನಮ್ಮ ಗಮನಕ್ಕೆ ಬರುತ್ತದೆ. ಈ ದೇವಾಲಯ ನಿರ್ಮಾಣ ಮಾಡುವುದರೊಂದಿಗೆ ಚಾಲುಕ್ಯ ಶಿಲ್ಪಿಗಳು ಮೂಲ ಆರಂಭಿಕ ಕಾಲದ ದೇವಾಲಯವೊಂದರ ಭೂನಕ್ಷೆಯ ಪದವಿನ್ಯಾಸವನ್ನು ಅನುಸರಿಸಿ ಕಟ್ಟಿರುವುದು ಕಂಡು ಬರುತ್ತದೆ.

**ಚಾಲುಕ್ಯ ಶಿಲ್ಪಿಗಳು ಬಳಸಿಕೊಂಡ ವಿವಿಧ ಶೈಲಿಗಳು :**

ಐಹೊಳೆ, ಬಾದಾಮಿ, ಪಟ್ಟದಕಲ್ಲು ಹಾಗೂ ಮಹಾಕೂಟಗಳಲ್ಲಿ ನಿರ್ಮಿಸಿದ ವಿವಿಧ ದೇವಾಲಯಗಳಲ್ಲಿ ಚಾಲುಕ್ಯ ಶಿಲ್ಪಿಗಳು ಹತ್ತು ಹಲವು ಪ್ರಯೋಗಗಳನ್ನು ಮಾಡಿರುವುದು ಕಂಡು ಬರುತ್ತದೆ. ದೇವಾಲಯ ವಾಸ್ತು ನಿರ್ಮಾಣದಲ್ಲಿ ನಮ್ಮ ಪ್ರಾಚೀನ ವಾಸ್ತು ಶಾಸ್ತ್ರಗಳಲ್ಲಿಯ ವಿಷಯಾಧಾರಿತ ಲಕ್ಷಣಗಳನ್ನು ಬಳಸಿಕೊಂಡದ್ದು ವಿಶೇಷ ಅಂಶ. ಪ್ರಾಚೀನ ವಾಸ್ತು ಗ್ರಂಥಗಳ ಪ್ರಕಾರ ನಾಗರ, ದ್ರಾವಿಡ, ವೇಸರವೆಂಬ ಮೂರು ಶೈಲಿಯ ದೇವಾಲಯಗಳು ಎಲ್ಲರಿಗೂ ಚಿರಪರಿಚಿತವಾದವು ಹಾಗೂ ಪ್ರಾಮುಖ್ಯತೆ ಹೊಂದಿದವು. ಇದರೊಂದಿಗೆ ದಾಕ್ಷಿಣಾತ್ಯ ಮತ್ತು ಔತ್ತರೇಯ ಸಂಪ್ರದಾಯದ ಕಟ್ಟಡಗಳೂ ಬೆಳೆದಿರುವುದು ನಮ್ಮ ಗಮನಕ್ಕೆ ಬರುತ್ತದೆ. ಭೌಗೋಳಿಕ ಕಕ್ಷೆಯನ್ನಾಧರಿಸಿ ಶೈಲಿಗಳನ್ನು ಗಮನಿಸಲಾಗಿದೆ.

"ಹಿಮಾಲಯದಿಂದ ವಿಂದ್ಯೆಯವರೆಗಿನ ಪ್ರದೇಶವನ್ನು ಸಾತ್ವಿಕ ವಲಯವೆಂದೂ ಇದನ್ನು ನಾಗರ ಪ್ರಾಸಾದಗಳ ಪ್ರದೇಶವೆಂದೂ, ವಿಂದ್ಯೆಯಿಂದ ಕೃಷ್ಣಾ ನದಿಯವರೆಗಿನ ಭೂಮಿಯನ್ನು ರಾಜಸ ಭೂಭಾಗವೆಂದೂ, ದ್ರಾವಿಡ ಪ್ರಾಸಾದಗಳ ತಾಣವೆಂದೂ, ಕೃಷ್ಣೆಯಿಂದ ಕನ್ಯಾಕುಮಾರಿಯವರೆಗೆ ವ್ಯಾಪಿಸಿರುವ ಭಾಗವನ್ನು ತಾಮಸವೆಂದೂ ವೇಸರ ಪ್ರಾಸಾದಗಳ ಕ್ಷೇತ್ರವೆಂದೂ ಕಾಶ್ಯಪ ಶಿಲ್ಪವು ವ್ಯಾಖ್ಯಾನಿಸಿದೆ. (ಎಂ.ಎನ್.ಪ್ರಭಾಕರ, ದೇವಾಲಯ ವಾಸ್ತು, ಪುಟ–38).

ಬಾದಾಮಿ ಚಾಲುಕ್ಯರ ಕಾಲದಲ್ಲಿ ನಾಗರ, ದ್ರಾವಿಡ ಹಾಗೂ ವೇಸರ ಮತ್ತು ಕಳಿಂಗ ಶೈಲಿಯ ವಾಸ್ತುಶಿಲ್ಪಗಳು ಹೇರಳವಾಗಿ ತಲೆಯೆತ್ತಿರುವುದು ಕಂಡು ಬರುತ್ತದೆ. ಇವುಗಳಲ್ಲಿ ನಾಗರ, ದ್ರಾವಿಡ, ವೇಸರಗಳು ದಾಕ್ಷಿಣಾತ್ಯ ಸಂಪ್ರದಾಯದ ರಚನೆಗಳಾಗಿವೆ. ಕಳಿಂಗ ಶೈಲಿಯು ಔತ್ತರೇಯ ಸಂಪ್ರದಾಯದಕ್ಕೆ ಸೇರಿದ್ದು, ಆ ನಂತರದ ದಿನಗಳಲ್ಲಿ ಅಂದರೆ ಕಲ್ಯಾಣ ಚಾಲುಕ್ಯರ ಕಾಲಕ್ಕೆ ಔತ್ತರೇಯ ಸಂಪ್ರದಾಯದ ಶೈಲಿಗಳು ಬೆಳೆದು ಬಂದವು ಎನ್ನುತ್ತಾರೆ. ಕೆಲವು ವಿದ್ವಾಂಸರು ಈ ಶೈಲಿಯು ಹೊಯ್ಸಳ ಅರಸರ ಕಾಲದಲ್ಲಿಯೂ ಮುಂದುವರೆದು ಸೌರಾಷ್ಟ್ರಾದಿ ರಾಷ್ಟ್ರಗಳಲ್ಲಿ ಲೀನವಾಯಿತೆಂದೂ ದಾಕ್ಷಿಣಾತ್ಯ ಸಂಪ್ರದಾಯವು ಬಾದಾಮಿ ಚಾಲುಕ್ಯರ ನಂತರ, ಚೋಳ, ನೊಳಂಬ, ಗಂಗರ ಕಾಲದಲ್ಲಿ ಪೋಷಿಸಲ್ಪಟ್ಟು ಪುನ: ವಿಜಯನಗರ ಅರಸರ ಕಾಲದಲ್ಲಿ ವಿಜೃಂಭಿಸಿದ ಬಗೆಗೆ ಎಂ.ಎನ್.ಪ್ರಭಾಕರ ಅವರು ದೇವಾಲಯ ವಾಸ್ತು ಗ್ರಂಥದಲ್ಲಿ ತಿಳಿಸುತ್ತಾರೆ. ಈ ಶೈಲಿ ವಿಶೇಷತೆಗಳನ್ನು ವಾಸ್ತುಶಾಸ್ತ್ರಗಳಲ್ಲಿನ ವಿವರದೊಂದಿಗೆ ಸಮೀಕ್ಷಿಸಿ ಅರ್ಥಮಾಡಿಕೊಳ್ಳುವ ಅಗತ್ಯತೆಯಿದ್ದು ಈಗ ಹೆಚ್ಚಾಗಿ ಪ್ರಯೋಜನ ಪಡೆಯಬಹುದಾಗಿದೆ.

**ತಾರಬಸಪ್ಪ ದೇವಾಲಯ :**

ಐಹೊಳೆ–ಅಮೀನಗಡ ಮಾರ್ಗದ ಬಲಭಾಗದಲ್ಲಿ ಕಾಣುವ ಈ ದೇವಾಲಯದ ವಾಸ್ತುಶಿಲ್ಪ ಪ್ರಯೋಗದಲ್ಲಿ ವಿಶಿಷ್ಟವಾದ ರಚನೆ. ಪ್ರವೇಶ ದ್ವಾರದಲ್ಲಿಯ ನಾಲ್ಕು ಕಂಬಗಳ ಮುಖ ಮಂಟಪವಿದೆ. (ಮುಖ ಚತುಷ್ಕ). ನಂತರ ಗೂಡ ಮಂಟಪ, ಅಂತರಾಳ ಮತ್ತು ಗರ್ಭಗೃಹವುಳ್ಳ ಈ ದೇವಾಲಯ ಉತ್ತರಕ್ಕೆ ಮುಖಮಾಡಿ ನಿಂತಿದೆ. ಮುಖಮಂಟಪವು ಚಚ್ಚೌಕಾಕಾರದಲ್ಲಿ ನಿರ್ಮಾಣಗೊಂಡಿದ್ದು ಇಲ್ಲಿ ಯಾವುದೇ ವಿಶೇಷ ಕೆತ್ತನೆ ಕಾಣುವುದಿಲ್ಲ. ದೇವಾಲಯದೊಳಗಿನ ಮಂಟಪವೂ ನಾಲ್ಕು ಕಂಭಗಳನ್ನು ಹೊಂದಿದ್ದು ಗರ್ಭಗೃಹದ ಮುಂಭಾಗದಲ್ಲಿ ಎಡಗಡೆಗೆ ಮಹಿಷಾಸುರ ಮರ್ಧಿನಿಯ ಶಿಲಾಫಲಕ, ಇನ್ನೊಂದು ಮಗ್ಗಲಲ್ಲಿ ಗಣೇಶ ವಿಗ್ರಹವಿದೆ. ಗರ್ಭಗೃಹ ದ್ವಾರದ ಮೇಲ್ಭಾಗದಲ್ಲಿ ಗರುಡ, ಅದರ ಮೇಲೆ



ತಾರಬಸಪ್ಪ ದೇವಾಲಯ



ತಾರಬಸಪ್ಪ ದೇವಾಲಯ ತಲವಿನ್ಯಾಸ

ನಟರಾಜನ ಶಿಲ್ಪವಿದೆ. ಮಂಟಪದಲ್ಲಿ ಗಾಳಿ ಬೆಳಕು ಬರಲೆಂದು ಜಾಲಂಧ್ರಕಿಗಳನ್ನು ಸಂಯೋಜಿಸಲಾಗಿದೆ. ಗರ್ಭಗೃಹಕ್ಕೆ ಪ್ರದಕ್ಷಿಣಾ ಪಥವಿಲ್ಲದಿರುವುದರಿಂದ ಇದೊಂದು 'ನಿರಂಧಾರ' ದೇವಾಲಯವಾಗಿದೆ. ಮೂಲ ಪ್ರಾಸಾದದ ಅಧಿಷ್ಠಾನದ ಮಡಿಕೆಗಳಲ್ಲಿ ದಾಕ್ಷಿಣಾತ್ಯ ಕುಮುದ ಮತ್ತು ಮುಂಚಾಚಿಗೆ ಔತ್ತರೇಯ ತುಲಾಪೀಠದ ಬಳಕೆ ಕಂಡು ಬರುತ್ತದೆ. ದೇವಾಲಯದ ಮೇಲೆ ರೇಖಾನಾಗರ ಶೈಲಿಯ ಶಿಖರ ವಿನ್ಯಾಸವಿದೆ. ಅದರ ಮುಂಭಾಗದಲ್ಲಿ ನಟರಾಜನ ಶಿಲ್ಪವಿದೆ. ಇದು ಎಂಟನೆಯ ಶತಮಾನದ ಕಟ್ಟಡವೆಂದು ಸಂಶೋಧಕರು ತಿಳಿಸುತ್ತಾರೆ.

**ವಾಸ್ತು ಲಕ್ಷಣಗಳು :**

ತಾರಬಸಪ್ಪ ದೇವಾಲಯದ ಪ್ರವೇಶದ್ವಾರದಲ್ಲಿ ನಾಲ್ಕು ಕಂಬಗಳ ಮೊಗಶಾಲೆಯಿದೆ. (10' 8" x 12' 6") ಈ ದೇವಾಲಯವನ್ನು ನಾವು ಸೋಪಾನಗಳನ್ನೇರಿ ಪ್ರವೇಶಿಸಬೇಕು. ಐಹೊಳೆಯ ದೇವಾಲಯಗಳಲ್ಲಿ ಇಲ್ಲಿ ಹೊಸತೊಂದು ರೀತಿಯ ತಲವಿನ್ಯಾಸದ ಪ್ರಯೋಗವಾಗಿದೆ. "ಈ ದೇವಾಲಯದಲ್ಲಿ ಗರ್ಭಗೃಹ, ಸಭಾಮಂಟಪ, ಮತ್ತು ಮುಖಮಂಟಪಗಳಿವೆ. ಸಭಾಮಂಟಪದ ಮಧ್ಯದಲ್ಲಿಯ ನಾಲ್ಕು ಕಂಬಗಳು ಈ ಸಭಾಮಂಟಪವನ್ನು ಹಜಾರ ಮತ್ತು ಇಕ್ಕೆಲಗಳಾಗಿ ವಿಭಜಿಸುತ್ತವೆ. ಹಜಾರದ ಮೇಲ್ಗಂಡು ಚಪ್ಪಟೆಯಾಗಿದ್ದರೆ ಇಕ್ಕೆಲಗಳ ಮಾಳಿಗೆ ಇಳಿಜಾರಾಗಿದೆ. ಹೀಗೆ ಸಭಾಮಂಟಪವನ್ನು ಹಜಾರ ಮತ್ತು ಇಕ್ಕೆಲಗಳಾಗಿ ವಿಭಾಗಿಸಿ ಇಕ್ಕೆಲಗಳಿಗೆ ಇಳಿಜಾರಾದ ಮಾಳಿಗೆಯನ್ನು ಹೊದಿಸಿರುವ ಕ್ರಮವು ಚಾಲುಕ್ಯ ವಾಸ್ತುಶೈಲಿಯ ಪ್ರಮುಖ ಲಕ್ಷಣಗಳಲ್ಲೊಂದಾಗಿದೆ. ಈ ರೀತಿಯ ತಲವಿನ್ಯಾಸಕ್ಕೆ ಐಹೊಳೆಯಲ್ಲಿಯ ಹುಚ್ಚಪ್ಪಯ್ಯ ಗುಡಿ, ಗಳಗನಾಥ, ಸೂರ್ಯದೇವಾಲಯ ಮತ್ತು ಮಲ್ಲಿಕಾರ್ಜುನ ದೇವಾಲಯಗಳು ಉದಾಹರಣೆಗಳಾಗಿವೆ. (ಡಾ. ಎಸ್.ರಾಜಶೇಖರ, ಶ್ರೀವಲ್ಲಭ – ಪು. 314).

ಈ ದೇವಾಲಯದ ಸಭಾಮಂಟಪ 23' ಅಗಲ ಹಾಗೂ 23' 4" ಉದ್ದಳತೆಯಾಗಿದೆ. ಇಲ್ಲಿನ ನಾಲ್ಕು ಕಂಬಗಳು ಈ ಭಾಗವನ್ನು ವಿಭಜಿಸುತ್ತವೆ. ಇಡೀ ದೇವಾಲಯದ ತಲವಿನ್ಯಾಸವು ಲಾಡಖಾನ್ ದೇವಾಲಯಕ್ಕಿಂತಲೂ ಸುಧಾರಿತಗೊಂಡದ್ದಾಗಿದೆ, ಭಿನ್ನ ಶೈಲಿಯದಾಗಿದೆ.

ಶಿಖರ ವಿನ್ಯಾಸಕ್ರಮದಲ್ಲಿ ತಾರಾಬಸಪ್ಪ ದೇವಾಲಯದ ಮೇಲೆ ರೇಖಾನಾಗರ ವಿನ್ಯಾಸ ಪ್ರಯೋಗ ಮಾಡಿದ್ದು ಇಲ್ಲಿರುವ ಹೊಸ ಪ್ರಯೋಗ. ನಿರಂಧಾರ ಪದ್ಧತಿಯಲ್ಲಿ ಸಭಾಮಂಟಪಕ್ಕೆ ಹೊಂದಿಕೊಂಡಿರುವ ಹಾಗೆ ಗರ್ಭಗೃಹದ ನಿರ್ಮಾಣ ಮಾಡಿದ್ದು ಸಹ ನೂತನ ಪ್ರಕಾರವೆಂದೇ ಹೇಳಬಹುದು. ಗರ್ಭಗೃಹಕ್ಕೆ 3 ಅಡಿ ಅಗಲದ ದ್ವಾರಬಾಗಿಲನ್ನು ಸಂಯೋಜಿಸಿದೆ. ದ್ವಾರಬಾಗಿಲ ಮೇಲೆ ಗರುಡನ ಮನುಷ್ಯರೂಪದ ಕೆತ್ತನೆ ಇಕ್ಕೆಲಗಳ ಬಾಗಿಲು ಚೌಕಟ್ಟಿನಲ್ಲಿ ಸುಳಿವು ಹೊಳವುಗಳ ಚಿತ್ರಣವಿದೆ. ಗರ್ಭಗೃಹದ ಮೂರು ಹೊರಗೋಡೆಗಳಲ್ಲಿ ಎರಡೆರಡು ಕಂಭಗಳನ್ನು ಸಂಯೋಜಿಸಿದೆ. ಅದರ ಮೇಲಿನ ಶಿಖರ ವಿನ್ಯಾಸವು ರೇಖಾನಾಗರ ಮಾದರಿಯಲ್ಲಿ ಬಿಲ್ಲಿನಂತೆ ಬಾಗಿದ ಆಕಾರದಲ್ಲಿ ರೂಪುಗೊಂಡಿದೆ. ಸಭಾಮಂಟಪದಲ್ಲಿ ಬೆಳಕು, ಗಾಳಿ, ಬರಲೆಂಬ ಉದ್ದೇಶದಿಂದ ದೇವಾಲಯದ ಎರಡೂ ಭಾಗಗಳಲ್ಲಿಯ ಗೋಡೆಗಳಲ್ಲಿ ಚಿಕ್ಕದಾದ ಜಾಲಂಧ್ರದ ಕಿಟಕಿಗಳನ್ನು ಸಂಯೋಜಿಸಲಾಗಿದೆ. ತಾರಾಬಸಪ್ಪ ದೇವಾಲಯದ ವಿನ್ಯಾಸವು ಲಾಡಖಾನ್ ದೇವಾಲಯಕ್ಕಿಂತಲೂ ಉತ್ಕೃಷ್ಟ ಮಾದರಿಯದಾಗಿದೆ. ಗರ್ಭಗೃಹ ಭಾಗವನ್ನು ಇಡಿಯಾಗಿ ನೋಡಿದರೆ ಅದರ ಮೂಲ ವಿನ್ಯಾಸದ ಹೋಲಿಕೆಗಿಂತ ಭಿನ್ನವಾಗಿದೆ. ಇದು ತೀರ ಸರಳ ಶೈಲಿಯಲ್ಲಿಯ ಅಸಹಜ ಮತ್ತು ಅಮೂಲ್ಯ ದೇವಾಲಯವಾಗಿ ನಮಗೆ ಕಾಣುತ್ತದೆ.

**ಹುಚ್ಚಿಮಲ್ಲಿ ದೇವಾಲಯ:**

ಐಹೊಳೆಯ ಯಾತ್ರಿ ನಿವಾಸ (ಪ್ರವಾಸಿಮಂದಿರ)ದ ಹತ್ತಿರದಲ್ಲಿಯೇ ಗೋಚರಿಸುವ ಹುಚ್ಚಿಮಲ್ಲಿ ದೇವಾಲಯಕ್ಕೆ ಪ್ರಾಚ್ಯವಸ್ತು ಸರ್ವೇಕ್ಷಣ ಇಲಾಖೆಯ ದಾಖಲೆಯಲ್ಲಿ ಕಾರ್ತಿಕೇಯ ದೇವಾಲಯವೆಂದು ಕರೆಯಲಾಗಿದೆ. ರೇಖಾನಾಗರ ಶಿಖರಶೈಲಿಯ ಈ ವಾಸ್ತುಶಿಲ್ಪವು ಪಶ್ಚಿಮದತ್ತ ಮುಖಮಾಡಿ ಕಟ್ಟಲ್ಪಟ್ಟಿದೆ. 'ಸಾಂಧಾರ' ಪದ್ಧತಿಯ ಈ ದೇವಾಲಯದಲ್ಲಿ ಮುಖಮಂಟಪ, ಪ್ರದಕ್ಷಿಣಾಪಥ, ಗರ್ಭಗೃಹ ಭಾಗಗಳಿದ್ದು, ದೇವಾಲಯದ ಪೀಠ ಎತ್ತರದಲ್ಲಿದೆ. ಇಲ್ಲಿ ವಾಸ್ತುಲಕ್ಷಣಗಳಾದ ಪದ್ಮ, ಕಂಠ ಮತ್ತು ಕಪೋತ ಅಂಗಗಳಿವೆ. ಪ್ರದಕ್ಷಿಣಾ ಪಥವಿರುವ ಈ ವಾಸ್ತುಶಿಲ್ಪದ ಹಿಂಭಾಗದಲ್ಲಿ ಬೆಳಕು, ಗಾಳಿ ಬರಲೆಂದು ಜಾಲಂಧ್ರದ ಕಿಟಕಿಗಳಿವೆ. ಶಿಖರದ ಪಶ್ಚಿಮದಲ್ಲಿ ನಟರಾಜನ ಉಬ್ಬುಶಿಲ್ಪದ ಶಿಲ್ಪ ಪಟ್ಟಿಯಿದೆ. ಶಿಖರದಲ್ಲಿ ರೇಖಾನಾಗರ ಶೈಲಿಯ ಅಳವಡಿಕೆಯಿದ್ದು, ಅದರ ಮೇಲೆ ಅಮಲಶಿಲೆ ಮತ್ತು ಕಲಶವನ್ನು ಇತ್ತೀಚಿನ ದಿನಗಳಲ್ಲಿ ಪುನ: ಸ್ಥಾಪಿಸಲಾಗಿದೆ.



ಹುಚ್ಚಿಮಲ್ಲಿ ದೇವಾಲಯದ ತಲವಿನ್ಯಾಸ

ಈ ದೇವಾಲಯದಲ್ಲಿ ನವಿಲಿನ ಮೇಲೆ ಸವಾರಿ ಮಾಡುತ್ತಿರುವ ಕಾರ್ತೀಕೇಯನು ಬರ್ಚಿಯಿಂದ ದಮನ ಮಾಡುತ್ತಿರುವ ಭಂಗಿಯ ವಿಗ್ರಹವಿದೆ. ಈ ಕಾರ್ತೀಕೇಯನ ವಿಗ್ರಹವು ತುಂಬಾ ಆಕರ್ಷಕವಾಗಿದೆ. ದೇವಾಲಯದ ಪಶ್ಚಿಮ ಗೋಡೆಯಲ್ಲಿ ವಿಜಯಾದಿತ್ಯನ ಕಾಲದ ಶಾಸನವೂ "ಶ್ರೀಕೃವುಜ್ಜ" ಶಿಲ್ಪಿಯ ಹೆಸರೂ ಸಹ ಕೆತ್ತಲ್ಪಟ್ಟಿದೆ. ಗರ್ಭಗೃಹದ ಬಾಗಿಲ ಚೌಕಟ್ಟಿನ ಮೇಲೆ ಸರ್ಪವನ್ನು ತೂರಿದ ಗರುಡಸ್ವಾಮಿಯನ್ನು ಕೆತ್ತಲಾಗಿದೆ. ಮುಖಮಂಟಪದ ಮೇಲ್ಭಾವಣಿಯತ್ತ ದೃಷ್ಟಿ ಹರಿಸಿದಲ್ಲಿ ಕಮಲಗಳ ಚಿತ್ತಾರ, ಕುಬ್ಜಗಣಗಳೂ, ಶಿವಪಾರ್ವತಿ ಐರಾವತವನ್ನೇರಿದ ಇಂದ್ರ, ಹಂಸವನ್ನೇರಿದ ಬ್ರಹ್ಮ, ಗರುಡಾರೂಢ ವಿಷ್ಣು ವಿಗ್ರಹಗಳು ಸುಂದರವಾಗಿ ಕೆತ್ತಲ್ಪಟ್ಟಿವೆ. ಗರ್ಭಗೃಹದ ಸುತ್ತಲೂ ಪ್ರದಕ್ಷಿಣಾಪಥವಿದೆ. ಮುಖಮಂಟಪದಲ್ಲಿ ಕಕ್ಷಾಸನಗಳಿವೆ. ಇಲ್ಲಿನ ಗೂಢಮಂಟಪದ ಕಂಭಗಳು ಚೌಕವಿದ್ದು, ಮೇಲ್ಭಾಗದಲ್ಲಿ ಅರ್ಧ ವೃತ್ತಗಳನ್ನು ಎದುರು ಬದುರಾಗುವಂತೆ ಮೂಲೆಯಲ್ಲಿ ಪಲ್ಲವಗಳನ್ನು ಬಾಚಿದಂತೆ ಸಂಯೋಜಿಸಲಾಗಿದೆ. ಗೂಢಮಂಟಪದ ಛತ್ತುಗಳು ಇಳಿಜಾರಾಗಿದ್ದು ತುಂಬಾ ಸುಂದರವಾಗಿ ಈ ವಾಸ್ತುಶಿಲ್ಪ ನಿರ್ಮಾಣಗೊಂಡಿದೆ. ಈ ದೇವಾಲಯದ ಎದುರಿನಲ್ಲಿಯೇ ಒಂದು ಪುಷ್ಕರಣಿಯನ್ನು ನಿರ್ಮಿಸಲಾಗಿದೆ. ಈ ದೇವಾಲಯಕ್ಕೆ 'ಹುಚ್ಚಿಮಲ್ಲಿ' ಎಂಬ ಹೆಸರು ವಾಡಿಕೆಯಲ್ಲಿ ಮಾತ್ರ ಬಂದಿದ್ದು, ಇದು ಕಾರ್ತಿಕೇಯ



ಕಾರ್ತೀಕೇಯ ವಿಗ್ರಹ

ದೇವಾಲಯವೆಂಬುದೇ ಸೂಕ್ತ, ರೇಖಾನಾಗರ ಶಿಖರ ಶೈಲಿಯ ದೇವಾಲಯಕ್ಕೆ ಇದು ಉದಾಹರಣೆಯಾಗಿದೆ. ಈ ದೇವಾಲಯದ ಪಕ್ಕದಲ್ಲಿಯೇ ಏಕ ಬೇರಾಲಯದ ವಾಸ್ತುಶಿಲ್ಪವಿದೆ.

**ಹುಚ್ಚಿಮಲ್ಲಿ ದೇವಾಲಯದ ವಾಸ್ತು ವಿಶೇಷಗಳು :**

ಈ ದೇವಾಲಯದ ವಿನ್ಯಾಸದಲ್ಲಿ ಅಂತರಾಳವನ್ನು ವಿಶೇಷವಾಗಿ ಪ್ರಯೋಗಿಸಿದ್ದನ್ನು ಕಾಣುತ್ತೇವೆ. ಇಲ್ಲಿರುವ ತಲವಿನ್ಯಾಸದಲ್ಲಿ ಮುಖಮಂಟಪ, ಸಭಾಮಂಟಪ, ಅಂತರಾಳ ಹಾಗೂ ಗರ್ಭಗೃಹ ಮುಖ್ಯ ಭಾಗಗಳಾಗಿದ್ದು ಇಲ್ಲಿ ಪ್ರದಕ್ಷಿಣಾಪಥದ ಅಳವಡಿಕೆಯೂ ಸೇರಿದೆ. ದೇವಾಲಯ ಅಡಿಪಾಯ 7 ಅಡಿ ಎತ್ತರದಲ್ಲಿದ್ದು ಮತ್ತೆ ಎರಡು ಅಡಿ ಎತ್ತರದಲ್ಲಿ ದೇವಾಲಯದ ಕಟ್ಟಡ ಎದ್ದು ನಿಂತಿದೆ. ಭೂತಲದಿಂದ ಎಂಟು ಮೆಟ್ಟಿಲುಗಳನ್ನೇರಿ ಮುಖಮಂಟಪದ ಜಗುಲಿಯನ್ನು ಪ್ರವೇಶಿಸಬೇಕು. ನಾಲ್ಕು ಸಾದಾ ರೀತಿಯ ಕಂಬಗಳ ಮೇಲೆ ನಿಂತಿರುವ ಸಪಾಟಾದ ಛತ್ತು ಹೊಂದಿದ ಈ ಮೊಗಸಾಲೆಯು ದೇವಾಲಯಕ್ಕೆ ಒಂದು ರೀತಿಯ ಗಾಂಭೀರ್ಯ ತಂದಿದೆ. ಇಲ್ಲಿ ಕಾಣುವ ಕಕ್ಷಾಸನಗಳು ಎಡಬಲಭಾಗದಲ್ಲಿ ಸಂಯೋಜನೆಗೊಂಡಿವೆ. ಈ ಮುಖಮಂಟಪವು 9' 10" ಅಗಲ 13' ಉದ್ದಳತೆಯದಾಗಿದ್ದು ಇಲ್ಲಿಯೇ ಎರಡು ಶಾಸನಗಳು ನಮಗೆ ಕಾಣಸಿಗುತ್ತವೆ.



ಹುಚ್ಚಿಮಲ್ಲಿ ದೇವಾಲಯ

ದೇವಾಲಯದ ಮುಖ್ಯ ಸಭಾಮಂಟಪಕ್ಕೆ 3' 2" ಅಳತೆಯ ದ್ವಾರವಿದ್ದು ಇಡೀ ಸಭಾಮಂಟಪವು ಪಾರ್ಶ್ವ ಗೋಡೆಗಳ ಆಧಾರದಲ್ಲಿ ಎದ್ದು ನಿಂತಿದೆ. ಇದರಲ್ಲಿರುವ ನಾಲ್ಕು ಕಂಭಗಳು ಆಸರೆ ನೀಡಿವೆ. ಈ ಸಭಾಮಂಟಪವು ಇಲ್ಲಿ ರೂಪಿಸಲ್ಪಟ್ಟ ಮಂಟಪದ ಪೂರ್ವ ಭಾಗದಲ್ಲಿದ್ದ ಎರಡು ಕಂಭಗಳಿಗೆ ಜಾಲಂಧ್ರಗಳನ್ನು ಆ ನಂತರ ಜೋಡಿಸಿ ಅಂತರಾಳವನ್ನು ಕಲ್ಪಿಸಲಾಗಿದೆ. ಪ್ರಾಚೀನ ದೇವಾಲಯಗಳಲ್ಲಿ ಈ ಅಂತರಾಳದ ಪ್ರಯೋಗ ಪ್ರಥಮ ಬಾರಿಗೆ ಅಸ್ತಿತ್ವದಲ್ಲಿ ಬಂದುದು ಇಲ್ಲಿಯೇ ಎಂದು ತೋರುವುದು. (ಎ.ಎಂ.ಅಣ್ಣಿಗೇರಿ, ಐಹೊಳೆ ಸಂಸ್ಕೃತಿ ಮತ್ತು ಕಲೆ ಪು. 60).

ಹುಚ್ಚಿಮಲ್ಲಿ ದೇವಾಲಯದ ಗರ್ಭಗೃಹವು ಚಚ್ಚೌಕಾಕಾರದಲ್ಲಿದ್ದು ಅದು 8'6" ಅಗಲ 4'6" ಉದ್ದಳತೆಯಲ್ಲಿ ರೂಪುಗೊಂಡಿದ್ದು, ಇದು ಚೈತ್ಯಗಳನ್ನು ಹೊಂದಿದೆ. ದೇವಾಲಯದಲ್ಲಿ ಪ್ರಮುಖ ಭಾಗವಾಗಿರುವ ಈ ಗರ್ಭಗೃಹದ ಸುತ್ತಲೂ ಪ್ರದಕ್ಷಿಣಾಪಥದ ಸಂಯೋಜನೆಯೂ ಇರುವುದರಿಂದ ಇದೊಂದು 'ಸಾಂಧಾರ ಪದ್ಧತಿಯಲ್ಲಿನ ದೇವಾಲಯವಾಗಿದೆ. ಒಳಗೆ ಗಾಳಿ, ಬೆಳಕು ಬರಲೆಂಬ ಉದ್ದೇಶದಿಂದ ದೇವಾಲಯದ ದಕ್ಷಿಣ ಹಾಗೂ ಉತ್ತರ ಭಾಗದ ಗೋಡೆಗಳಲ್ಲಿ ಒಂದೊಂದು ಹಾಗೂ ಪೂರ್ವಕ್ಕಿರುವ ಹಿಂಭಾಗದ ಗೋಡೆಯಲ್ಲಿ ಎರಡು ಕಿಟಕಿಗಳನ್ನು ಜೋಡಿಸಲಾಗಿದೆ. ದೇವಾಲಯದ

ಮೇಲ್ಚಾವಣಿಯು ಸುತ್ತಲೂ ಕೂಡುಗಳನ್ನು ಹೊಂದಿದ್ದು ಇಳಿಜಾರಾಗಿ ಮಳೆನೀರು ಹೊರಹೋಗುವಂತೆ ರೂಪಿಸಲ್ಪಟ್ಟಿದೆ. ಗರ್ಭಗೃಹದ ಮೇಲೆ ರೇಖಾನಾಗರ ಶೈಲಿಯ ಶಿಖರವಿನ್ಯಾಸದಲ್ಲಿ ಅಮಲಕವನ್ನು ಸಂಯೋಜಿಸಲಾಗಿದೆ. ಇಲ್ಲಿಯ ಪಟ್ಟಿಕೆಯಲ್ಲಿ ತಾಂಡವನಾಟ್ಯ ಮಾಡುತ್ತಿರುವ ಶಿವನ ವಿಗ್ರಹ ಮನಸೆಳೆಯುತ್ತಿದೆ. ಇಲ್ಲಿಯ ಕೆಲವು ಶಿಲ್ಪಗಳು ನಮ್ಮ ಮನಸ್ಸನ್ನು ಹೆಚ್ಚು ಆಕರ್ಷಿಸುತ್ತವೆ.

**ಹುಚ್ಚಪ್ಪಯ್ಯ ದೇವಾಲಯ :**

ಪೂರ್ವಾಭಿಮುಖವಾಗಿ ನಿರ್ಮಾಣ-ಗೊಂಡಿರುವ ಈ ದೇವಾಲಯ ಐಹೊಳೆಯ ದಕ್ಷಿಣ ದಿಶೆಯಲ್ಲಿ ಹರಿಯುವ ಸಣ್ಣ ಹಳ್ಳದ ಬದಿಯಲ್ಲಿರುವ ದಿಬ್ಬದ ಮೇಲಿರುವ ಪ್ರದೇಶದಲ್ಲಿದೆ. ಇದರ ವಿನ್ಯಾಸವು ತಾರಾಬಸಪ್ಪ ದೇವಾಲಯದಂತಿದೆ ಮತ್ತು ಇದರ ಸಮಕಾಲೀನದ್ದೂ ಆಗಿದೆ.



ಹುಚ್ಚಪ್ಪಯ್ಯ ದೇವಾಲಯದ ಊರ್ಧ್ವ ನೋಟ

ಈ ದೇವಾಲಯದಲ್ಲಿ ಮುಖ ಮಂಟಪ, ಸಭಾಮಂಟಪ ಹಾಗೂ ಅದಕ್ಕೆ ಹೊಂದಿಕೊಂಡ ಗರ್ಭಗೃಹ ಈ ರೀತಿ ಮೂರು ವಿನ್ಯಾಸಗಳಿದ್ದು ಇದು ಅಲಂಕಾರಿಕ ಪಟ್ಟಿಕೆಗಳುಳ್ಳ ಅಧಿಷ್ಠಾನದ ಮೇಲೆ ನಿಂತಿದೆ. ಇದರ ಬಾಹ್ಯ ಭಿತ್ತಿಗಳು ಸರಳ ಹಾಗೂ ನಿರಾಡಂಬರವಾಗಿವೆ. ಈ ದೇವಾಲಯದಲ್ಲಿ ಭಿತ್ತಿ ಪ್ರತಿಮೆಗಳಿರುವುದಿಲ್ಲ. ಸುಳುವು ಹೋಳವುಗಳಿರುವುದಿಲ್ಲ.



ಹುಚ್ಚಪ್ಪಯ್ಯ ದೇವಾಲಯದ ತಲವಿನ್ಯಾಸ

ಮುಖ ಮಂಟಪವನ್ನು ಪ್ರವೇಶಿಸುತ್ತಿದ್ದಂತೆ ಎಡಬಲದಲ್ಲಿ ಎರಡು ಕಂಭಗಳಿವೆ. ಮುಂದುವರೆದಂತೆ ಗೋಡೆಗಳಿಗೆ ಆಧಾರಿತವಾದ ಎರಡೂ ಬದಿಯಲ್ಲಿ ಎರಡು ಅರ್ಧ ಕಂಭಗಳಿವೆ. ಅದರಲ್ಲಿ ಬಲಬದಿಯ ಕಂಭದ ಪಟ್ಟಿಕೆಯಲ್ಲಿ ಒಂದು ಕನ್ನಡ ಶಾಸನವು ಕೆತ್ತಲ್ಪಟ್ಟಿದೆ. ಇವುಗಳಿಗೆ ಹೊಂದಿಕೊಂಡು ಶಂಖನಿಧಿ, ಪದ್ಮನಿಧಿ ಮೂರ್ತಿಗಳಿವೆ. ಅವು "ಪರ್ಯಾಂಕಾಸನದಲ್ಲಿವೆ. ಇಲ್ಲಿರುವ ಮಂಟಪ 7'10" ಅಗಲ 8'3" ಉದ್ದಳತೆಯದಾಗಿದ್ದು ಎರಡೂ ಬದಿಯಲ್ಲಿರುವ ಕಕ್ಷಾಸನದ ಹಿಂಭಾಗದಲ್ಲಿ ಸಿಂಹ-ಆನೆಗಳ ಚಿತ್ರಗಳಿವೆ. ಮುಖ ಮಂಟಪದ ಆಚ್ಛಾದನೆಯ ಅಂಚಿನಲ್ಲಿ ಮಳೆ ನೀರನ್ನು ಹೊರಹಾಕಲು ಮುಂಚಾಚುವಿನಲ್ಲಿ ಕಪೋತ ವಾಸ್ತುಅಂಗವನ್ನು ಜೋಡಿಸಲಾಗಿದೆ.

ಮುಖಮಂಟಪ ಹಾಗೂ ಸಭಾಮಂಟಪದ ಮೇಲ್ಭತ್ತು ಸಪಾಟಾಗಿದ್ದು ಗರ್ಭಗೃಹದ ಮೇಲೆ ಮಾತ್ರ ಬಿಲ್ಲಿನಾಕಾರದ ಶಿಖರವನ್ನು ಔತ್ತರೇಯ ಶೈಲಿಯಲ್ಲಿ ಅಳವಡಿಸಲಾಗಿದೆ. ಈ ಶಿಖರದ ಪ್ರತಿಯೊಂದು ದಿಕ್ಕಿನ ಮೇಲೇರುತ್ತಿರುವ ಶಿಖರ ಪಟ್ಟಿಕೆಗಳಲ್ಲಿ ಒಂದೇ ರೇಖೆಯಲ್ಲಿ ಚೈತ್ಯ ಗೂಡುಗಳನ್ನು ನಿರ್ಮಿಸಲಾಗಿದೆ. ಈ ಮೇಲೇರುತ್ತಿರುವ ಶಿಖರ ಪಟ್ಟಿಕೆಗಳಲ್ಲಿ ಮೂಲೆಯಲ್ಲಿ ಒಂದನ್ನು ಬಿಟ್ಟು ಮತ್ತೊಂದರ ಮೇಲೆ ಕೂಡುಗಳಿದ್ದು ಅಲ್ಲಿ ಸಹ ಚೈತ್ಯಗಳಿದ್ದು 'ಅಮಲಕ' ಶಿಲಾಬಂಧವನ್ನಿರಸಲಾಗಿದೆ. ಈ ಗರ್ಭಗುಡಿಯ ಶಿಖರದ ಮೇಲಿನ

ಅಮಲಕವು ಈಗ ಕಾಣಸಿಗುವುದಿಲ್ಲ. ಆದರೂ ಕೂಡ ಶಿಖರವು ತನ್ನ ವಿಶಿಷ್ಟವಾದ ಆಕರ್ಷಕ ಹೊಳಪುಗಳಿಂದ ತನ್ನ ವಾಸ್ತು ವೈಭವವನ್ನು ಇನ್ನೂ ಉಳಿಸಿಕೊಂಡಿರುವುದನ್ನು ಕಾಣಬಹುದು. ಈ ದೇವಾಲಯದಲ್ಲಿ ಕಾಣಬರುವ ಬಾಗಿಲುವಾಡ, ಸಭಾಮಂಟಪ, ಗರ್ಭಗೃಹಗಳಲ್ಲಿಯ ವಾಸ್ತು ವಿಶೇಷಗಳಂತೂ ನಮಗೆ ಹಲವಾರು ವಿಷಯ ಸಾಮಗ್ರಿಯನ್ನೊದಗಿಸುತ್ತವೆ.

**ವಾಸ್ತು ವಿಶೇಷಗಳು :**

ಮುಖಮಂಟಪದಲ್ಲಿ ಸಭಾ ಮಂಟಪಕ್ಕೆ ಪ್ರವೇಶಿಸುವ ಬಾಗಿಲವಾಡವು ಬಾಗಿಲು ಪಟ್ಟಿಕೆಗಳಿಂದ ಲಂಬಕದಲ್ಲಿ ಮೇಲೇರುತ್ತಿದ್ದು, ಬಾಗಿಲು ತೊಲೆಯಲ್ಲಿ ಜೋಡಣೆಯಿದೆ. ಈ ತಲೆಪಟ್ಟಿಯ ಮಧ್ಯದಲ್ಲಿ ಗರುಡನ ಪ್ರತಿಮೆಯಿದ್ದು ಆತನ ಎರಡೂ ಕೈಗಳಲ್ಲಿ ನಾಗಗಳನ್ನು ಕೆತ್ತಲಾಗಿದೆ. ಈ ನಾಗಗಳು ಸಿಂಬೆಯಾಕಾರಗಳನ್ನು ಹೊಂದಿದ್ದು ದ್ವಾರಪಟ್ಟಿಕೆಗಳಗುಂಟ ಇಳಿಯುತ್ತಾ ಹೋಗಿ ಅಲಂಕರಣವನ್ನು ನೀಡಿವೆ. ಬಾಗಿಲು ಚೌಕಟ್ಟು ಸುಳಿವು ಹಾಗೂ ಪುಷ್ಪಾಲಂಕಾರಗಳಿಂದ ಕೂಡಿದೆ. ಎಡ ಹಾಗೂ ಬಲಬದಿಯಲ್ಲಿಯ ಅರ್ಧಕಂಭಗಳು ಚೌಕಾದ ಪೀಠವನ್ನು ಹೊಂದಿವೆ. ಈ ಬಾಗಿಲುವಾಡದ ಚೌಕಟ್ಟಿನ ಶಾಖೆಗಳು ಮೇಲೇರುತ್ತ ಹೋಗಿ ಅಲಂಕೃತ ಕಮಲ ಹಾಗೂ ಇನ್ನಿತರ ಹೂ ಬಳ್ಳಿಗಳ ಜೋಡಣೆಯಿಂದ ಪರಿಪೂರ್ಣಗೊಂಡಿದೆ. ಈ ಅರ್ಧಕಂಭ ಹಾಗೂ ದ್ವಾರಬಂಧವು ತಮ್ಮ ಲಲಾಟ ಸ್ಥಾನದಲ್ಲಿ (ಮೇಲ್ಭಾಗ) ಚೈತ್ಯಗೂಡುಗಳನ್ನು ಹೊಂದಿವೆ. ಈ ಚೈತ್ಯ ಅಂಗಗಳ ಎರಡೂ ಬದಿಗೆ ಹೂವಿನ ಹಾರಗಳನ್ನು ಅರ್ಪಿಸುವ ಭಾವದಲ್ಲಿ ಯಕ್ಷ ಯಕ್ಷಿಣಿಯರ ಚಿತ್ರಗಳನ್ನು ಕೆತ್ತಲಾಗಿದೆ.



ಹುಚ್ಚಪ್ಪಯ್ಯ ದೇವಾಲಯ

ಸಭಾಮಂಟಪವು 6 ಕಂಭಗಳನ್ನು ಹಾಗೂ ಎರಡು ಅರ್ಧಕಂಭಗಳಲ್ಲಿ ರೂಪಿತಗೊಂಡಿದೆ. ಇವು ಮುಖ್ಯ ಆಲಯವನ್ನು ವಿಭಜಿಸಿ ಗರ್ಭಗೃಹ ಹಾಗೂ ಎರಡು ಸಭಾಭವನವನ್ನು ಪ್ರತ್ಯೇಕಿಸಿವೆ. ಈ ಮಂಟಪವು 24'3" ಅಗಲ 2'4" ಉದ್ದಳತೆಯದ್ದಾಗಿದೆ. ಇಲ್ಲಿ ಅತಿ ಹೆಚ್ಚಿನ ಶೈವ ವಿಗ್ರಹಗಳನ್ನು ನಾವು ಕಾಣಬಹುದಾಗಿದೆ. ಇವು ನಂತರದ ಜೋಡಣೆಗಳೆಂಬುದಾಗಿ ತಿಳಿಯಬಹುದು. ಮಂಟಪದಲ್ಲಿಯ ಕಂಬಗಳು ತೀರ ಸಾದಾರೀತಿಯವಾಗಿದ್ದು ಚಚ್ಚೌಕಾಕಾರದ್ದಾಗಿವೆ.

ಈ ದೇವಾಲಯದ ಗರ್ಭಗೃಹವು ಚಚ್ಚೌಕಾಕಾರದ್ದಾಗಿಲ್ಲ. ಅದು 8'2" ಅಗಲ 7'7" ಉದ್ದಳತೆಯದಾಗಿದೆ. ಗರ್ಭಗೃಹದಲ್ಲಿ ಲಿಂಗದ ಪ್ರತಿಷ್ಠಾಪನೆಯಾಗಿದೆ. ಅದರ ಹೊರಗೋಡೆಗಳ ಮೂರು ದಿಕ್ಕಿನಲ್ಲಿ ಮೂರು ಗೂಡುಗಳಿದ್ದು ಅವುಗಳಲ್ಲಿಯೂ ಎರಡರಲ್ಲಿ ವಿಗ್ರಹಗಳನ್ನು ಸಂಯೋಜಿಸಲಾಗಿದೆ. ಪಶ್ಚಿಮ ಗೋಡೆಯಲ್ಲಿ ನರಸಿಂಹ, ಉತ್ತರಕ್ಕೆ ಗಜಾಸುರವಧಾ ಮೂರ್ತಿಯನ್ನು ಕೆತ್ತಿಡಲಾಗಿದೆ. ದಕ್ಷಿಣ ಭಾಗದ ಗೂಡು ವಿಗ್ರಹರಹಿತವಾಗಿದೆ.

ಹುಚ್ಚಪ್ಪಯ್ಯ ದೇವಾಲಯದಲ್ಲಿರುವ ಕಿನ್ನರ ದಂಪತಿಗಳು, ಮಿಥುನ ಶಿಲ್ಪಗಳು ಮುಖ ಮಂಟಪದ ಮೇಲ್ಛತ್ತಿನಲ್ಲಿ ಭರತನಾಟ್ಯ ಲೋಲ ನಟರಾಜನ ವಿಗ್ರಹ, ಪಕ್ಕದಲ್ಲಿ ಪಾರ್ವತಿಯ ತ್ರಿಭಂಗಿ ಶಿಲ್ಪವಿದೆ. ಮಂಟಪ ದ್ವಾರದ ಚೌಕಟ್ಟಿನ ಬಲಬದಿಯ ಶೈವ ದ್ವಾರಪಾಲಕರಿಗೆ ಮೂರು ಕಣ್ಣುಗಳುಂಟು. ನಿಂತುಕೊಂಡ ಶಿಲ್ಪದ ಭಂಗಿ ಆಕರ್ಷಣೀಯವಾಗಿದೆ. ಈ ದೇವಾಲಯದ ಸಭಾಭವನದ ಛತ್ತಿನಲ್ಲಿರುವ ಸುಂದರ ಶಿಲ್ಪಗಳು ಗರ್ಭಗೃಹದ ಎಡಬಲಭಾಗದಲ್ಲಿ ಕಾಣುವ ಗಣೇಶ ಹಾಗೂ ಮಹಿಷ ಮರ್ದಿನಿಯ ಬೃಹತ್ ವಿಗ್ರಹಗಳು ಸುಂದರವಾಗಿವೆ. ಈ ದೇವಾಲಯವು ತಲವಿನ್ಯಾಸ ಪ್ರಯೋಗದಲ್ಲಿ ತಾರಾಬಸಪ್ಪ ಗುಡಿಗಿಂತ ನೂತನದ್ದಾಗಿದೆ.

**ಗಳಗನಾಥ ದೇವಾಲಯ :**

ಈ ದೇವಾಲಯಗಳ ಸಮೂಹವು ಇಡೀ ಐಹೊಳೆ ದೇವಾಲಯಗಳ ಕಟ್ಟುವಿಕೆಯ ಕಾಲಬಂಧದಲ್ಲಿ ಅತ್ಯಂತ ಇತ್ತೀಚಿನದಾಗಿದೆ. ಇದು ಐಹೊಳೆಯ ದಕ್ಷಿಣಕ್ಕೆ ಮಲಪ್ರಭೆಯ ದಡದಲ್ಲಿ ಸುಮಾರು ಒಂದು ಕಿ.ಮೀ ದೂರದಲ್ಲಿದೆ. ವಿವಿಧ ವಿನ್ಯಾಸದ ಮೂವತ್ತು ಸಣ್ಣ ದೊಡ್ಡ ದೇವಾಲಯಗಳಲ್ಲಿರುವ ಈ ದೇವಾಲಯ ಸಮೂಹದಲ್ಲಿದ್ದು ಅವುಗಳಲ್ಲಿ ಕೆಲವು ಶಿಥಿಲ ಸ್ಥಿತಿಯಲ್ಲಿವೆ. ಈ ದೇವಾಲಯ ವಿನ್ಯಾಸವೂ ಪೂರ್ವ ಪಶ್ಚಿಮ ಅಥವಾ ದಕ್ಷಿಣೋತ್ತರ ರೇಖೆಗಳಲ್ಲೇನೂ ಇಲ್ಲ. ಆದರೆ ಅವು ಸ್ಥಪತಿಗಳಿಗೆ ಆ ಕಾಲದಲ್ಲಿ ಸಿಕ್ಕ ಸ್ಥಳಾವಕಾಶವನ್ನನುಸರಿಸಿ ಅಲ್ಲೊಂದು ಇಲ್ಲೊಂದರಂತೆ ಕಟ್ಟಲಾಗಿದೆ. ಇಲ್ಲಿಯ ಮುಖ್ಯ ದೇವಾಲಯವು ಗಳಗನಾಥನಿಗೆ ಸಮರ್ಪಿಸಲ್ಪಟ್ಟಿದ್ದು ಶಿಖರವು ರೇಖಾನಾಗರದಲ್ಲಿದೆ.

ಗಳಗನಾಥ ದೇವಾಲಯವು ಪೂರ್ವಾಭಿಮುಖವಾಗಿ ನಿರ್ಮಾಣಗೊಂಡಿದ್ದು ಈ ದೇವಾಲಯ ವಿನ್ಯಾಸವು ಮುಖಮಂಟಪ, ಸಭಾಮಂಟಪ ಹಾಗೂ ಅದಕ್ಕೆ ಹೊಂದಿಕೊಂಡಂಥ ಗರ್ಭಗೃಹಗಳನ್ನು ಹೊಂದಿದ್ದು, ಇದು ಚಿಕ್ಕದಾದ ಅಧಿಷ್ಠಾನದ ಮೇಲೆ ನಿಂತಿದೆ. ಒಂದರ ಮೇಲೊಂದರಂತೆ ಇಡಲಾದ ಚೌಕಾದ ನಯುವಾದ ಕಲ್ಲುಗಳಲ್ಲಿ ಹೊಂದಿಸಲ್ಪಟ್ಟಿದೆ. ಶಿಖರದ ತುದಿಯು ಕಾಣಸಿಗದು. ಈ ದೇವಾಲಯುದ ಶಿಖರದತಳಮುಂಭಾಗದ ಪಟ್ಟಿಕೆಯುಲ್ಲಿ ಗರುಡಾರೂಢ ವಿಷ್ಣುವಿನ ಪ್ರತಿಮೆಯಿದ್ದು ಅದರಲ್ಲಿ ಯಕ್ಷ ಯಕ್ಷಿಣಿಯರ ಅಲಂಕಾರಿಕ ವಿಗ್ರಹಗಳು ಎರಡೂ ಬದಿಯ ತಳಭಾಗದಲ್ಲಿವೆ. ಈ ವಾಸ್ತು ಅಂಗವು ಸಭಾಮಂಟಪದ ಮೇಲ್ಛಾವಣಿ ಹಾಗೂ ಶಿಖರದ ಪ್ರಾರಂಭಿಕ ಪಟ್ಟಿಕೆಯ ಸಂಧಿಯಲ್ಲಿ ಕೂಡಿಸಲಾಗಿದೆ.



ಗಳಗನಾಥ ದೇವಾಲಯದ ತಲವಿನ್ಯಾಸ

ದೇವಾಲಯವನ್ನು ಪ್ರವೇಶಿಸಬೇಕಾದರೆ ನಾಲ್ಕು ಮೆಟ್ಟಿಲುಗಳನ್ನೇರಿ (9'7" x 9'7" ಅಳತೆಯ) ಮುಖಮಂಟಪಕ್ಕೆ ಬರಬೇಕು. ಅಲ್ಲಿ ನಾಲ್ಕು ಕಂಬಗಳನ್ನು ಹೊಂದಿದ ಈ ಮುಖಮಂಟಪದ ಪ್ರವೇಶ ದ್ವಾರವು 2'5" ಅಗಲಳತೆಯದಾಗಿದ್ದು ಇದನ್ನು ಪ್ರವೇಶಿಸಿದಂತೆ ವಿಶಾಲವಾದ ಆಯತಾಕಾರದ 23.3" ಉದ್ದ 18' x 10'5" ಅಗಲವಿದೆ. ಇದರ ಛತ್ತು ಎಂಟು ಕಂಬಗಳಿಂದ ಆಧಾರಿತವಾಗಿದ್ದು ಈ ಕಂಬಗಳು ಎರಡು

ರೇಖೆಗಳಲ್ಲಿ ನಿರ್ಮಿತಗೊಂಡಿವೆ. ಸಭಾಮಂಟಪವು ಮತ್ತೊಂದು ಮಧ್ಯ ಮಂಟಪವನ್ನು ಹೊಂದಿದ್ದು ಅದರ ಎಡ ಹಾಗೂ ಬಲಬದಿಗೆ ಕಿರಿದಾದ ಅಂಕಣಗಳ ಪಟ್ಟಿಯಿದೆ. ಈ ಕಂಬಗಳು ಸರಳತೆಯಿಂದ ಕೂಡಿದ್ದು ಮೇಲೇರಿದಂತೆ ಸಾಮಾನ್ಯವಾದ ಅಲಂಕಾರಿಕ ಬೋದುಗಳಿಂದ ಕೂಡಿದೆ. ಅವು ಪರಿಚ್ಛೇದದಲ್ಲಿ ಚೌಕಾಕಾರವಾದದ್ದಾಗಿವೆ. ಈ ಸಭಾಂಗಣದ ಮಧ್ಯದಲ್ಲಿರುವ ನಾಲ್ಕು ಕಂಬಗಳು ತಳದಿಂದ ಸ್ವಲ್ಪ ಎತ್ತರವಾಗಿ ಚೌಕಾಕಾರದ ಕಟ್ಟೆಯ ಮೇಲೆ 11'2.5" ಅಗಲ 9'2.5" ಉದ್ದಳತೆಯ ಅಲ್ಪ ಎತ್ತರದಲ್ಲಿ ನಿಂತಿವೆ. ಈ ಕಂಬಗಳ ಮೇಲ್ಗಡೆ ಬೋದಿನಲ್ಲಿ ಅಲಂಕಾರದ ಕೆತ್ತನೆಯಿದೆ.

**ವಾಸ್ತು ವಿಶೇಷಗಳು :**

ಗಳಗನಾಥ ದೇವಾಲಯದಲ್ಲಿ ಸ್ಥಪತಿಗಳು ಇಲ್ಲೊಂದು ಹೊಸದಾದ ವಿನ್ಯಾಸಕ್ರಮ ಪ್ರಯೋಗಿಸಿದ್ದು ನಮಗೆ ಕಂಡು ಬರುತ್ತದೆ. ಗರ್ಭಗೃಹದ ಮುಂಗಡೆ ಪ್ರವೇಶದ್ವಾರದ ಮೇಲ್ಗಡೆ ಆಚ್ಛಾದಗೊಂಡ ಛತ್ತಿನಲ್ಲಿ ಸವ್ಯಾಸನದಲ್ಲಿ ಹಂಸಾರೂಢನಾದ ಬ್ರಹ್ಮನ ಮೂರ್ತಿಯನ್ನು ಅಳವಡಿಸಲಾಗಿದೆ. ಈ ವಾಸ್ತು ವಿನ್ಯಾಸದ ಅಳವಡಿಕೆಯು ಪ್ರಾರಂಭಿಕ ಅಂತರಾಳದಂತಿದ್ದು ಮುಂಬರುವ ದೇವಸ್ಥಾನಗಳಲ್ಲಿ ಸ್ವತಂತ್ರವಾಗಿ ಹಾಗೂ ವಿಸ್ತಾರವಾಗಿ ಮಾರ್ಪಡಿಸಲ್ಪಟ್ಟ ಅಂತರಾಳದ ಪ್ರಸ್ತಾವನೆಯಾಗಿದೆ. ಇದೇ ದೇವಸ್ಥಾನದಲ್ಲಿ ಅಂತರಾಳವನ್ನು ನಿರ್ಮಿಸುವ ಪ್ರಾರಂಭಿಕ ಪ್ರಯೋಗವಾಗಿದೆ. ಈ ಮುಖ್ಯ ಸಭಾಮಂಟಪದ ಎಡ ತುದಿಯ ಮೂಲೆಯ ಗೋಡೆಯಲ್ಲಿ ಸಪ್ತ ಮಾತೃಕೆಯ ಪಟ್ಟಿಕೆಯು ಅಲಂಕೃತ ಪಾರ್ಶ್ವವಾಗಿದೆ.



ಗಳಗನಾಥ ದೇವಾಲಯ

ಗರ್ಭಗೃಹದ ಪ್ರವೇಶ ದ್ವಾರವು 2'3" ಅಗಲಳತೆಯದಾಗಿದ್ದು ಭಕ್ತರ ಆರಾಧನಾ ಸ್ಥಳವಾಗಿದೆ. ಇಲ್ಲಿಂದಲೇ ಪೂಜೆ–ಪುನಸ್ಕಾರಗಳನ್ನು ನೆರವೇರಿಸಲು ಪ್ರವೇಶಿಸಬೇಕಾಗುತ್ತದೆ. ಈ ಗರ್ಭಗೃಹದ ಪ್ರವೇಶದ್ವಾರವು ಎರಡು ನಾಗಗಳನ್ನು ತೂರಿದ ಗುರುಡನಿಂದ ಶಿರೋಪಟ್ಟಿಕೆಯಲ್ಲಿ ಅಲಂಕೃತವಾಗಿದೆ. ದ್ವಾರದ ಇಕ್ಕೆಲಗಳಲ್ಲಿ ಗಂಗೆ ಹಾಗೂ ಯಮುನೆಯರ ವಿಗ್ರಹಗಳನ್ನು ತಳಭಾಗದಲ್ಲಿ ಜೋಡಿಸಲಾಗಿದೆ. ಈ ಶಿರೋಪಟ್ಟಿಕೆಗಳಲ್ಲಿ ಚಿಕ್ಕ ಚಿಕ್ಕ ಒಂಭತ್ತು ಶಿಖರಗಳನ್ನು ಮೂರು ಸಮಾಂತರ ಪಟ್ಟಿಕೆಗಳಲ್ಲಿ ಒಂದರ ಕೆಳಗೊಂದರಂತೆ ಸಂಯೋಜಿಸಲಾಗಿದೆ. ಮುಖ್ಯ ಗರ್ಭಗೃಹವು ಚೌರಸ ಆಕಾರವಾಗಿಲ್ಲ. ಆದರೆ ಅದು 7'2" ಅಗಲ 8'3" ಉದ್ದಳತೆಯದಾಗಿದೆ. ಅಲ್ಲದೇ ಒಳಗಿನ ಎರಡೂ ಮುಂಚಾಚಿದ ಪಟ್ಟಿಗಳನ್ನು ಜೋಡಿಸಲಾಗಿದೆ. ಇದೇ ವಾಸ್ತು ಅಂಗಗಳನ್ನು ಮುಂದಿನ ಎರಡು ಮೂಲೆಗಳಲ್ಲೂ ಕೂಡಾ ರಚಿಸಲಾಗಿದೆ. ಮಧ್ಯಭಾಗದಲ್ಲಿ ಮುಖ್ಯ ಅಧಿದೇವತೆ ಶಿವಲಿಂಗವಿದೆ. ಗರ್ಭಗುಡಿಯ ಹೊರಭಾಗದ ಮೂರೂ ಗೋಡೆಗಳಲ್ಲಿ ಒಂದೊಂದರಂತೆ 3'10" ಅಗಲಳತೆಯಲ್ಲಿರುವ ಮಾಡುಗಳನ್ನು ರೂಪಿಸಲಾಗಿದೆ. ಈ ಸುಂದರ ಮಾಡುಗಳು ದೇವಾಲಯದ ಹೊರಗೋಡೆಯ ಅಂದವನ್ನು ಹೆಚ್ಚಿಸಿವೆ.

ಗಳಗನಾಥ ದೇವಾಲಯದ ಸಭಾಮಂಟಪದ ವಿನ್ಯಾಸ ವೈಶಿಷ್ಟ್ಯವು ಆಯತಾಕಾರದಲ್ಲಿ ಇದ್ದುದೇನೋ ನಿಜ. ಅಂದರೆ ಇದು ಚೌರಸ ಆಕಾರದಲ್ಲಿಲ್ಲ. ಇದರ ಎಡ ಹಾಗೂ ಬಲ ಗೋಡೆಗಳ ವಿನ್ಯಾಸವು ಅಗಲಳತೆಯ ಗೋಡೆ ವಿನ್ಯಾಸಕ್ಕಿಂತ ಹೆಚ್ಚು ಉದ್ದವಾಗಿದೆ. ಈ ಪ್ರಕ್ರಿಯೆಯು ಈ ಪೂರ್ವದಲ್ಲಿ ರಚಿಸಲ್ಪಟ್ಟ ವಿನ್ಯಾಸಗಳಿಗಿಂತ ಸ್ವಲ್ಪ ಹೊಸತನ ಕಂಡಿದೆ. ಹಾಗೆ ನೋಡಿದಲ್ಲಿ ಈ ಗಳಗನಾಥ ದೇವಾಲಯಗಳ ಸಮೂಹದ ವಿನ್ಯಾಸವು ಈ ಮೊದಲಿನ ನಿರ್ಮಿತ ದೇವಾಲಯಗಳಿಗಿಂತ ಭಿನ್ನ ವಿನ್ಯಾಸಗಳದ್ದಾಗಿದ್ದು ವಿಶೇಷವಾದ ತದ ನಂತರದ ದೇವಾಲಯಗಳ ವಿನ್ಯಾಸಶೈಲಿಯಾಗಿ ಮುಂದುವರೆದಿದೆ.

**ಹುಚ್ಚಪ್ಪಯ್ಯ ಮಠ:**

ಈ ದೇವಾಲಯ ಸಮೂಹವು ಕೊಂತಿಗುಡಿ ಸಮೂಹದ ದಕ್ಷಿಣ ಭಾಗದಲ್ಲಿ ರಸ್ತೆಯ ಆಚೆಗೆ ಹಾಗೂ ದಕ್ಷಿಣಕೋಟೆಯ ಒಳಭಾಗದಲ್ಲಿ ನಿರ್ಮಿತವಾದ ಬಯಲು ಪ್ರದೇಶದಲ್ಲಿ ಕಾಣಸಿಗುತ್ತದೆ. ಇದೂ ಸಹ ಗಳಗನಾಥ ದೇವಾಲಯದ ವಿನ್ಯಾಸದ ಹಾಗೆಯೇ ಇದೆ. ಇಲ್ಲಿರುವ ವಿಶೇಷ ಪ್ರಯೋಗವೆನೆಂದರೆ ಈ ದೇವಾಲಯದಲ್ಲಿ ಮುಖಮಂಟಪವನ್ನು ಅಳವಡಿಸದೇ ಇರುವುದು ಇದು ವಿನ್ಯಾಸದಲ್ಲಿ ಭಿನ್ನತೆ ಹೊಂದಿದ್ದರೂ ಕೂಡಾ ಈ ಹುಚ್ಚಪ್ಪಯ್ಯ ಮಠ ದೇವಾಲಯ ಹೆಚ್ಚು ಕಡಿಮೆ ಗಳಗನಾಥ ದೇವಾಲಯ ಸಮೂಹದಂತೆಯೇ ಇದೆ. ಈ ದೇವಾಲಯದ ಸಾಮಾನ್ಯ ವಿನ್ಯಾಸದಲ್ಲಿ ಕಂಡಂತೆ ಆಯತಾಕಾರದ ಸಭಾಮಂಟಪ, ಅದರ ಹೊರಬದಿಯಲ್ಲಿ ಚಾಚಿದಂತಿರುವ ಗರ್ಭಗೃಹ, ಆ ಗರ್ಭಗೃಹದ ಮೇಲ್ಗಡೆ ಬಿಲ್ಲಿನಾಕಾರ ಹೊಂದಿದ ನಾಗರಶಿಖರ ಹೊಂದಿದೆ. ಈ ಸಭಾಮಂಟಪದ ಪ್ರವೇಶ ದ್ವಾರವು ಆರಾಧನಾ ದೇವತೆಯ ಸಂಕೇತವನ್ನು ಹೊಂದಿದ್ದು ಶೈವ ಸಂಪ್ರದಾಯಕ್ಕೆ ಅನುಗುಣವಾಗಿದೆ ಹಾಗೂ ಇದು ಸರ್ವಸಾಮಾನ್ಯ ವಿನ್ಯಾಸಗಳಿಂದ ಭಿನ್ನವಾಗಿದೆ.



ಹುಚ್ಚಪ್ಪಯ್ಯ ಮಠ



ಮುಖ್ಯ ಸಭಾಮಂಟಪವು 20'2" ಅಗಲ ಹಾಗೂ 29'9" ಉದ್ದಳತೆಯದಾಗಿದೆ. ನಾಲ್ಕು ಕಂಬಗಳ ಎರಡು ಜೋಡಿ ರೇಖೆಗಳಲ್ಲಿ ನಿಲ್ಲಿಸಲ್ಪಟ್ಟಿವೆ. ಈ ಮಂಟಪವು ಮುಖ್ಯ ಸಭಾಭವನದ ಭಾಗ ಅದರ ಎಡ ಹಾಗೂ ಬಲ ಬದಿಗಳಲ್ಲಿ ಉಪಯೋಗಿಸಲ್ಪಡುವ ಪಟ್ಟಿಕಾ ಅಂಕಣವಿದೆ. ಈ ಮುಖ್ಯ ಸಭಾಂಗಣವು ಆರು ಕಂಬಗಳನ್ನು ಹಾಗೂ ಎರಡು

ಗೋಡೆಗಳನ್ನು ಹೊಂದಿಕೊಂಡ ಕಂಬಗಳಿದ್ದು ಇವು ಮೇಲ್ಗಡೆಯ ಛತ್ತನ್ನು ಆಧಾರವಾಗಿ ಹಿಡಿದಿವೆ. ಈ ಮಂಟಪದ ನಾಲ್ಕು ಕಂಬಗಳ ಮಧ್ಯದಲ್ಲಿರುವ ಅಂಕಣದಲ್ಲಿ ನಂದಿಯನ್ನು ಗರ್ಭಗೃಹಕ್ಕೆ ಮುಖ ಮಾಡಿದಂತೆ ಕೂಡಿಸಲಾಗಿದೆ. ಇಲ್ಲಿರುವ ಎಡಭಾಗದ ಒಂದು ಕಂಬದಲ್ಲಿ 22 ಸಾಲಿನ ಕನ್ನಡ ಶಾಸನವಿದೆ. ಇನ್ನೊಂದು ಕಂಬದಲ್ಲಿ ನಾಲ್ಕು ಸಾಲಿನ ಶಾಸನವನ್ನು ನಾವು ಕಾಣಬಹುದು.

ಈ ದೇವಾಲಯದ ಗರ್ಭಗೃಹ ಪ್ರವೇಶ ಮಾಡಿದಾಗ ಅಲ್ಲಿರುವ ಅರ್ಧಕಂಬ-ಕಂಬಗಳಲ್ಲಿ ಮೋಹಕಾಂಗಗಳ ಪ್ರದರ್ಶಿಸುವ ಶಿಲ್ಪಗಳ ಕೆತ್ತನೆಯಿದೆ. ಪೂರ್ವಕ್ಕೆ ಮುಖ ಮಾಡಿದ ಅರ್ಧ ಕಂಭಗಳ ಮೇಲೆ ಈ ಶಿಲ್ಪಗಳು ಇವೆ. ಎಡಗಡೆಗಿರುವ ಅರ್ಧಕಂಭಗಳಲ್ಲಿ ಆಯುಧ ಸಮೇತನಾದ ದ್ವಾರಪಾಲಕನಿದ್ದರೆ, ಗರ್ಭಗೃಹದ ಆರಾಧನಾ ಮೂರ್ತಿ ಗರ್ಭಗುಡಿ ದ್ವಾರದ ತಲೆಪಟ್ಟಿಕೆಯಲ್ಲಿ ಗರುಡನ ಕೆತ್ತನೆಯಿದೆ.

ಹುಚ್ಚಪ್ಪಯ್ಯ ಮಠ ಗರ್ಭಗೃಹವು (6'9" x 8'11") ಆಯತಾಕಾರದ್ದಾಗಿದ್ದು ಈ ದೇವಾಲಯಕ್ಕೆ ಹುಚ್ಚಪ್ಪಯ್ಯ ಮಠ ಎಂಬ ಹೆಸರು ಬಂದದ್ದು ಇಲ್ಲಿ ಹುಚ್ಚಪ್ಪಯ್ಯನೆಂಬ ಶರಣನು ಈ ದೇವಾಲಯದಲ್ಲಿ ವಾಸವಾಗಿದ್ದರಿಂದ ಇದಕ್ಕೆ ಅದೇ ಹೆಸರು ರೂಢಿಯಲ್ಲಿ ಬಂದಿದೆ. (ಡಾ. ಅರ್.ಎಸ್.ಗುಪ್ತೆ, ಆರ್ಟ ಆ್ಯಂಡ್ ಆರ್ಕಿಟೆಕ್ಚರ್ ಆಫ್ ಐಹೊಳೆ).

**ವಾಸ್ತು ವಿಶೇಷ:**

ಪೂರ್ವಾಭಿಮುಖವಾಗಿ ನಿರ್ಮಿತಗೊಂಡ ಈ ದೇವಾಲಯದಲ್ಲಿ ಇತರ ದೇವಾಲಯಗಳಲ್ಲಿರುವಂತೆ ಇದರಲ್ಲಿ ಮುಖಮಂಟಪ, ಪ್ರದಕ್ಷಿಣಾ ಪಥದ ವಿನ್ಯಾಸವಿಲ್ಲ. ಗರ್ಭಗೃಹವು ಮಂಟಪದ ಪಶ್ಚಿಮಗೋಡೆಗೆ ಹೊಂದಿಕೊಂಡು ಪ್ರತ್ಯೇಕವಾಗಿ ನಿಂತಿದೆ. ಮಂಟಪ ಮತ್ತು ಗರ್ಭಗುಡಿಯ ಮಧ್ಯದಲ್ಲಿ ಒಂದು ದ್ವಾರವಿದೆ. ಗರ್ಭಗೃಹದ ಹೊರಗೋಡೆಗಳ ಮೂರು ದಿಕ್ಕುಗಳಲ್ಲಿಯೂ ಒಂದೊಂದು ವಿಗ್ರಹರಹಿತ ಮಾಡುಗಳಿವೆ.

ಈ ದೇವಾಲಯದ ಪ್ರವೇಶದ್ವಾರದಿಂದ ಮೊದಲಾಗಿ ಕಂಡು ಬರುವ ಮೋಹಕ ವಿಗ್ರಹಗಳಿಂದಾಗಿ ಇದೊಂದು ವಿಶಿಷ್ಟವಾದ ಕಲಾತ್ಮಕ ದೇವಾಲಯ, ದೇವಾಲಯದ ಹೊರಗೋಡೆಗಳಲ್ಲಿ ಕೆತ್ತಿದ ಹಲವಾರು ಮನೋಹರ ಶಿಲ್ಪಗಳು ಮನಸೆಳೆಯುತ್ತವೆ. ಒಂದೊಂದು ಕಂಬಗಳಲ್ಲಿ ಕೆತ್ತಿರುವ ಮಿಥುನ ಶಿಲ್ಪಗಳು, ರಸಿಕದಂಪತಿಗಳು, ಪ್ರೇಯಸಿಯರು, ಲಾವಣ್ಯವತಿಯರ ಬೆಡಗಿನ ಹಾಗೂ ವನಪು ವಯ್ಯಾರಗಳ ಕೆತ್ತನೆಗಳು ಅಂದಿನ ಸಾಮಾಜಿಕ ಜೀವನದ ಪ್ರತಿಬಿಂಬವನ್ನು ತೋರಿಸುವಂತಿವೆ.

ಮಂಟಪದ ಛತ್ತಿನಲ್ಲಿರುವ ಬ್ರಹ್ಮ, ಶಿವ, ವಿಷ್ಣು ವಿಗ್ರಹಗಳು ಸುಂದರವಾಗಿ ಚಿತ್ರಿತಗೊಂಡಿವೆ. ಆಕರ್ಷಕ ಶಿಲ್ಪಗಳ ಕಾರಣದಿಂದ ಹಾಗೂ ವಿಶಿಷ್ಟವಾದ ವಿನ್ಯಾಸದಿಂದಾಗಿ ಐಹೊಳೆಯ ಹುಚ್ಚಪ್ಪಯ್ಯ ಮಠವು ನಮಗೊಂದು ಹೊಸ ರೀತಿಯ ಅನುಭವವನ್ನುಂಟು ಮಾಡುತ್ತದೆ.

**ಚಿಕ್ಕಿ ಗುಡಿ :** ಚಿಕ್ಕಿ ಗುಡಿಗಳ ಸಮೂಹವು ಐಹೊಳೆಯ ಯಾತ್ರಿ ನಿವಾಸ (ಪ್ರವಾಸೋದ್ಯಮ ಇಲಾಖೆ)ದಿಂದ ಐಹೊಳೆ ಗ್ರಾಮಕ್ಕೆ ಹೋಗುವ ಮಾರ್ಗದ ಪಶ್ಚಿಮ ದಿಕ್ಕಿನಲ್ಲಿರುವ ಬಯಲಿನ ಮಧ್ಯದಲ್ಲಿ ನಿಂತಿದೆ. ಈ ಗುಡಿಗಳು ವಿಶಾಲ ಬಯಲಿನಲ್ಲಿ ಕಟ್ಟಲ್ಪಟ್ಟಿರುವುದರಿಂದ ಆಗಸದಲ್ಲಿ ಹೊಳೆಯುವ ತಾರೆ (ಚಿಕ್ಕೆ)ಯಂತೆ ಶೋಭಿಸುವುದರಿಂದ ಇವುಗಳಿಗೆ ಚಿಕ್ಕಿಗುಡಿಗಳೆಂದು ಹೆಸರು ಬಂದಿದೆ. ಈ ಸಮೂಹದಲ್ಲಿ ಎರಡು ದೇವಾಲಯಗಳಿದ್ದು ಇತ್ತೀಚೆಗೆ ಉತ್ಖನನಗೊಂಡ ಗಜಪೃಷ್ಠಾಕೃತಿ ವಾಸ್ತುಶಿಲ್ಪದ ತಲವಿನ್ಯಾಸದ ಅವಶೇಷವು ಉತ್ತರದಲ್ಲಿ ನಮಗೆ ಕಾಣಸಿಕ್ಕುತ್ತದೆ.

ಚಿಕ್ಕಿಗುಡಿ ದೇವಾಲಯ ವಿನ್ಯಾಸ ಗುಣ ಧರ್ಮಕ್ಕೆ ಸೇರಿದ ಒಂದು ವಿನೂತನ ಪ್ರಯೋಗ. ಈ ದೇವಾಲಯದ ತಲವಿನ್ಯಾಸವು ಐಹೊಳೆಯ ಭಗವತಿ ದೇವಾಲಯ (ಗೌಡರ ಗುಡಿ)ದ ವಿನ್ಯಾಸವನ್ನು ಹೊಂದಿದ್ದರೂ ಇಲ್ಲಿ ಹೊಸದೊಂದು ಪ್ರಯೋಗವನ್ನು ಸ್ಥಪತಿಗಳು ಮಾಡಿದ್ದನ್ನು ನೋಡಬಹುದು. ಈ ದೇವಾಲಯದ ತಲವಿನ್ಯಾಸವು ಹೆಚ್ಚು ಸುಧಾರಿತ ವ್ಯವಸ್ಥೆಯನ್ನು ಹೊಂದಿದ್ದಾಗಿದೆ. ಈ ದೇವಾಲಯದ ವಿನ್ಯಾಸ ಅಂಗಗಳಾದ ಮುಖಮಂಟಪ, ಸಭಾಮಂಟಪ ಹಾಗೂ ಗರ್ಭಗುಡಿ ಹೊಂದಿದ್ದು ಗರ್ಭಗೃಹದ ಸುತ್ತಲೂ ಹೊರಗೋಡೆಯ ಮಧ್ಯದಲ್ಲಿರುವಂತೆ ಪ್ರದಕ್ಷಿಣಾ ಪಥದ ನಿಯೋಜನೆಯನ್ನು ಮಾಡಲಾಗಿದೆ. ಈ ದೇವಾಲಯದ ಮುಖಮಂಟಪವು ಮೂರು ಮೆಟ್ಟಿಲುಗಳಿಂದ ಪ್ರವೇಶ ಪಡೆಯುತ್ತದೆ. ಇದಕ್ಕೆ ನಾಲ್ಕು ಕಂಭಗಳಿವೆ. ಈ ಕಂಭಗಳು ಪರಚ್ಛೇದದಲ್ಲಿ ಚೌರಸದಲ್ಲಿದ್ದು ಇವುಗಳ ಹೊರಬದಿಯು ಸರಳ ಹಾಗೂ ಸಾಮಾನ್ಯವಾಗಿವೆ. ಈ ಕಂಭಗಳಿಂದ ಆಧಾರಗೊಂಡ ಛತ್ತು ಸಪಾಟಾಗಿರುತ್ತದೆ ಹಾಗೂ ಅಂಚಿನಲ್ಲಿ ಮಳೆನೀರು ಜಾರಿಹೋಗಲು ಕಪೋತವನ್ನು ಹೊಂದಿದೆ. ತದನಂತರ ಬರುವ ವಿನ್ಯಾಸದ ಅಂಗವಾದ ಸಭಾಮಂಟಪವು ಮಧ್ಯದಲ್ಲಿ ರಚಿಸಲಾದ ದ್ವಾರದಿಂದ ಕೂಡಿದೆ. ಸಭಾಮಂಟಪದ ಮಧ್ಯದ ನಾಲ್ಕು ಕಂಭಗಳು ಹಾಗೂ ಬದಿಗಿರುವ ಗೋಡೆಗಳಿಗೆ ಹೊಂದಿಕೊಂಡಿರುವ ಎರಡು ಅರ್ಧಕಂಭಗಳಿವೆ. ಈ ಕಂಭಗಳು ಸುಂದರವಾದ ಸುಳಿವುಗಳನ್ನು ಹೊಂದಿವೆ. ಮುಂದೆ ಸಾಗಿದಂತೆ ನಮಗೆದುರಾಗುವುದು ಗರ್ಭಗೃಹ.



ಚಿಕ್ಕಿಗುಡಿ ತಲವಿನ್ಯಾಸ

ಚಿಕ್ಕಿ ಗುಡಿಯ ಗರ್ಭಗೃಹ ಅದಾಗಲೇ ತಿಳಿಸಿದ ಪ್ರದಕ್ಷಿಣಾ ಪಥದ ವಿನ್ಯಾಸ ಪಡೆದುಕೊಂಡಿದೆ. ದಕ್ಷಿಣ-ಪಶ್ಚಿಮ ಹಾಗೂ ಉತ್ತರ ಪಾರ್ಶ್ವದ ಹೊರಗೋಡೆಗಳು ಅಲಂಕೃತ ಮಾಡುಗಳನ್ನು ಅಳವಡಿಸಿಕೊಂಡಿವೆ. ಮುಖ್ಯ ಸಭಾಮಂಟಪದಲ್ಲಿ ನಾವು ಪ್ರವೇಶಿಸಿದೊಡನೆಯೆ ಮಂಟಪದಲ್ಲಿ ಗಾಳಿ-ಬೆಳಕು ಬರಲೆಂಬ ಉದ್ದೇಶದಿಂದ ಪ್ರದಕ್ಷಿಣಾ ಪಥದಲ್ಲಿ ಸಾಗುವಾಗ ಈ ಮುಖ್ಯ ವಿನ್ಯಾಸದ ಗೋಡೆಗಳಲ್ಲಿ ಜಾಲಂಧ್ರಗಳನ್ನು ಬಿಡಲಾಗಿದೆ. ಈ ಮೂರೂ ಭಾಗದಲ್ಲಿ ಜಾಲಂಧ್ರಗಳಿಗೆ ಪಟ್ಟಿಕೆಗಳನ್ನು ಅಳವಡಿಸಲಾಗಿದೆ. ಅವು ಸ್ವಲ್ಪ ಮುಂಚಾಚಿವೆ. ಈ ಜಾಲಂಧ್ರಗಳನ್ನು ಪಟ್ಟಿಕೆಗಳು ಸಮರ್ಥವಾಗಿ ರಕ್ಷಿಸಲು ಗಟ್ಟಿಮುಟ್ಟಾದ ಅಧಿಷ್ಠಾನಗಳುಳ್ಳ ಕಂಭಗಳನ್ನು ಎಡಬಲಗಳಲ್ಲಿ ನಿರ್ಮಿಸಲಾಗಿದೆ. ದೇವಾಲಯದ ಎಡ ಹಾಗೂ ಬಲಭಾಗದಲ್ಲಿರುವ ಈ ಜಾಲಂಧ್ರಗಳು ಮುಖ್ಯವಾಗಿರುವ ಹಿಂಬದಿಯ ಜಾಲಂಧ್ರದ ಕಿಟಕಿಗಳಿಗಿಂತ ಚಿಕ್ಕವಾಗಿವೆ. ಇವುಗಳ ಚೌಕಾಕಾರದ ರಂಧ್ರಗಳಲ್ಲಿ ಪುಟ್ಟ ಪುಟ್ಟ ಕಮಲಗಳನ್ನು ಕೊರೆಯಲಾಗಿದೆ.

**ವಾಸ್ತು ವಿಶೇಷ :**

ಕಂಭಗಳು : ಚಿಕ್ಕಿಗುಡಿಯ ಸಭಾಮಂಟಪದ ಕಂಬಗಳು ತಳಭಾಗದಲ್ಲಿ ಚೌಕಾದ ಪರಚ್ಛೇದವನ್ನು ಹೊಂದಿ ಮೇಲ್ಗಡೆ ಹೋದಂತೆ ಕಂಭವು ತಿರುವು ಮುರುವಾದ ಕಮಲಾಕೃತಿಯನ್ನು ಹೊಂದಿದ್ದು ಅವುಗಳ ಹೊರಮೈಮೇಲೆ ಪುಷ್ಪ ಮಾಲೆಗಳಿಂದ ಜೋಡಿಸಿದ ಕೀರ್ತಿ ಮುಖದಾಕಾರದ ಬಂಧ'ಗಳಿವೆ. ಈ ಪುಷ್ಪಹಾರಗಳ ಜೋಡಣೆಯಲ್ಲಿ ಯಾಳಿಗಳನ್ನು ಚಿತ್ರಿಸಿದ್ದು ಅವು ಕುಬ್ಜವಾಗಿವೆ ಹಾಗೂ ಈ ಅಲಂಕಾರವು ಕೆಳಗೆ ಹೋದಂತೆ ಕೆಳಗಿನ ಬಂಧಕ್ಕೆ ಒಪ್ಪುವಂತೆ ಉತ್ತೇಜಕವಾಗಿವೆ. ಹೀಗೆ ಸುಂದರವಾಗಿ ನಿರ್ಮಿಸಿದ ಎಲೆ ಬಳ್ಳಿಗಳ ಸಾಲುಗಳು ಬೆಳಕು ಕೆತ್ತನೆಗಳ ಕಣ್ಣು ಮುಚ್ಚಾಟವನ್ನು ತೋರಿಸುತ್ತವೆ. ಈ ತಿರುವು ಮುರುವು ಬಂಧದ ಮೇಗಡೆ ಅಷ್ಟಭುಜಾಕೃತಿಯು ಕಂಭದ ಭಾಗವು ಮೇಲೇರುತ್ತದೆ. ಈ ಕಂಭದ ಮೇಲೆ ಸುಂದರವಾದ ಕಮಲದ ಪಟ್ಟಿಕೆಯನ್ನು ಜೋಡಿಸಿ ಅದರ ಮೇಲ್ಗಡೆ ಕಂಭದ ಕಂಸಗಳನ್ನು ಅಳವಡಿಸಿ ಅದರ ಮೇಲೆ ಛತ್ತನ್ನು ಎತ್ತಿ ಹಿಡಿದು ತೊಲೆಗಳನ್ನು ಕೂಡಿಸಲಾಗಿದೆ. ಹೂಬಳ್ಳಿಗಳ ಅಲಂಕಾರವನ್ನು ವಿಶೇಷತೆಯನ್ನೂ ರೂಪಿಸಲಾಗಿದೆ. ಪಕ್ಕದಲ್ಲಿರುವ ಅರ್ಧಕಂಭಗಳೂ ಕೂಡಾ ಇದೇ ಅಲಂಕಾರವನ್ನು ಹೊಂದಿದ್ದನ್ನು ನಾವು ಕಾಣಬಹುದು. ಚಿಕ್ಕಿ ಗುಡಿಯ ವಾಸ್ತು ವಿಶೇಷಗಳಲ್ಲಿ ಒಂದು ನೂತನ ಪ್ರಯೋಗವಿರುವುದನ್ನು ಕಾಣಬಹುದು.



ಚಿಕ್ಕಿಗುಡಿ

**ಗರ್ಭಗೃಹ ದ್ವಾರ :**

ಈ ದೇವಾಲಯದ ಗರ್ಭಗೃಹದ ದ್ವಾರವು ಸಾಕಷ್ಟು ಅಲಂಕಾರ ಹೊಂದಿದ್ದಾಗಿದೆ. ದ್ವಾರದ ಎಡ ಬಲದಲ್ಲಿನ ದ್ವಾರ ಶಾಖೆಗಳು ಹೂಬಳ್ಳಿಗಳ ಚಿತ್ತಾರದಿಂದ ಕೂಡಿವೆ. ದ್ವಾರದ ಶಿರೋಭಾಗದ ಪಟ್ಟಿಕೆಯ ಮಧ್ಯದಲ್ಲಿ ರೆಕ್ಕೆಗಳನ್ನು ಹೊಂದಿದ ಗರುಡನ ವಿಗ್ರಹವಿದೆ. ಆತನ ಎಡಬಲಕೈಗಳಲ್ಲಿ ನಾಗಗಳನ್ನೂ ಹಿಡಿದ ಬಂಧಗಳಿವೆ. ಕೆಳಗಡೆ ಇರುವ ಪಟ್ಟಿಕೆಗಳಲ್ಲಿ ಮೂರು ಹೆಡೆಗಳುಳ್ಳ ನಾಗಗಳನ್ನು ಇಳಿಬಿಡಲಾದ ಚಿತ್ರಣವಿದೆ. ಈ ನಾಗರು ಭಕ್ತಿಪೂರ್ವಕವಾಗಿ ಕೈಮುಗಿದಿರುವುದನ್ನು ಕಾಣುತ್ತೇವೆ. ಎರಡೂ ಬದಿಯಲ್ಲಿ ಜಲದೇವತೆಯರ ಸುಂದರವಾದ ವಿಗ್ರಹ ಪಟ್ಟಿಕೆಗಳಿವೆ. ದ್ವಾರದ ಎಡ ಹಾಗೂ ಬಲಬದಿಗಳಲ್ಲಿ ಅರ್ಧಕಂಬಗಳಿದ್ದು ಅಲ್ಲಿ



ಚಿಕ್ಕಿಗುಡಿ ಗರ್ಭಗೃಹ

ಅಲಂಕೃತ ಹೂ ಕುಂಡಗಳನ್ನು ಕೆತ್ತಿ ಸಂಯೋಜಿಸಲಾಗಿದೆ. ಇದಲ್ಲದೇ ಲಂಬಕದಲ್ಲಿ ಅರ್ಧ ಕಂಬಗಳಲ್ಲಿ ಕಮಲಗಳ ಸಾಲುಳ್ಳ ಪಟ್ಟಿಕೆಯನ್ನು ಜೋಡಿಸಲಾಗಿದೆ. ಈ ಎರಡೂ ಅರ್ಧಕಂಬಗಳ ತುದಿಯಲ್ಲಿ ಚೈತ್ಯ ವಿನ್ಯಾಸವುಳ್ಳ ಅಲಂಕರಣಗಳಿವೆ. ಈ ಚೈತನ್ಯಗಳಲ್ಲಿ ನಿರ್ಮಾಣವಾದ ಕಮಾನುಗಳಲ್ಲಿ ಪ್ರತಿಮೆಗಳನ್ನು ಕೊರೆಯಲಾಗಿದೆ. ಗರ್ಭಗುಡಿಯನ್ನು ಎದುರಿಸಿದಂತೆ ಎಡಗಡೆಯ ಕಮಾನಿನಲ್ಲಿ ಕೈಯಲ್ಲಿ ಕಮಂಡಲ ಹಿಡಿದ ಬ್ರಹ್ಮ ದೇವನ ಮೂರ್ತಿಯಿದೆ. ಅವನ ಮೂರು ಮುಖಗಳನ್ನು ಸ್ಪಷ್ಟವಾಗಿ ತೋರಿಸಲಾಗಿದೆ. ಬಲಭಾಗದ ಕಮಾನಿನಲ್ಲಿ ವಿಷ್ಣುವಿನ ವಿಗ್ರಹವಿದೆ. ಇಲ್ಲಿ ವಿಷ್ಣು ಉಭಾಸಾಸನದಲ್ಲಿ ನಿಂತ ವಿಗ್ರಹವಿದೆ. ಇವೆರಡೂ ಮೂರ್ತಿಗಳ ಮಧ್ಯದ ಕಮಾನಿನಲ್ಲಿ ವೃಷಭವಾಹನ ಶಿವನ ಶಿಲ್ಪವುಂಟು. ಈ ಎಲ್ಲ ವಿಗ್ರಹಗಳೂ ಉಬ್ಬು ಶಿಲ್ಪಗಳಾಗಿವೆ.

ಮಂಟಪದ ಛತ್ತಿನಲ್ಲಿ (ಮೇಲ್ಛಾವಣಿ) ಸುಂದರವಾದ ಕೆತ್ತನೆ ಹಾಗೂ ಶಿಲ್ಪಗಳಿಂದಾಗಿ ಮತ್ತೆ ಮತ್ತೆ ವೀಕ್ಷಿಸುವಂತಿವೆ. ಅವುಗಳ ವರ್ಣನೆ ಇಲ್ಲಿ ಹೆಚ್ಚು ಬೇಡ. ಈ ದೇವಾಲಯದ ಪಟ್ಟಿಕೆಯ ಕಲ್ಲುಗಳು ಮೂರೂ ದಿಕ್ಕಿನಲ್ಲೂ ಮುಂಚಾಚು, ಕಪೋತವನ್ನು ಹೊಂದಿವೆ. ಗರ್ಭಗೃಹದ ಮೇಲಿನ ಶಿಖರವು ಕೆಲವೇ ಸ್ಥರಗಳನ್ನು ಉಳಿಸಿಕೊಂಡಿದ್ದು ಉಳಿದೆಲ್ಲ ಭಾಗ ಕಾಣಸಿಗವು.

ಶಿಖರವು ಛತ್ತಿನಿಂದ ಮೇಲಕ್ಕೇರುತ್ತಿರುವ ಪಾತಳಿಯಲ್ಲಿ ಉತ್ತರ ಹಾಗೂ ದಕ್ಷಿಣ ದಿಕ್ಕುಗಳಲ್ಲಿ ಜಾಲಂಧ್ರಗಳನ್ನು ರಚಿಸಲಾಗಿದೆ. ಇದು ವಾಸ್ತುಕಲೆಯ ವಿಶೇಷ ಅಂಗವಾಗಿದ್ದು, ವಿರಳವಾದ ಉದಾಹರಣೆಯೂ ಆಗಿದೆ. ಈ ಜಾಲಂಧ್ರಗಳಿಂದ ಗರ್ಭಗುಡಿಯ ಒಳಗಡೆ ಬೆಳಕು ಹಾಗೂ ಗಾಳಿಗಳ ಪ್ರವೇಶದ ವ್ಯವಸ್ಥೆಯಾಗಿದೆ. ಶಿಖರದ ಇನ್ನುಳಿದ ಅವಶೇಷಗಳು ಇದು ಔತ್ತರೇಯ ನಾಗರಶೈಲಿಯ ಶಿಖರ ವಿನ್ಯಾಸವಾಗಿರಲು ಸಾಕೆಂದು ತಿಳಿಸುತ್ತವೆ. ಇದು ಐಹೊಳೆಯಲ್ಲಿ ಪ್ರಯೋಗಿಸಲ್ಪಟ್ಟ ವಿನೂತನ ಶೈಲಿಯ ದೇವಾಲಯವಾಗಿದೆ.

ಈ ಚಿಕ್ಕಿಗುಡಿ ಸಮೀಕ್ಷೆಯು ಹಿಂದೂ ದೇವಾಲಯ ವಾಸ್ತುಶಿಲ್ಪದಲ್ಲಿ ಮಹತ್ವದ ಘಟ್ಟವನ್ನು ಸೂಚಿಸುತ್ತದೆ. ಸಭಾಮಂಟಪದ ಛತ್ತಿನಲ್ಲಿ ಕಮಲ ಭುವನದ ಅಳವಡಿಕೆಯು, ಗರ್ಭಗೃಹದ ಸುತ್ತಲೂ ಪ್ರದಕ್ಷಿಣಾಪಥವೂ ಹಾಗೂ ಮೂರು ವಿಶೇಷವಾಗಿ ಸದೃಢವಾದ ಕಂಬಗಳ ಆಧಾರವನ್ನು ಹೊಂದಿದ ಹೊರಗೋಡೆಗಳಲ್ಲಿ ಜೋಡಿಸಿದ ಜಾಲಂಧ್ರಗಳು ಮತ್ತು ಗರ್ಭಗೃಹದ ಶಿಖರದ ಪ್ರಾರಂಭಿಕ ಸ್ತರಗಳಲ್ಲಿ ಹೊಂದಿಸಲಾದ ಗಾಳಿ, ಬೆಳಕು, ನೀಡುವ ಜಾಲಂಧ್ರಗಳು ಈ ದೇವಾಲಯದ ಮುಖ್ಯ ವೈಶಿಷ್ಟ್ಯಗಳಾಗಿವೆ.

**ಮಲ್ಲಿಕಾರ್ಜುನ ದೇವಾಲಯ :**

ಈ ದೇವಾಲಯ ಸಮೂಹವು ಮೇಗುತಿ ಜಿನಾಲಯಕ್ಕೆ ಹೋಗುವ ಮಾರ್ಗದಲ್ಲಿಯ ಬೆಟ್ಟದ ಇಳಿಜಾರಿನ ಪ್ರದೇಶದಲ್ಲಿ ಹಾಗೂ ಐಹೊಳೆ ಕೋಟೆಗೋಡೆಯ ಪೂರ್ವ ದ್ವಾರದ ಎದುರಿಗೆ ನಿರ್ಮಿಸಲ್ಪಟ್ಟಿದೆ.

ಈ ದೇವಾಲಯ ಸಮೂಹದಲ್ಲಿ ಐದು ದೇವಾಲಯಗಳಿವೆ. ಅವುಗಳಲ್ಲಿ ಮಲ್ಲಿಕಾರ್ಜುನ ದೇವಾಲಯವು ಪ್ರಮುಖವಾಗಿದೆ. ಇವುಗಳಲ್ಲಿ ಮುಖ್ಯ ದೇಗುಲವು ಮಲ್ಲಿಕಾರ್ಜುನ ದೇವನಿಗೆ ಸಮರ್ಪಿಸಲ್ಪಟ್ಟಿದ್ದು, ಇದು ಪೂರ್ವಾಭಿಮುಖವಾಗಿದೆ. ಇನ್ನುಳಿದ ಮೂರು ದೇವಾಲಯಗಳು ಚಿಕ್ಕದಾಗಿದ್ದು ಈಶಾನ್ಯ ದಿಕ್ಕಿನಲ್ಲಿ ನಿರ್ಮಿಸಲ್ಪಟ್ಟಿವೆ. ಇನ್ನೊಂದು ದೇವಾಲಯವು ಮುಖ್ಯ ದೇವಾಲಯದ ಆಗ್ನೇಯ ದಿಕ್ಕಿನಲ್ಲಿದೆ ಮತ್ತು ಸಮೂಹಕ್ಕೆ ಹೊಂದಿ ಅನತಿ ದೂರದಲ್ಲಿ ಪಾವಟಿಕೆಗಳನ್ನು (ಮೆಟ್ಟಿಲು) ಹೊಂದಿರುವ ವಿಶಾಲವಾದ ಪುಷ್ಕರಣಿಯೂ ಇದೆ.

ಮುಖ್ಯವಾದ ಮಲ್ಲಿಕಾರ್ಜುನ ದೇವಾಲಂಯುವು ಮೂರು ಮುಖ್ಯ ವಿನ್ಯಾಸಗಳಾದ ಮುಖಮಂಟಪ, ಸಭಾಮಂಟಪ ಹಾಗೂ ಗರ್ಭಗೃಹಗಳಿಂದ ಕೂಡಿದ್ದು, ಇದರಲ್ಲಿ ಅಂತರಾಳ ಹಾಗೂ ಪ್ರದಕ್ಷಿಣಾಪಥಗಳ ವಿನ್ಯಾಸರಹಿತವಾಗಿದ್ದು, ಇದೊಂದು ನಿರಂಧಾರ ದೇವಾಲಯ. ಇದರ ಮುಖಮಂಟಪ ಪ್ರವೇಶಿಸಲು ಭೂಪಾತಳಿಯಿಂದ ನಾಲ್ಕು ಪಾವಟಿಕೆಗಳನ್ನೇರಿ ಬರಬೇಕು. ಈ ಮುಖ ಮಂಟಪಕ್ಕೆ ನಾಲ್ಕು ಚೌಕಾದ ಕಂಬಗಳಿವೆ. ಇದರ ಛತ್ತನ್ನು ಸಪಾಟಾದ ಕಲ್ಲುಗಳಿಂದ ಆಚ್ಛಾದಿಸಲಾಗಿದೆ. ಈ ಆಚ್ಛಾದನೆಯು ಕಪೋತಗಳನ್ನು ಹೊಂದಿದೆ. ಇಲ್ಲಿರುವ ಕಂಬಗಳು ಪರಿಚ್ಛೇದದಲ್ಲಿ ಚೌರಸದವಾಗಿದ್ದು ಹೂಬಳ್ಳಿಗಳ ಕೆತ್ತನೆಯಿಂದ ಅಲಂಕೃತವಾಗಿವೆ. ಇದರೊಂದಿಗೆ ಕಮಲಗಳ ಜತೆಗೆ ಕೆಲವು ಮಾನವಾಕೃತಿಗಳನ್ನು, ಯಕ್ಷ ಯಕ್ಷಿಣಿಯರನ್ನೂ ಚಿತ್ರಿಸಲಾಗಿದೆ.


ಮಲ್ಲಿಕಾರ್ಜುನ ದೇವಾಲಯದ ಊರ್ಧ್ವನೋಟ


ಮಲ್ಲಿಕಾರ್ಜುನ ದೇವಾಲಯದ ತಲವಿನ್ಯಾಸ

**ವಾಸ್ತು ವಿಶೇಷ**

ಮಲ್ಲಿಕಾರ್ಜುನ ದೇವಾಲಯದ ಸಭಾಮಂಟಪಕ್ಕೆ ಪ್ರವೇಶಿಸುವ ಮುಖ್ಯದ್ವಾರವು ವೈಶಿಷ್ಟ್ಯಪೂರ್ಣವಾಗಿದೆ. ಇಲ್ಲಿನ ದ್ವಾರದ ಎರಡೂ ಬದಿಗಳಲ್ಲಿ ರಸಿಕ ದಂಪತಿಗಳ ವಿಗ್ರಹಗಳನ್ನು ಕೆತ್ತಲಾಗಿದೆ ಮತ್ತು ನಾಗಶಿಲ್ಪದ ತೋರಣವು ವಿಶೇಷವಾದ ಮೆರುಗನ್ನು ತಂದಿದೆ. ದ್ವಾರದ ಎರಡೂ ಬದಿಗೆ ಅರ್ಧಕಂಭವು ಮೇಲೇರುತ್ತ ಹೋಗಿ ಚೈತ್ಯ ಸಾಲುಗಳುಳ್ಳ ಕಂಸಾಕೃತಿಯ ಬಂಧವಿದೆ. ಈ ಬಂಧದ ಮೇಲೆ ಗರುಡನ ವಿಗ್ರಹವಿದೆ. ಮಧ್ಯದಲ್ಲಿ ಗಣೇಶನ ಮೂರ್ತಿಯೂ ಇದೆ. ಈ ಎರಡೂ ಭಾಗಗಳಲ್ಲಿ ಸುಂದರ ಆಕರ್ಷಕ ಶೈಲಿಯ ಸಿಂಹದ ವಿಗ್ರಹಗಳಿವೆ.

ದೇವಾಲಯದ ಮುಂದಿನ ಮಂಟಪವು 7'2" ಅಗಲ 9'4" ಉದ್ದಳತೆಯದಾಗಿದ್ದು, ಒಳಗಿರುವ ಸಭಾಮಂಟಪವು ಬದಿಯ ಎರಡೂ ಅಂಕಣಗಳನ್ನು ಹೊಂದಿದ್ದು ಮಧ್ಯದಲ್ಲಿಯ ನಾಭಿ ಅಂಕಣವು ವಿಸ್ತೃತವಾಗಿದೆ. ಈ ಎರಡೂ ಅಂಗಗಳು ಕಂಬಗಳ ಸಾಲುಗಳಿಂದ, ಅರ್ಧಕಂಬಗಳ ಸಾಲುಗಳಿಂದ ಕೂಡಿದೆ. ಈ ಮಧ್ಯದಲ್ಲಿ ನಾಲ್ಕೂ ಕಂಭಗಳು ಪರಿಚ್ಛೇದದಲ್ಲಿ ಚೌರಸದ್ದಾಗಿವೆ. ಅವುಗಳ ನಾಲ್ಕು ಮುಖಗಳಲ್ಲಿ ಮಕರ ತೋರಣದ ಅಲಂಕರಣವಿದೆ. ಇದರ ಮೇಲಂಕಣದಲ್ಲಿ ನೃತ್ಯ ಭಂಗಿಯಲ್ಲಿರುವ ನರಸಿಂಹ, ಶಿವ ಹಾಗೂ ಪದ್ಮನಿಧಿ, ಮಿಥುನ ಶಿಲ್ಪಗಳು, ಕಮಲಗಳ ಸಮೂಹವಿದೆ. ಈ ಕಂಬಗಳ ಮೇಲ್ಗಡೆಯ ಬೋದುಗಳು ಎರಡು ಬದಿಗಳನ್ನು ಹೊಂದಿದ್ದು ಅಲಂಕೃತವಾಗಿವೆ. ಬೋದುಗಳ ಆಚೆಗೆ ಚಾಚಿರುವ ತೊಲೆಗಳಲ್ಲಿ ಪುಟ್ಟ ಪುಟ್ಟ

ದೇವಾಲಯಗಳ ಚಿತ್ರಣವಿದೆ. ಈ ನಾಭಿ ಮಂಟಪದಲ್ಲಿ ನಂದಿವಿಗ್ರಹವು ಗರ್ಭಗೃಹಕ್ಕೆ ಎದುರಾಗಿ ಸ್ಥಾಪಿತವಾಗಿದೆ.

ಮಲ್ಲಿಕಾರ್ಜುನ ದೇವಾಲಯದ ಗರ್ಭಗೃಹದ ಪ್ರವೇಶ ದ್ವಾರದ ಕೆಳಸ್ತರದಲ್ಲಿ ಮಕರದ ಮೇಲೆ ಗಂಗಾ ಆಮೆಯ ಮೇಲೆ ಯಮುನೆಯರ ಮೂರ್ತಿಗಳನ್ನು ಎಡ ಬಲದಲ್ಲಿ ಕೆತ್ತಿಡಲಾಗಿದೆ. ಅಲ್ಲಿ ವಿನೀತನಾಗಿ ಕೈಮುಗಿದುಕೊಂಡು ನಿಂತ ನಾಗನ ಚಿತ್ರವಿದೆ. ಗರ್ಭಗೃಹದ ದ್ವಾರದ ಮೇಲ್ಪಟ್ಟಿಯ ಮಧ್ಯದಲ್ಲಿ ಗರುಡನಿದ್ದು ಆತನ ಎರಡೂ ಕೈಗಳಿಂದ ನಾಗರಗಳನ್ನೂ ತೂರಿದ ಚಿತ್ರಗಳಿವೆ. ಗರ್ಭಗೃಹವು 7' ಅಗಲ ಹಾಗೂ 7' ಉದ್ದಳತೆಯದ್ದಾಗಿದೆ.

ಮುಖ್ಯ ಸಭಾಮಂಟಪದ ನಾಭಿ ಅಂಕಣದ ಛತ್ತು ಇಳಿಜಾರಾಗಿದೆ. ಶಿಖರವು ನಾಗರಶೈಲಿ ಹಾಗೂ ದ್ರಾವಿಡ ಶೈಲಿಯ (ಫಾಂಸನಾ) ಸಮ್ಮಿಶ್ರಣವನ್ನು ಹೊಂದಿದ್ದು ಮೇಲೆ ಕಳಸವನ್ನು ರೂಪಿಸಿದ್ದು ತುದಿಯ ಕಳಸ ಕಾಣಸಿಗದು.

ಕದಂಬ ನಾಗರ ಎಂದು ಕರೆಯುತ್ತಿದ್ದ ಈ ಶೈಲಿಗೆ ಪಾಂಸನಾಶೈಲಿ ಎಂದೂ ಸಹ ಕರೆಯಲಾಗುತ್ತದೆ. "ವಾಸ್ತು ವಿನ್ಯಾಸದಲ್ಲಿ ಸರಳವಾಗಿ ಇರುವ ಈ ದೇವಾಲಯ ರೇಖಾ ಪ್ರಾಸಾದ ಶೈಲಿಯಿಂದೊಡಗೂಡಿದ್ದಲ್ಲದೆ ರೇಖಾನಾಗರ ಶೈಲಿಯ ಪೂರ್ವಭಾವೀರೂಪವನ್ನುಳಿಸಿಕೊಂಡದ್ದಾಗಿದೆ. ತನ್ನ ಸ್ವತಂತ್ರ ಅಸ್ತಿತ್ವವನ್ನುಳಿಸಿಕೊಂಡಿದೆ. ತಲವಿನ್ಯಾಸದಲ್ಲಿ ಗರ್ಭಗೃಹ, ಗೂಢಮಂಟಪ, ಮುಖಮಂಟಪ ಇದರ ವಾಸ್ತು ಭಾಗಗಳು ಎಲ್ಲವೂ ನಿರಂಧಾರದೇಗುಲಗಳಂತೆ. ಊರ್ಧ್ವ ರಚನೆಯಲ್ಲಿ ಪದ್ಮ, ಕಂಠ, ಕಪೋತ ಮಡಿಕೆಗಳುಳ್ಳ ಸರಳ ಅಧಿಷ್ಠಾನವಿರುತ್ತದೆ. ಜಂಘಾ ಭಾಗಕ್ಕೆ ಅಲಂಕಾರವಿರುವುದಿಲ್ಲ. ಶಿಖರವು ಕ್ರಮೇಣ ಮೇಲಕ್ಕೆ ಹೋದಂತೆ ಕಿರಿದಾಗುತ್ತ ಸಾಗುವ, ಒಂದರ ಮೇಲೊಂದರಂತೆ ರಚಿತವಾಗಿರುವ ಕಪೋತ ಹೊಂದಿರುತ್ತದೆ. ಶಿಖರದ ಈ ಜಂಘಾಗಳಲ್ಲಿ ಸಾಲಾಗಿ ಜೋಡು ಕಂಬಗಳ ವಿನ್ಯಾಸ ಗೋಚರಿಸುತ್ತದೆ. (ಪ್ರೊ. ಶ್ರೀನಿವಾಸ ವೆಂ. ಪಾಡಿಗಾರ, ಬಾದಾಮಿಯ ಚಲುಕ್ಯರ ಶಾಸನಗಳು, ವಾಸ್ತು ಮತ್ತು ಶಿಲ್ಪಕಲೆ, ಪು. 48).


ಮಲ್ಲಿಕಾರ್ಜುನ ದೇವಾಲಯ

ಮಲ್ಲಿಕಾರ್ಜುನ ದೇವಾಲಯದ ಆವರಣವದಲ್ಲಿ ಬಿದ್ದುಕೊಂಡಿದ್ದ ಸಪ್ತಮಾತ್ರಿಕೆಯರ 1) ಬ್ರಾಹ್ಮೀ 2) ಮಹೇಶ್ವರಿ 3) ಕೌಮಾರಿ 4) ವೈಷ್ಣವಿ 5) ವಾರಾಹಿ 6) ಇಂದ್ರಾಣಿ 7) ಚಾಮುಂಡಾ ವಿಗ್ರಹ ಪಟ್ಟಿ ಇದ್ದು ಈ ಸಪ್ತ ಮಾತ್ರಿಕೆಯರನ್ನು ಕೆತ್ತಲಾಗಿದ್ದು, ಇದರಲ್ಲಿ ವೀರಭದ್ರ ಹಾಗೂ ಗಣೇಶರ ವಿಗ್ರಹಗಳನ್ನು ರೂಪಿಸಿಲ್ಲ.

ಚಾಲುಕ್ಯರು ತಮ್ಮ ದೇವಾಲಯಗಳ ನಿರ್ಮಾಣದ ಸ್ಫೂರ್ತಿಯಲ್ಲಿ ಈ ತರಹದ ವಿನ್ಯಾಸಗಳನ್ನು ಬೇರೆ ಬೇರೆ ಶೈಲಿಗಳಲ್ಲಿ ನಿರ್ಮಿಸಿರುವುದನ್ನು ಐಹೊಳೆಯ ಗಳಗನಾಥ ಸಮೂಹದಿಂದ ಹಿಡಿದು

ಹುಚ್ಚಪ್ಪಯ್ಯ ದೇವಾಲಯ, ಚಿಕ್ಕ ಗುಡಿಗಳ ಸಮೂಹ, ಕೊಂತಿ ದೇವಾಲಯ ಸಮುಚ್ಚಯ, ಲಾಡಖಾನ್ ಹಾಗೂ ಮಲ್ಲಿಕಾರ್ಜುನ ದೇವಾಲಯದವರೆಗೂ ನಿರ್ಮಾಣದಲ್ಲಿ ತಲವಿನ್ಯಾಸ ವೈವಿಧ್ಯತೆಗಳನ್ನು ನಾವು ಕಾಣಬಹುದಾಗಿದೆ.

ಐಹೊಳೆಯಲ್ಲಿ ರಾಚನಿಕ ವರ್ಗದ ಈ ಮಲ್ಲಿಕಾರ್ಜುನ ದೇವಾಲಯವು 7ನೆಯ ಶತಮಾನದ ಉತ್ತರಾರ್ಧದ ವಾಸ್ತುಶಿಲ್ಪವಾಗಿದ್ದು, ಪಾಂಸನಾ ಶೈಲಿಯ ಎಲ್ಲ ಅಂಶಗಳನ್ನಲ್ಲಿ ಕಾಣಬಹುದಾಗಿದೆ. ಇದೇ ವಿನ್ಯಾಸವುಳ್ಳ ಗಳಗನಾಥ ದೇವಾಲಯದ ಶಿಖರದ ಕೊನೆಯ ಭೂಮಿಯ ಕರ್ಣಗಳಲ್ಲಿ ಚಿಕ್ಕ ಅಮಲಕಗಳನ್ನಿರಿಸಲಾಗಿದೆ. ಈ ಲಕ್ಷಣವು ಫಾಂಸನಾ ಶೈಲಿಯ ರೇಖಾ ಪ್ರಾಸಾದ ಶೈಲಿಗೆ ಹೊಂದಿರುವ ಸಂಬಂಧದ ಸೂಚಕವಾಗಿದೆ ಎಂಬ ಪ್ರೊ. ಶ್ರೀನಿವಾಸ ವೆಂ. ಪಾಡಿಗಾರರ ಅಭಿಪ್ರಾಯ ಸಮಯೋಚಿತವಾದದ್ದಾಗಿದೆ.

**ಮೇಗುತಿ ಜಿನಾಲಯ :**



ಮೇಗುತಿ ಜಿನಾಲಯದ ಊರ್ಧ್ವನೋಟ



ಮೇಗುತಿ ಜಿನಾಲಯದ ತಲವಿನ್ಯಾಸ

ಐಹೊಳೆಯ ಆಗ್ನೇಯ ದಿಕ್ಕಿನಲ್ಲಿರುವ ಸಪಾಟಾದ ಬೆಟ್ಟದ ಮೇಲ್ಮೈಯಲ್ಲಿ ಈ ಮೇಗುತಿ ಜಿನಾಲಯವು ರಚಿಸಲ್ಪಟ್ಟಿದೆ. ಈ ಜಿನಾಲಯದ ಸ್ಥಳಾಯ್ಕೆ ಅತ್ಯಂತ ಅರ್ಥಪೂರ್ಣವಾಗಿದೆ. ಶಾಂತಿ, ಸೌರಭವನ್ನು ಸೂಸುವ ಜೈನ ತತ್ವವು ಈ ನೆಲೆಯಿಂದ ಸುತ್ತಲೂ ನೋಡಿದಾಗ ಎತ್ತರದ ಪ್ರದೇಶದ ಆಚೆಗೆ ಪಶ್ಚಿಮಕ್ಕೆ, ದಕ್ಷಿಣಕ್ಕೆ ಹರಡಿದ ನೀಲ ನಭದ ಆ ಕ್ಷಿತಿಜ ರೇಖೆಯಿಂದ ಐಹೊಳೆಯ ಸಮೀಪ ಕಣ್ಣು ಹರಿಸುತ್ತ ಬಂದಾಗ ಹಚ್ಚ ಹಸುರಿನ ತೋಟಪಟ್ಟಿಗಳಿವೆ. ಸುತ್ತು ಬಳಸಿ ಹರಿಯುವ ಮಲಪ್ರಭೆ, ಇನ್ನೂ ಸಮೀಪಕ್ಕೆ ಬಂದಾಗ ನಮ್ಮ ಎಡಗಡೆಯಲ್ಲಿ ದೂರದಲ್ಲಿ ಬೆಳ್ಳಗೆ ಕಾಣುವ ಶ್ರೀರಾಮಲಿಂಗ ದೇವಾಲಯ ಸಮೂಹ, ಗಳಗನಾಥ ದೇವಾಲಯ ಗುಂಪು ಕಾಣುತ್ತೇವೆ. ಐಹೊಳೆಯನ್ನು ಸುತ್ತುವರೆದ ಅರ್ಧ ಚಂದ್ರಾಕೃತಿಯ ಕೋಟೆಯ ಗೋಡೆ ಈ ಮಧ್ಯದಲ್ಲಿ ಮೇಗುತಿಯ ಗುಡ್ಡದ ತಳದವರೆಗೂ ಹರಡಿದ ಸಮತಟ್ಟಾದ ಪ್ರದೇಶದಲ್ಲಿ ಚಂಗನೆ ಎದ್ದು ಕಾಣುವ ದೇವಾಲಯಗಳು, ನೀರಿನ ನೀಲ ಪುಷ್ಕರಣಿಗಳು ಊರಿಗೆ ಬಂದು ಸೇರುವ ಮಾರ್ಗಗಳು ಇವುಗಳೆಲ್ಲವೂ ಐಹೊಳೆಯ ಪ್ರಾಚೀನತೆಯ ಆರ್ಯಪುರವೆಂದು ಹೆಸರು ಗಳಿಸಿದ ಸಾಂಸ್ಕೃತಿಕ ನೆಲೆಯ ಬೆಲೆಯನ್ನು ಸಾರುವಂತಿವೆ. (ಡಾ. ಎಸ್.ಕೆ.ಜೋಶಿ ಅಭಿಪ್ರಾಯ).

ಮೇಗುತಿ ಜಿನಾಲಯದ ಹತ್ತಿರದ ಸಪಾಟಾದ ಮೇಲ್ಮೈ ತಾಣದಲ್ಲಿ ಸುಮಾರು ಐದು ಸಾವಿರ ವರ್ಷಗಳ ಪ್ರಾಗೈತಿಹಾಸದ ಕಥೆಯನ್ನು ವಿವರಿಸುವ ಬೃಹತ್ ಶಿಲಾಗೋರಿ (Magalitic Tombs) ಈ ತಾಣದ ಪ್ರಾಚೀನತೆಯನ್ನು ಅಷ್ಟೊಂದು ದೂರ ಕಾಲಘಟ್ಟದಲ್ಲಿ ಕರೆದೊಯ್ಯುತ್ತವೆ. (ಡಾ. ಅ. ಸುಂದರ ಅನಿಸಿಕೆ).

ಇನ್ನು ನೇರವಾಗಿ ನಂಬುಗೆಗಳ ಚಿಂತನೆಯಲ್ಲಿಳಿದಾಗ ಚಾಲುಕ್ಯರು ವೈಷ್ಣವ, ಶೈವ, ಜೈನ ಧರ್ಮಗಳ ಉತ್ಥಾನದ ಪ್ರಯೋಗದಲ್ಲಿ ವಿವಿಧ ಮಂದಿರಗಳನ್ನು ಇಲ್ಲಿ ನಿರ್ಮಿಸಿದುದು ಚಾಲುಕ್ಯರು ನೀಡಿದ ಐತಿಹಾಸಿಕ ಕೊಡುಗೆ ಎಂದು ಹೇಳಬಹುದು. ಈ ಮೇಗುತಿ ಜಿನಾಲಯದ ಚಿಂತನೆಯಲ್ಲಿ ತೊಡಗಿದಾಗ ಇದರ ರಚನೆಯು ಐಹೊಳೆ ದೇವಾಲಯಗಳಲ್ಲಿ ಅತ್ಯಂತ ಹೆಚ್ಚು ವಿಸ್ತೃತವಾದ ತಲವಿನ್ಯಾಸದ ಅಂಗಗಳಾದ ಮುಖಮಂಟಪ, ಸಭಾಮಂಟಪ, ಅಂತರಾಳವನ್ನು ವಿಭಾಗಿಸುವ ವಿಸ್ತೃತ ಕಲ್ಪನೆಯನ್ನು ಅದರ ಆಚೆಗೆ ನಿರ್ಮಿಸಲ್ಪಟ್ಟ ಮುಖ್ಯ ಗರ್ಭಗುಡಿ ಹಾಗೂ ಅದರ ಸುತ್ತಲೂ ಹರಡಿದ ಪ್ರದಕ್ಷಿಣಾಪಥ. ಈ ಪ್ರದಕ್ಷಿಣಾ ಪಥದಲ್ಲಿ ಅಡ್ಡಗೋಡೆಗಳನ್ನು ಹಾಕಿ ನಿರ್ಮಿಸಿದ ಕೋಣೆಗಳು ಈ ಎಲ್ಲ ವಿನ್ಯಾಸದ ವಾಸ್ತು ಅಂಗಗಳನ್ನು ಎತ್ತಿ ಹಿಡಿದ ಎತ್ತರವಾದ ಅಧಿಷ್ಠಾನ, ದ್ವಿಮುಖವುಳ್ಳ ಮುಖ ಮಂಟಪಕ್ಕೆ ದಾರಿ ನೀಡುವ ಸೋಪಾನಗಳು (ಪಾವಟಿಗೆಗಳು) ಇವಲ್ಲದೇ ಗರ್ಭಗೃಹದ ಛತ್ತಿನ ಮೇಲೆ ನಿರ್ಮಿಸಿದ ಮೇಗಣ ಇನ್ನೊಂದು ಗರ್ಭಗೃಹ ಇವೆಲ್ಲವುಗಳನ್ನು ಶಾಸನೋಕ್ತವಾಗಿ ಕೂಗಿ ಹೇಳುವ ಕವಿ ರವಿಕೀರ್ತಿಯ ಶಿಲಾಶಾಸನವು ಈ ಜೈನದೇವಾಲಯದ ಪೂರ್ವ ಪಾರ್ಶ್ವಗೋಡೆಯಲ್ಲಿ ಅಲಂಕೃತಗೊಂಡಿದೆ.



ಮೇಗುತಿ ಜಿನಾಲಯ

ಈ ವಿಸ್ತಾರವಾದ ಮೇಗುತಿ ಜಿನಾಲಯವು ಐಹೊಳೆಯಲ್ಲಿ ನಿರ್ಮಾಣಗೊಂಡ ನೂರಾರು ದೇವಾಲಯಗಳಲ್ಲಿ ವಿನ್ಯಾಸ ವಿಸ್ತೃತ ಕ್ಷೇತ್ರವನ್ನು ಗಳಿಸಿರುವುದರಿಂದ ಇದನ್ನು ಅತ್ಯಂತ ವಿಸ್ತಾರವಾದ ದೇವಾಲಯವೆಂದು ಹೇಳಬಹುದು. ಹೀಗಾಗಿ ಐಹೊಳೆಯ ವಾಸ್ತುಶಿಲ್ಪ ನಿರ್ಮಾಪಕರು ದೇವಾಲಯಗಳ ವಿಸ್ತರಣೆಗೆ ಕೊಟ್ಟಂತಹ ಇದೊಂದು ಪೂರ್ಣ ವಿರಾಮ. (ಡಾ. ಆರ್.ಎಸ್.ಗುಪ್ತೆ, The Art and Architecture of Aihole).

ಇನ್ನು ಈ ದೇವಾಲಯದ ನಿರ್ಮಾಣದ ಬಗ್ಗೆ ಇನ್ನಷ್ಟು ವಿವರಿಸುವುದಾದರೆ ಇದನ್ನು ಇಮ್ಮಡಿಪುಲಕೇಶಿಯ ಕಾಲದಲ್ಲಿ (ಕ್ರಿ.ಶ. 634-35 ಶಕ 556ರಲ್ಲಿ ಶಾಸನೋಕ್ತ ಶಿಲಾಲೇಖದ ಪ್ರಕಾರ) ಇಬ್ಬರು ಮಹಾನ್ ಸಂಸ್ಕೃತ ವಿದ್ವಾಂಸರುಗಳಾದ ಕವಿಕಾಳಿದಾಸ ಹಾಗೂ ಭಾರವಿಯರನ್ನು ಕವಿ ರವಿಕೀರ್ತಿಯು ಇಲ್ಲಿ ಸ್ಮರಿಸಿಕೊಂಡು ತನ್ನ ಕಾವ್ಯಕ್ಕೂ ಇವರಿಬ್ಬರ ಕಾವ್ಯ ಪ್ರೌಢಿಮೆ ಬಂದಿದೆ ಎಂದು ಹೊಗಳಿಕೊಂಡಿದ್ದಾನೆ.


ಕವಿ ರವಿಕೀರ್ತಿ ವಿರಚಿತ ಶಾಸನ ಫಲಕ

ಮೇಗುತಿ ದೇವಾಲಯವು ಅದಾಗಲೇ ಹೇಳಿದಂತೆ ಹಲವಾರು ಪಟ್ಟಿಗಳುಳ್ಳ ಅಧಿಷ್ಠಾನದ ಮೇಲೆ ಉತ್ತರಾಭಿಮುಖವಾಗಿ ನಿಂತಿದೆ. ಈ ದೇವಾಲಯವನ್ನು ಪ್ರವೇಶಿಸಲು ಎರಡು ವೈರುಧ್ಯ ದಿಸೆಯಲ್ಲಿಯ ಪಾವಟಿಗೆಗಳ ಮೂಲಕ ಮುಖ ಮಂಟಪದಲ್ಲಿ ಪ್ರವೇಶಿಸಬೇಕು. ಈ ಮುಖ ಮಂಟಪವು ಪರಿಪೂರ್ಣತೆಯಲ್ಲಿ ರೂಪುಗೊಂಡಿದೆ. ಮುಖಮಂಟಪವು ಐಹೊಳೆಯ ದೇವಾಲಯಗಳ ಎಲ್ಲ ಮುಖ ಮಂಟಪಗಳಿಗಿಂತಲೂ ವಿಸ್ತಾರವುಳ್ಳದ್ದಾಗಿದೆ. ಇದು 19'3" ಉದ್ದಳತೆಯದಾಗಿದ್ದು 16 ಕಂಭಗಳಿಂದ ಅಲಂಕೃತಗೊಂಡದ್ದಾಗಿದೆ ಹಾಗೂ ಕಂಭಗಳು ಪರಚ್ಛೇದದಲ್ಲಿ ಚೌರಸ ಆಕಾರದ್ದಾಗಿವೆ. ಈ ಮುಖ ಮಂಟಪವು ನಾಭೀ ಅಂಕಣ, ಎಡ ಹಾಗೂ ಬಲ ಅಂಕಣಗಳನ್ನು ಹೊಂದಿದೆ. ಅಧಿಷ್ಠಾನದ ಪಟ್ಟಿಕೆಗಳು ಹಾಗೂ ಮುಖ ಮಂಟಪದ ಬಾಹ್ಯಗೋಡೆಗಳ ಮೇಲಿನ ಕುಂಬಿಗಳ ಪಟ್ಟಿಕೆಗಳನ್ನು ಅಲಂಕೃತಗೊಳಿಸಲಾಗಿದೆ. ಈ ಅಲಂಕರಣವು ಕೂಡುಗಳಿಂದ ಹಾಗೂ ಫಲಪುಷ್ಪಗಳ ಅಲಂಕರಣಗಳಿಂದ ಸುಂದರಗೊಳಿಸಲಾಗಿದೆ. ಈ ಮಧ್ಯದಲ್ಲಿಯ ಕಂಭಗಳುಳ್ಳ ಸಭಾ ಮಂಟಪದಿಂದ ಮುಂದುವರೆದಂತೆ ಅಂತರಾಳವನ್ನು ಪ್ರವೇಶಿಸಿದರೆ ಬರುವ ಅಂತರಾಳವು ವಿಸ್ತಾರವಾಗಿರುವುದರಿಂದ ಎರಡು ವಿಭಾಗವನ್ನು ಹೊಂದಿದೆ. ಈ ಎರಡೂ ಅಂತರಾಳಗಳನ್ನು ವಿಭಾಗಿಸುವ ಮಧ್ಯದಲ್ಲಿಯ ವಿಭಾಗೀಯ ಗೋಡೆಯು ಒಂದು ಪ್ರವೇಶ ದ್ವಾರವನ್ನೂ ಹೊಂದಿದೆ ಮತ್ತು ಆ ಎರಡೂ ಅಂತರಾಳಗಳು ಪೂರ್ಣ ಹಾಗೂ ಅರ್ಧ ಕಂಬಗಳಿಂದ ಆಸರೆ ಪಡೆದಿವೆ. ಈ ಅಂತರಾಳವು 15'8" ಅಗಲ ಮತ್ತು 9'2" ಉದ್ದಳತೆಯದ್ದಾಗಿಯೂ ನಾಲ್ಕು ಕಂಬಗಳ ಆಸರೆಯನ್ನು ಹೊಂದಿದ್ದಾಗಿದೆ. ಇಷ್ಟು ವಿಸ್ತೃತವಾದ ಅಂತರಾಳವನ್ನು ಎರಡು ಭಾಗಗಳನ್ನಾಗಿ ಸ್ಥಪತಿಗಳು ವಿಂಗಡಿಸಿದ್ದಾರೆ. ತದನಂತರ ನಾವು ಪ್ರದಕ್ಷಿಣಾ ಪಥದಲ್ಲಿ ಪ್ರವೇಶಿಸಿದಾಗ ವಿಶಾಲವಾದ ಆಲಯವಿದ್ದು ಮಧ್ಯದಲ್ಲಿ ಗರ್ಭಗೃಹವನ್ನು ನಿರ್ಮಿಸಲಾಗಿದೆ. ಈ ಗರ್ಭಗೃಹ ಹಾಗೂ ಆಲಯದ ನಾಲ್ಕೂ ಗೋಡೆಗಳ ಮಧ್ಯದಲ್ಲಿ ಸುತ್ತುವರೆದ ಪ್ರದಕ್ಷಿಣಾ ಪಥವಿದ್ದು ಅದನ್ನು ಅಡ್ಡಲಾದ ಗೋಡೆಗಳಿಂದ ಮೂರು ಕೋಣೆಗಳನ್ನು ಧಾರ್ಮಿಕ ವಿಧಿಗಳಿಗಾಗಿ ರೂಪಿಸಲಾಗಿದೆ. ಈ ಅಡ್ಡಗೋಡೆಗಳ ರಚನಾ ಕ್ರಮಗಳು ಜೈನ ಧರ್ಮದ ಪೂಜಾ ವಿಧಿವಿಧಾನಗಳ ಆಚರಣೆಗಾಗಿ ನಿರ್ಮಿಸಲಾಗಿದೆ. ಹೀಗಾಗಿ ಪ್ರದಕ್ಷಿಣಾ ಪಥಕ್ಕೆ ತಡೆಯುಂಟಾಗಿದ್ದುದು ಕಂಡು ಬರುತ್ತದೆ.

ಮೇಗುತಿ ಜಿನಾಲಯದ ಗರ್ಭಗೃಹವು 10' 10'5" ಅಗಲ ಹಾಗೂ 11'6" ಉದ್ದಳತೆಯದಾಗಿದೆ. ಇದರ ಗೋಡೆಯು ನೈಜತೆಯಿಂದ ಕೂಡಿದೆ. ನಾಲ್ಕು ಮೂಲೆಗಳನ್ನು ನಾಲ್ಕು ಅರ್ಧ ಕಂಭಗಳನ್ನು ಹೊಂದಿದ್ದಾಗಿದೆ. ಮಧ್ಯದಲ್ಲಿ ಅಧಿದೈವನಾದ ಮಹಾವೀರ ತೀರ್ಥಂಕರ ಮೂರ್ತಿ (?) ಇದ್ದು ಇದು ಭವ್ಯವಾಗಿ ವಾಮಲಲಿತಾಸನದಲ್ಲಿದೆ. ಎಡ ಬಲ ತುದಿಗಳಲ್ಲಿ ಯಕ್ಷ ಯಕ್ಷಿಣಿಯರು ಚಾಮರಗಳಿಂದ ಗಾಳಿ ಬೀಸುತ್ತಿದ್ದಾರೆ. ಇವುಗಳನ್ನು ಪ್ರಭಾವಳಿಯಲ್ಲಿ ಅಲಂಕರಿಸಲಾಗಿದೆ. ಬಾದಾಮಿ ಚಾಲುಕ್ಯರ ಕಾಲದಲ್ಲಿ ನಿರ್ಮಾಣಗೊಂಡ ಜೈನ ತೀರ್ಥಂಕರರ ಮೂರ್ತಿಗಳಲ್ಲಿಯೇ ಇದು ಭವ್ಯವಾದದ್ದೂ ವಿಶೇಷವಾದದ್ದೂ ಆಗಿರುವುದು ನಮ್ಮ ಗಮನಕ್ಕೆ ಬರುತ್ತದೆ. ಅಂತತ: ಈ ಜಿನ ದೇವಾಲಯವು ಬಾದಾಮಿ ಚಾಲುಕ್ಯರ ಪ್ರಗತಿ



ಮೇಗುತಿ ದೇವಾಲಯದ ಗರ್ಭಗೃಹದ ವಿಗ್ರಹ

ಹೊಂದಿದ ವಾಸ್ತುಶಿಲ್ಪಶೈಲಿಯನ್ನು ಒಳಗೊಂಡಿದ್ದು ವಿನ್ಯಾಸ ರಚನೆಯಲ್ಲಿ ವೈವಿಧ್ಯತೆಯನ್ನು ಹೊಂದಿರುವುದನ್ನು ಇಲ್ಲಿ ಕಾಣಬಹುದು. ಈ ದೇವಾಲಯದ ವಿಸ್ತಾರ ಹಾಗೂ ಎತ್ತರವಾದ ಅಧಿಷ್ಠಾನ ಮೇಲ್‌ಸ್ತರದಲ್ಲಿ ಗುಡಿಯಿರುವುದರಿಂದ ಮೇಲ್‌ಗುಡಿ (ಮೇಗುತಿ)ಯಾಗಿದೆ. ಇದಕ್ಕೆ ಒಂದು ವಿಶಿಷ್ಟ ಸ್ಥಾನವಿದೆ. (ಡಾ. ಆರ್.ಎಸ್.ಗುಪ್ತೆ, The Art and Architecture of Aihole).

**ವಾಸ್ತು ವಿಶೇಷಗಳು :**

ಈ ಮೇಗುತಿ ದೇವಾಲಯ ವಾಸ್ತು ವಿಶೇಷತೆ ಕುರಿತು ಪ್ರೊ. ಶ್ರೀನಿವಾಸ ಪಾಡಿಗಾರರು ನೀಡುವ ಅಭಿಪ್ರಾಯ ಹೀಗೆ ಇದೆ. "ಇದು ವಿಶಾಲ ಪ್ರದಕ್ಷಿಣಾ ಪಥವುಳ್ಳ ಸಾಂಧಾರ ವಿಮಾನ, ಮೂಲ ವಿನ್ಯಾಸದಲ್ಲಿ ಇದಕ್ಕೆ ಸಾಂಧಾರ ಗರ್ಭಗೃಹ, ವಿಮಾನಕ್ಕಿಂತ ತುಸು ಕಿರಿದಾದ ಮಂಟಪ ಮಾತ್ರ ಇದ್ದವು. ನಂತರ ಚಾಲುಕ್ಯರ ಕಾಲದಲ್ಲಿಯೆ ಮುಖ ಚತುಷ್ಕಿಯನ್ನು ಸೇರಿಸಲಾಯಿತು. ತದನಂತರದಲ್ಲಿ ಮುಖ ಚತುಷ್ಕಿಯನ್ನು ಒಳಗೊಂಡು ವಿಶಾಲ ತೆರೆದ ಮಂಟಪವನ್ನು ರಚಿಸಲಾಗಿದೆ. ಮೂಲ ವಿಮಾನದ ಅಧಿಷ್ಠಾನದಲ್ಲಿ ಉಪಾನ, ಜಗತಿ, ತ್ರಿಪಟ್ಟ ಕುಮುದ, ಕಂಠ ಮತ್ತು ಕಪೋತಗಳಿವೆ. ಪಾದದಲ್ಲಿ ಕರ್ಣಗಳ ನಡುವಣ ಅವಕಾಶದಲ್ಲಿ ತುಸು ಹೆಚ್ಚು ಅಗಲವುಳ್ಳ ಭದ್ರಗಳನ್ನು ನಿಗದಿತ ಅಂತರದಲ್ಲಿ ರಚಿಸಿದ್ದಾರೆ. ಇವುಗಳಿಗೆ ಕೋಷ್ಠಗಳನ್ನು ಮಾಡಿದೆ. ಪ್ರಸ್ತರದ ಕಪೋತದ ಮೇಲೆ ವ್ಯಾಲವರಿ ಇದೆ. ಎರಡನೇ ತಲದಲ್ಲಿ ಇನ್ನೊಂದು ಗರ್ಭಗೃಹವಿದೆ. ಈ ಲಕ್ಷಣ ಕೆಲವು ಜೈನ ದೇಗುಲಗಳಲ್ಲಿ ಕಂಡು ಬರುತ್ತದೆ. ................. (ಬಾದಾಮಿ ಚಲುಕ್ಯರ ಶಾಸನಗಳು, ವಾಸ್ತು ಮತ್ತು ಶಿಲ್ಪಗಳು ಪು.–38).

ಇದೇ ದೇವಾಲಯ ಕುರಿತು ಖ್ಯಾತ ಇತಿಹಾಸ ಸಂಶೋಧಕರಾದ ಪ್ರೊ. ಎಸ್. ರಾಜಶೇಖರ ವ್ಯಕ್ತಪಡಿಸುವ ಅಭಿಪ್ರಾಯ ಹೀಗಿದೆ. "ಈ ಬಸದಿಯು ದ್ರಾವಿಡ ಶೈಲಿಯಲ್ಲಿ ರಚಿತವಾದ ಅತಿ ಪ್ರಾಚೀನ ನಿರ್ಮಾಣಗಳಲ್ಲಿ ಒಂದು. ಸಾಕಷ್ಟು ದೊಡ್ಡದಾಗಿರುವ ಇದರಲ್ಲಿ ಗರ್ಭಗೃಹ, ಪ್ರದಕ್ಷಿಣಾಪಥ, ಸುಕನಾಶಿ, ಅರ್ಧಮಂಟಪ ಅದಕ್ಕೆ ತಾಗಿದಂತೆ ಕಂಭಗಳಿರುವ ಕೈಸಾಲೆ ಇವೆ. ಎತ್ತರವಾದ ಅಧಿಷ್ಠಾನದ ಮೇಲಕ್ಕೆ ಕಟ್ಟಡ ನಿಂತಿದೆ. ಗೋಡೆಗಳಿಗೆ ಕೋಷ್ಠಗಳನ್ನು ಕಲ್ಲಿನ ಜಾಲಂಧ್ರಗಳನ್ನೂ ಅಳವಡಿಸಲಾಗಿದೆ. ಜಾಲಂಧ್ರಗಳು ಸರಳವಾದ ವಿನ್ಯಾಸದಿಂದ ಕೂಡಿವೆ. ಕೋಷ್ಠಗಳಲ್ಲಿ ಇರಿಸಿದ ವಿಗ್ರಹಗಳು ಈಗ ಕಣ್ಮರೆಯಾಗಿವೆ. ಗರ್ಭಗೃಹದ ಮೇಲೆ ಇನ್ನೊಂದು ಗರ್ಭಗೃಹವೂ ಕೈಸಾಲೆಯೂ ಇದ್ದು ಇವು ಕೆಲವು ದಶಕಗಳ ಅನಂತರ ಸೇರಿಸಿದವಾಗಿವೆ. ಮೇಲಿನ ಕೈಸಾಲೆ ಈಗ ಸಂಪೂರ್ಣ ಕಣ್ಮರೆಯಾಗಿದೆ. ಅಂತಸ್ತು ಇರುವ ಬಸದಿಗಳನ್ನು ನಿರ್ಮಿಸುವ ಪದ್ಧತಿಯನ್ನು ಕರ್ನಾಟಕದಲ್ಲಿ ಮೇಗುತಿಯಿಂದಲೇ ಪ್ರಾರಂಭಿಸಲಾಯಿತು. (ಬಾದಾಮಿ ಚಾಲುಕ್ಯರು ಲೇಖನ ಸಂಪುಟ ಪು. 318).

**ರಾಮಲಿಂಗ ದೇವಾಲಯ :**

ಐಹೊಳೆಗೆ ದಕ್ಷಿಣದಲ್ಲಿ ಸುಮಾರು ಎರಡು ಕಿ.ಮೀ. ದೂರದಲ್ಲಿ ಮಲಪ್ರಭಾ ನದಿ ತಟದಲ್ಲಿ ಈ ದೇವಾಲಯವಿದೆ. ಐಹೊಳೆಯಲ್ಲಿರುವ ದೇವಾಲಯಗಳಲ್ಲಿ ಪೂಜೆ ನಡೆಯುತ್ತಿರುವ ದೇವಾಲಯ ಮಾತ್ರ ಇದಾಗಿದೆ. ಗಳಗನಾಥ ದೇವಾಲಯ ಸಮೂಹದಿಂದ ಸ್ವಲ್ಪ ದೂರದಲ್ಲಿಯೇ ಈ ದೇವಾಲಯ ಪಶ್ಚಿಮಾಭಿಮುಖವಾಗಿ ನಿರ್ಮಾಣಗೊಂಡಿದೆ.



ರಾಮಲಿಂಗ ದೇವಾಲಯ

**ಶ್ರೀ ರಾಮಲಿಂಗ ದೇವಾಲಯದ ತಲವಿನ್ಯಾಸ**




೧. ಪ್ರವೇಶದ್ವಾರ. ೨. ವಿಶಾಲ ಮಂಟಪ. ೩. ನಂದಿವಿಗ್ರಹ. ೪. ಸುಕನಾಶಿ. ೫. ಮುಖ್ಯ ಗರ್ಭಗೃಹ. ೬ ಎರಡನೇ ಗರ್ಭಗೃಹ. ೭. ಮೂರನೇ ಗರ್ಭಗೃಹ.

ತೀರ ಸರಳವಾದ ವಾಸ್ತು ವಿನ್ಯಾಸ ಹೊಂದಿದ ಈ ದೇವಾಲಯು ಒಂದು ತ್ರಿಕೂಟಾಲವಾಗಿದೆ. ಪ್ರವೇಶದ್ವಾರ, ವಿಶಾಲ ಮಂಟಪ, ಶುಕನಾಶಿ ಅದಕ್ಕೆ ಹೊಂದಿಕೊಂಡಂತಿರುವ ಮುಖ್ಯ ಗರ್ಭಗೃಹ ದೊಡ್ಡ ಮಂಟಪದ ಎಡಬಲಭಾಗದಲ್ಲಿ ಮತ್ತೆರಡು ಗರ್ಭಗೃಹಗಳು ಅಂತರಾಳರಹಿತವಾಗಿವೆ. ಮುಖ್ಯ ಗರ್ಭಗೃಹದಲ್ಲಿ ರಾಮಲಿಂಗೇಶ್ವರ, ದಕ್ಷಿಣದ ಕಡೆಗೆ ಮುಖಮಾಡಿರುವ ಗರ್ಭಗೃಹದಲ್ಲಿ ಸಿದ್ದೇಶ್ವರನನ್ನು ಅದರೆದುರಿಗೆ ಉತ್ತರದ ಕಡೆಗೆ ಮುಖಮಾಡಿರುವ ಗರ್ಭಗೃಹದಲ್ಲಿ ಪಾರ್ವತಿ ಮೂರ್ತಿಯಿದೆ. ಈ ದೇವಾಲಯದ ಮುಖ್ಯ ಸಭಾ ಮಂಟಪವು ನಾಲ್ಕು ಕಂಭಗಳನ್ನು ಹೊತ್ತು ನಿಂತಿದೆ. ಸ್ವಲ್ಪ ಎತ್ತರದ ನೆಲಗಟ್ಟಿನ ಮಧ್ಯದಲ್ಲಿ ಮುಖ್ಯ ಗರ್ಭಗೃಹಕ್ಕೆದುರಾಗಿ ನಂದಿ ವಿಗ್ರಹವನ್ನೂ ಅಲ್ಲಿ ಸ್ಥಾಪಿಸಲಾಗಿದೆ. ಪಶ್ಚಿಮ ದಿಕ್ಕಿನ ಪ್ರವೇಶದ್ವಾರದ ಎರಡೂ ಬದಿಯಲ್ಲಿ ಕಕ್ಷಾಸನಗಳಿವೆ. ಈ ತ್ರಿಕೂಟಾಚಲದ ಮೇಲೆ ಪಾರ್ವತಿದೇವಿ ಗರ್ಭಗೃಹದ ಮೇಲಿನ ಶಿಖರ ನಾಶಗೊಂಡಿದ್ದು ಉಳಿದೆರಡು ಗರ್ಭಗೃಹದ ಮೇಲಿನ ಶಿಖರಗಳು ದ್ರಾವಿಡ ಶೈಲಿಯದಾಗಿವೆ. ಈ ದೇವಾಲಯಕ್ಕೆ ಸೀಮೆಸುಣ್ಣ ಬಳಿದಿರುವ ಕಾರಣದಿಂದ ಮೂಲ ದೇವಾಲಯದ ನೈಜ ಸೌಂದರ್ಯವು ನಮಗೆ ಕಾಣಸಿಗದು. ಈ ತ್ರಿಕೂಟಾಚಲದ ರಚನೆ ಕ್ರಿ.ಶ. 11ನೇಯ ಶತಮಾನವೆಂಬುದಾಗಿ ತಿಳಿದು ಬರುತ್ತದೆ. ಗರ್ಭಗೃಹದ ಬಲಭಾಗದಲ್ಲಿಯ ಗೋಡೆಯಲ್ಲಿ ಒಂದು ಶಾಸನದ ಅವಶೇಷವಿದ್ದು ಅದಕ್ಕೆ ಬಣ್ಣ ಲೇಪನೆ ಮಾಡಿದ ಕಾರಣದಿಂದ ವಿವರ ಮಾಹಿತಿ ಓದಲು ಬರುವಂತಿಲ್ಲ. ಸಭಾಮಂಟಪದ ಮುಂಭಾಗದಲ್ಲಿ ಇಳಿಜಾರಾದ ಮುಂಜೂರು ಇದ್ದು, ಮಳೆನೀರು ದೇವಾಲಯದ ಹೊರಗೆ ಬೀಳುವ ವ್ಯವಸ್ಥೆ ರೂಪಿಸಲಾಗಿದೆ. ಐಹೊಳೆಯ ಗ್ರಾಮ ದೇವತೆಯಾಗಿ ಪೂಜೆಗೊಳ್ಳುತ್ತಿರುವ ಈ ದೇವಾಲಯವು ಇಲ್ಲಿ ನಡೆದ ತ್ರಿಕೂಟ ದೇವಾಲಯದ ಉದಾಹರಣೆಯಾಗಿ ನಿಂತಿದೆ.

**ದುರ್ಗಾದೇವಾಲಯ :**

ಐಹೊಳೆಯ ರಾಚನಿಕ ದೇವಾಲಯಗಳಲ್ಲಿ ಪ್ರಮುಖವಾದದ್ದು ಈ ದುರ್ಗಾದೇವಾಲಯ. ಗಜಪೃಷ್ಠಾಕಾರದ ತಲವಿನ್ಯಾಸ ಹೊಂದಿರುವ ಈ ದೇವಾಲಯ ಔತ್ತರೇಯ ರೀತಿಯ ಶಿಖರವನ್ನು ಹೊಂದಿರುವುದೊಂದು ವಿಶೇಷ. ಬ್ರಹದ್ವ್ಯಾಸದ (Apsidial type) ಚೈತ್ಯ ಗುಹಾಲಯ ಮಾದರಿಯಲ್ಲಿ ನಿರ್ಮಿತವಾಗಿರುವ ಇದರ ರಚನೆಯು ಅಪೂರ್ವದ್ದಾಗಿದೆ.



ದುರ್ಗಾದೇವಾಲಯದ ಊರ್ಧ್ವನೋಟ



ದುರ್ಗಾದೇವಾಲಯದ ತಲವಿನ್ಯಾಸ

ಕೋಟೆಯಿಂದ ಸುತ್ತುವರೆದ ಪ್ರಾಚೀನ ಆರ್ಯಪುರವನ್ನು (ಐಹೊಳೆಯನ್ನು) ಉತ್ತರ ದಿಕ್ಕಿನಿಂದ ಪ್ರವೇಶಿಸುತ್ತಿದ್ದಂತೆ ಅದರ ಆವರಣದಲ್ಲಿ ಅತ್ಯಂತ ಆಕರ್ಷಕವಾಗಿ ಕಾಣುವುದೇ ದುರ್ಗಾಗುಡಿ. ಈ ದೇವಾಲಯವು ಐಹೊಳೆಯನ್ನು ಆಳಿದ ಪೂರ್ವೀಯ ಅಡಳಿತಗಾರರು ನಿರ್ಮಿಸಿದ ಅಲ್ಲಿಯ ನೂರಾರು ದೇವಾಲಯಗಳಲ್ಲಿ ರತ್ನಪ್ರಾಯವಾದದ್ದು ಈ ದುರ್ಗಾದೇವಾಲಯ.

ವಿನ್ಯಾಸದಲ್ಲಿ ಗಜಪೃಷ್ಠಾಕೃತಿಯನ್ನು ಹೊಂದಿರುವ ಈ ದೇವಾಲಯವು ಇದು ಪಶ್ಚಿಮ ಭಾರತದಲ್ಲಿ ಅದಾಗಲೇ 2,3,4ನೇ ಶತಮಾನ-ಗಳಲ್ಲಿ ಗುಹಾಂತರ ದೇವಾಲಯಗಳಲ್ಲಿ ಅಜಂತಾ, ಕಾರ್ಲಾ, ಭಾಜಾ, ಭೇಡಸಾ, ಎಲ್ಲೋರಾಗಳಲ್ಲಿ ಕೊರೆಯಲಾದ ಬೌದ್ಧ ಸಂಪ್ರದಾಯದ ಚೈತ್ಯದ ಬೌದ್ಧ ಭವನಗಳ ವಿನ್ಯಾಸವನ್ನು ಆಧರಿಸಲಾಗಿದೆ. ಈ ತರಹದ ಚೈತ್ಯ ಭವನಗಳು ಬಾದಾಮಿ ಚಾಲುಕ್ಯರ ಸಮಯದಲ್ಲಿ ಕೆಂಗರಸುಗಲ್ಲು (Red Sand Stone)ಗಳಲ್ಲಿ ನಿರ್ಮಾಣಗೊಂಡುದು ಸಮೀಪದ ಮಹಾಕೂಟ, ಐಹೊಳೆಯಲ್ಲಿ ಇತ್ತೀಚೆಗೆ ಉತ್ಖನಿಸಲ್ಪಟ್ಟ (1985) ಕೇವಲ ತಳಪಾಯ ಕಾಣುವಂಥ ಇನ್ನೊಂದು ಗಜಪೃಷ್ಠಾಕೃತಿಯ ದೇವಾಲಯದ ಅವಶೇಷವಿರುವುದನ್ನು ಇಲ್ಲಿ ಉಲ್ಲೇಖಿಸಬಹುದು. (ಡಾ. ಎಸ್.ಕೆ.ಜೋಶಿ, ಉತ್ಖನನದ ಅನುಭವ, 1985).

ಈ ತರಹದ ಸ್ವತಂತ್ರವಾಗಿ ಬಿಡಿಕಲ್ಲುಗಳಿಂದ ಸ್ತರ ಸ್ತರಗಳಲ್ಲಿ ಮೇಲೇರುತ್ತಿರುವ ಚೈತ್ಯ ವಿನ್ಯಾಸದ ದೇವಸ್ಥಾನಗಳು ಬಾದಾಮಿ ಚಾಲುಕ್ಯರ ಸ್ವತಂತ್ರವಾದ ಹಾಗೂ ವೈಶಿಷ್ಟ್ಯಪೂರ್ಣ ರಾಚನಿಕ (Structural) ಕೊಡುಗೆಯಾಗಿದೆ. ಈ ಬಾದಾಮಿ ಚಾಲುಕ್ಯರ ಗಜಪೃಷ್ಠಾಕೃತಿಯ ದೇವಾಲಯಗಳು ರಾಚನಿಕ ಕೊಡುಗೆಯ ವೈಶಿಷ್ಟ್ಯವನ್ನು ಹೊಂದಿದ್ದರೆ ಪಶ್ಚಿಮ ಭಾರತದ ಮೇಲೆ ಹೆಸರಿಸಿದ ತಾಣಗಳಲ್ಲಿಯ ಚೈತ್ಯ ಗುಹಾಂತರ ದೇವಾಲಯಗಳು ಅಖಂಡ ಕಲ್ಲಿನಲ್ಲಿ ಕೊರೆದವುಗಳಾಗಿವೆ. ಇದು ಬಾದಾಮಿ ಚಾಲುಕ್ಯರ ಗುಹಾಂತರ ದೇವಾಲಯಗಳ ರಾಚನಿಕ ವೈಶಿಷ್ಟ್ಯತೆ ಎಂದು ಹೇಳಬಹುದು.

ಇನ್ನು ನೇರವಾಗಿ ಐಹೊಳೆಯ ದುರ್ಗಾ ದೇವಾಲಯದ ಬಗೆಗೆ ವಿವರಿಸುವುದಾದರೆ ಇದಕ್ಕೆ ದುರ್ಗಾ ದೇವಸ್ಥಾನ, (Durga Temple) ದುರ್ಗಾ ಗುಡಿ ಎಂತಲೂ ಕರೆಯಲಾಗುತ್ತಿರುವುದು ಸರ್ವ ವಿದಿತ. ಕೆಲವು ವಿದ್ವಾಂಸರು ಈ ದೇವಾಲಯವು ಐಹೊಳೆಯ ದುರ್ಗದ ಪಕ್ಕದಲ್ಲಿ (ದುರ್ಗ– ಕೋಟೆ) ಇರುವುದರಿಂದ ಇದಕ್ಕೆ "ದುರ್ಗಾ ಟೆಂಪಲ್" ಎಂಬಿತ್ಯಾದಿ ಹೆಸರುಗಳು ವಾಡಿಕೆಯಲ್ಲಿ ಬಂದಿರಲು ಸಾಕು ಎಂದು ಅಭಿಪ್ರಾಯ ಪಡುತ್ತಾರೆ. ಹಾಗೆ ನೋಡಿದಲ್ಲಿ ಈ ದೇವಾಲಯವೇನೂ ದುರ್ಗೆಗೆ ಅಥವಾ ಯಾವುದೇ ಶಕ್ತಿ ದೇವತೆಯ ಅವತಾರಕ್ಕೆ ಸಂಬಂಧಿಸಿಲ್ಲವೆಂಬುದನ್ನು ಇಲ್ಲಿ ಸ್ಪಷ್ಟವಾಗಿ ಹೇಳಬಹುದು. (Dr. R.S. Gupte, The Chalukya Art & Architecture)

ದುರ್ಗಾ ದೇವಾಲಯ



ಬಾದಾಮಿ ಚಾಲುಕ್ಯರು ಶಾಸನೋಕ್ತವಾಗಿ ತಮ್ಮನ್ನು ತಾವೇ ಪರಮ ಭಾಗವತರೆಂದು ವಿಷ್ಣು ಸಂಪ್ರದಾಯದವರೆಂದು ಕರೆದುಕೊಂಡಿರುವುದರಿಂದ ಬಾದಾಮಿ ಚಾಲುಕ್ಯರು ತಮ್ಮ ಆಳ್ವಿಕೆಯ ಪೂರ್ವಾರ್ಧದಲ್ಲಿ (ಕ್ರಿ.ಶ. 450–750ರವರೆಗೆ) ವಿಶೇಷವಾಗಿ ವೈಷ್ಣವ ಸಂಪ್ರದಾಯಕ್ಕೆ ತಮ್ಮನ್ನು ಅಳವಡಿಸಿಕೊಂಡಿದ್ದಾರೆ. ಕಾಲ ಕಳೆದಂತೆ ವೈಷ್ಣವ ಸಂಪ್ರದಾಯ ಹಾಗೂ ಶೈವ ಸಂಪ್ರದಾಯಗಳಿಗೆ ಸಮರ್ಪಿಸಿಕೊಂಡದ್ದು ಹಾಗೂ ಉತ್ತೇಜನ ನೀಡಿದ್ದು ಕಂಡು ಬರುತ್ತದೆ. ಹರಿಯ ಎದೆಯಲ್ಲಿ ಹರನನ್ನು, ಹರನ ಎದೆಯಲ್ಲಿ ಹರಿಯನ್ನು, ಸಿರಿಯ ಎದೆಯಲ್ಲಿ ಶಿವೆಯನ್ನು ಶಿವೆಯ ಎದೆಯಲ್ಲಿ ಸಿರಿಯನ್ನು ಕಂಡ ಅನುಭಾವಿಗಳಿವರು. ಇದನ್ನೇ ತಮ್ಮ ಶಿಲ್ಪ ಸಾಮ್ರಾಜ್ಯದಲ್ಲಿ ತೋರಿಸಿದ್ದಾರೆ. ಹೀಗಾಗಿ ಅವರ ಉತ್ತರಾರ್ಧ ಕಾಲಘಟ್ಟದಲ್ಲಿ ಹರನ ಆರಾಧನೆಯ ಮಂದಿರಗಳಾದ ವಿರೂಪಾಕ್ಷ, ಸಂಗಮೇಶ್ವರ, ಕಾಶಿ ವಿಶ್ವನಾಥ, ಜಂಬುಲಿಂಗೇಶ್ವರ, ಗಳಗನಾಥ ಮುಂತಾದ ಉತ್ಕೃಷ್ಟ ವಾಸ್ತು ಮಂದಿರಗಳನ್ನು ಪಟ್ಟದಕಲ್ಲಿನಲ್ಲಿ ಕಾಣಬಹುದು. ಇದು ಹರಿಯಿಂದ ಹರನ ಕಡೆಗೆ ಸಾಗಿದ ಪ್ರಕ್ರಿಯೆ.

ಐಹೊಳೆ ಪರಿಸರದಲ್ಲಿಯ ಬಹಳಷ್ಟು ದೇವಾಲಯಗಳು ಸೂರ್ಯ ನಾರಾಯಣ ದೇವಾಲಯಗಳೇ ಎಂದು ದೇವಾಲಯಗಳ ಹಿಂಗಡೆ ಕೊರೆಯಲ್ಪಟ್ಟ ಸಪ್ತಾಶ್ವಗಳಿಂದ ಎಳೆಯಲ್ಪಟ್ಟ ಸೂರ್ಯನಾರಾಯಣನ ರಥ ಚಿತ್ರಗಳಿಂದ ಚಿತ್ರಿಸಲ್ಪಟ್ಟಿದೆ. (ಡಾ. ಎಸ್.ಆರ್. ರಾವ್, ಅಭಿಪ್ರಾಯ). ಆದರೆ ಈ ದೇವಾಲಯದಂಥ ಮನಮೋಹಕವಾದ ಸುಂದರ ದೇವಾಲಯವನ್ನು ವೈಷ್ಣವ ಸಂಪ್ರದಾಯಕ್ಕೆ ನೀಡಿದ್ದು ಬಾದಾಮಿ ಚಾಲುಕ್ಯರ ದೈವ ಮನೋ ವೈಶಾಲ್ಯತೆಯನ್ನು ಎತ್ತಿ ತೋರಿಸುತ್ತದೆ.

**ವಾಸ್ತು ವಿಶೇಷ:** ದುರ್ಗಾದೇವಾಲಯ ಈಗಾಗಲೇ ಹೇಳಿದಂತೆ ವಿನ್ಯಾಸದಲ್ಲಿ ಗಜಪೃಷ್ಠಾಕೃತಿಯನ್ನು ಹೊಂದಿದ್ದು ಗರ್ಭಗೃಹದ ಮೇಲ್ಗಡೆ ನಾಗರಶೈಲಿಯ ಶಿಖರವಿನ್ಯಾಸ (ಬಿಲ್ಲಿನಾಕಾರದ)ವೂ ಎತ್ತರದ ಅಧಿಷ್ಠಾನದ ಮೇಲೆ ಕಟ್ಟಲ್ಪಟ್ಟ ರಚನೆಯಾಗಿದೆ. ಈ ದೇವಾಲಯವು ಪೂರ್ವ ದಿಕ್ಕಿನಲ್ಲಿ ಮುಖಮಾಡಿದ್ದು, ದಕ್ಷಿಣ ಹಾಗೂ ಉತ್ತರ ದಿಕ್ಕುಗಳಲ್ಲಿ ಕಟ್ಟಿದ ಸೋಪಾನಗಳ ಮೂಲಕ ಜಗುಲಿಯನ್ನೇರಿ ಮುಖ ಮಂಟಪದ ಪ್ರವೇಶ ಮಾಡಬಹುದು.


ಅಲಂಕಾರಿಕ ಕಂಬ

ಈ ದೇವಾಲಯವು ತನ್ನ ವಿನ್ಯಾಸದಲ್ಲಿ ಮುಖಮಂಟಪ, ಸಭಾ ಮಂಟಪ, ಗರ್ಭಗೃಹ, ಪ್ರದಕ್ಷಿಣಾ ಪಥಗಳಿಂದ ಕೂಡಿದೆ. ಇಲ್ಲಿ ಇನ್ನೊಂದು ಆಕರ್ಷಕ ವಿನ್ಯಾಸದ ಅಂಗವೆಂದರೆ ಗುಡಿಯ ಬಾಹ್ಯದಲ್ಲಿ ಸುತ್ತುವರೆದ ಗಜಪೃಷ್ಠದಂತೆ ಕಾಣುವ ಕಂಭಗಳ ಸಾಲು. ಈ ಅಂಗಗಳು ದೇವಾಲಯಕ್ಕೆ ಅತ್ಯಂತ ವಿಶೇಷ ಮೆರುಗು ಹಾಗೂ ದೈವ ಗಾಂಭಿರ್ಯವನ್ನೊದಗಿಸಿವೆ.

ದುರ್ಗಾದೇವಾಲಯದ ಸೌಂದರ್ಯವನ್ನು ಹೆಚ್ಚಿಸಿದ ಕಂಭಗಳ ಸಾಲುಗಳ ಬಗೆಗೆ ಇಲ್ಲಿ ವಿವರಿಸಲೇಬೇಕು. ಬಾಹ್ಯ ಪ್ರದಕ್ಷಿಣಾ ಪಥದ ಅಂಚಿನಲ್ಲಿ ನಿಂತ ಈ ಕಂಭಗಳು ಪರಚ್ಛೇದದಲ್ಲಿ ಚೌಕಾಗಿದ್ದು, ದೃಢತೆ ಹಾಗೂ ವಿಸ್ತಾರ, ಸೌಂದರ್ಯದಲ್ಲಿ ಘನತೆಯನ್ನು ಹೊಂದಿವೆ. ಈ ಕಂಭಗಳು ತಮ್ಮ ಅಧಿಷ್ಠಾನದಿಂದ ಹಿಡಿದು ಮೇಲ್ಗಡೆಯ ಬೋದಿನವರೆಗೂ ಇಂಚು ಇಂಚುಗಳಲ್ಲಿ ಮೃದುಲತೆಯನ್ನು ಹೊಂದಿವೆ. ಕಂಭಗಳ ತಳದಲ್ಲಿ ಅಲಂಕಾರಿಕ ಪಟ್ಟಿಕೆಗಳಿದ್ದು, ಅವು ಮೇಲೇರಿದಂತೆ ವಿವಿಧ ಸ್ತರಗಳಲ್ಲಿ ಮೋಹಕ ಪುಷ್ಪಾಲಂಕಾರಗಳಿಂದಲೂ ಆಕರ್ಷಕ ಮೋಹಕ ಮಿಥುನ ಜೋಡಿಗಳಿಂದ ನೋಡಿದಾಗ ನೋಡುಗರ ಮನಸ್ಸನ್ನು ವಿಹ್ವಲಗೊಳಿಸುತ್ತದೆ.

ಇನ್ನು ದೇವಾಲಯದಲ್ಲಿ ಆಮಂತ್ರಿಸುವ ಮುಖ ಮಂಟಪವು ನಾಲ್ಕು ಬೃಹತ್ ಕಂಭಗಳಿಂದ ಕೂಡಿದ್ದು ಮೇಲಣ ಛತ್ತನ್ನು ಗಟ್ಟಿ ಮುಟ್ಟಾಗಿ ಹಿಡಿದಿವೆ. ವಿಶೇಷವಾದ ಈ ಕಂಬಗಳು ಸೌಂದರ್ಯದ ಅಂಗಸೌಷ್ಟವಾದ ಮಿಥುನಗಳನ್ನು ಹೊಂದಿದ್ದರೂ ಅವುಗಳ ಗಟ್ಟಿತನ ಹಾಗೂ ಕ್ಷೇತ್ರ ವ್ಯಾಪಕತೆ ಬಗ್ಗೆಯೂ ಅತ್ಯಂತ ಭಾರವಾದ ದಪ್ಪ ಕಲ್ಲುಗಳಿಂದ ಕೂಡಿದ ಛತ್ತಿನ ವಿಸ್ತಾರವನ್ನು ಎತ್ತಿ ಹಿಡಿಯುವ ಶಕ್ತಿಯನ್ನು ಇವುಗಳಿಗೆ ನೀಡಿದ ಚಾಲುಕ್ಯ ಸ್ಥಪತಿಗಳ ಪ್ರಯತ್ನ ಅವರ್ಣನೀಯ.

ದುರ್ಗಾದೇವಾಲಯದ ಮುಖಮಂಟಪದಿಂದ ಮುಂದುವರೆದಂತೆ ಸಭಾಂಗಣದ ಪ್ರವೇಶದ್ವಾರವು ದೊರೆಯುತ್ತದೆ. ಈ ದ್ವಾರವೂ ಕೂಡಾ ಅಲಂಕೃತ ದ್ವಾರ ಪಟ್ಟಿಕೆಗಳಿಂದ ಚೌಕಟ್ಟಿನಲ್ಲಿ ಕೂಡಿದ್ದು ಇದರ ಭಾಗದ ತಲೆಪಟ್ಟಿಕೆಯಲ್ಲಿ ಆಕರ್ಷಕ ಗರುಡನಿದ್ದು ಆತನ ಎಡ ಹಾಗೂ ಬಲಭಾಗದಲ್ಲಿ ವಿನೀತರಾಗಿ ಕೈಮುಗಿದ ನಾಗಪ್ರತಿಮೆಗಳಿವೆ. ಈ ನಾಗಗಳು ದ್ವಾರದ ಅಲಂಕರಣವನ್ನು ವೃದ್ಧಿಸಿವೆ. ಈ ದ್ವಾರಬಂಧದ ಹೆಚ್ಚಿನ ಸೌಂದರ್ಯೀಕರಣದ ಬಗ್ಗೆ ಶಿಲ್ಪಿಯು ತನ್ನ ಕೌಶಲ್ಯತೆಯನ್ನು ತೋರಿಸುತ್ತಾ ದ್ವಾರ ಪಟ್ಟಿಕೆಯ ಎಡ ಬಲಗಳ ಪಟ್ಟಿಕೆಗಳಿಂದ ಕೆಳಗಿಳಿದಂತೆ ಜಲದೇವತೆಗಳಾದ ಗಂಗಾ, ಯಮುನೆಯರ ವಿಗ್ರಹಗಳನ್ನು ಮೂಲ ಸ್ತರದಲ್ಲಿ ಕೆತ್ತಲಾಗಿದೆ.


ಪ್ರವೇಶದ್ವಾರ

ದುರ್ಗಾ ದೇವಾಲಯುದ ಬಾಗಿಲು 3'11" ಅಗಲಳತೆಯುದಾಗಿದ್ದು ಪ್ರವೇಶದ್ವಾರದಿಂದ ಒಳಗಡೆ ಕಾಲಿರಿಸಿದಂತೆ, ವಿಶಾಲವಾದ ಸಭಾಮಂಟಪವನ್ನು ಕಾಣುತ್ತೇವೆ. ಈ ಸಭಾಮಂಟಪವು ಕಂಭಗಳ ಎರಡು ಸಾಲುಗಳುಳ್ಳ ಮುಖ್ಯ ಅಂಕಣವನ್ನು ಹಾಗೂ ಅದರ ಎಡ ಬಲ ಬದಿಗಳಲ್ಲಿ ವಿನ್ಯಾಸಕ್ಕೆ ಅವಕಾಶ ನೀಡಿದ ಉಪ ಅಂಕಣಗಳನ್ನು ನೋಡಬಹುದು. ಮುಖ್ಯ ಸಭಾಭವನವು 20'2.5" ಅಗಲ 24'10.5" ಉದ್ದಳತೆಯಲ್ಲಿದ್ದು ಈ ಸಭಾ ಮಂಟಪದ ಕಂಭಗಳು 8' ಅಂತರದಲ್ಲಿ ನಿಲ್ಲಿಸಲ್ಪಟ್ಟಿವೆ. ಈ ಸಭಾಂಗಣದಲ್ಲಿ ಗರ್ಭಗುಡಿಯನ್ನು ಸುತ್ತುವರೆದ ಪ್ರದಕ್ಷಿಣಾಪಥ ಹೊಂದಿದೆ. ಇಲ್ಲಿನ ಕಂಭಗಳು ಅತ್ಯಂತ ಸದೃಢವಾಗಿದ್ದು ಬಾದಾಮಿ ಚಾಲುಕ್ಯರ ಕಂಭಗಳ ವೈಶಿಷ್ಟ್ಯವನ್ನು ಬಿಂಬಿಸುತ್ತವೆ. ಈ ಕಂಭಗಳ ಸದೃಢತೆಯನ್ನು ಬಾದಾಮಿ ವೈಷ್ಣವ 3ನೇ ಗುಹಾಂತರ ದೇವಾಲಯದಲ್ಲಿ ಪ್ರಯೋಗಿಸಿದ್ದನ್ನು ಕಾಣಲು ಸಾಧ್ಯ. ಹಾಗೆಯೇ ಮುಂದುವರೆದಂತೆ ದೇವಾಲಯದ ಮುಖ್ಯ ಗರ್ಭಗೃಹ (10'5" ಉದ್ದ, 9' ಅಗಲಳತೆ) ಗರ್ಭಗೃಹದ ಬಾಗಿಲುವಾಡದ ತಲೆಪಟ್ಟಿಕೆಯಲ್ಲಿ ಗರುಡ ಬಂಧವನ್ನು ಉಪಯೋಗಿಸಲಾಗಿದೆ. ಈ ಮೇಲೆ ವಿವರಿಸಿದ ಎರಡೂ ದ್ವಾರಬಂಧಗಳ ತಲೆಪಟ್ಟಿಕೆಗಳಲ್ಲಿ ವಿಶೇಷವಾಗಿ ಗರುಡನನ್ನು ಉಪಯೋಗಿಸಿರುವುದರಿಂದ ಈ ದೇವಾಲಯವು ವಿಷ್ಣು ಸಂಪ್ರದಾಯವಾಗಿರಲು ಸಾಕು. ಈ ದೇವಾಲಯದ ಹೊರಗಣ ಪ್ರದಕ್ಷಿಣಾ ಪಥದ ಅಂಚಿನ ಮೇಲೆ ಗಜಪೃಷ್ಠಾಕಾರ ವಿನ್ಯಾಸದ ಬಾಹ್ಯ ರೇಖೆಯಲ್ಲಿ ನಿಂತ 29 ಕಂಭಗಳನ್ನು ಕಾಣಬಹುದು. ದೇವಾಲಯದ ಅಂಚುಗೋಡೆ (Perpet Wall)ಗೆ ಹೊಂದಿದ ಪಟ್ಟಿಗಳ ಪಕ್ಕದಲ್ಲಿ ಈ ಕಂಭಗಳು ಸಂಯೋಜನೆಗೊಂಡಿವೆ. ಈ ಕಂಭಗಳ ಮೈಮೇಲೆ ಯಾವುದೇ ಸುಳುವುಗಳಿಲ್ಲ. ಆದರೂ ಕೂಡಾ ಮೃದುಲತೆಯ ಅಂಗ ಸೌಂದರ್ಯದಿಂದ ಅವು ಮನಸೆಳೆಯುತ್ತವೆ. ಈ ಕಂಭಗಳ ಬೋದುಗಳು ಪ್ರತಿಯೊಂದಕ್ಕೂ ಎರಡು ಇದ್ದು ಅವು ಅಷ್ಟೇ ಅಲಂಕೃತವಾಗಿಲ್ಲ. ಈ ಅಂಚುಗೋಡೆಗಳ ಪಟ್ಟಿಕೆಗಳಲ್ಲಿ ಕೆಲವು ಕುಬ್ಜ ಗಣಗಳೂ, ಯಾಳಿಗಳ ಸಾಲುಗಳಿವೆ. ಮೇಲ್ಭಾಗದಲ್ಲಿ ಸಮಾನ ಅಂತರದಲ್ಲಿ ಕೂಡಿಸಿದ ಚೈತ್ಯಗಳ ಗೂಡಿವೆ.

ದುರ್ಗಾದೇವಾಲಯದ ಬಾಹ್ಯ ಪ್ರದಕ್ಷಿಣಾಪಥದ ಮುಖ್ಯ ಕಟ್ಟಡದ ಸುತ್ತುವರೆದ ಹೊರಗೋಡೆಯಲ್ಲಿ ಅಲ್ಲಲ್ಲಿ ಸ್ಥಳಾವಕಾಶ ಮಾಡಿದ ಚೌಕಾಕಾರದ ಸಾಕಷ್ಟು ಉದ್ದಗಲಳತೆಯ ಮಾಡುಗಳಿವೆ. ಅವುಗಳಲ್ಲಿ ಅತ್ಯಂತ ಜೀವಕಳೆ ತುಂಬಿದ, ಶಾರೀರಿಕ ಪ್ರಮಾಣ ಬದ್ಧವಾದ ನಯವಾದ ಕೆಲವು ಶಿಲ್ಪಗಳಿವೆ. ಈ ಸುಂದರ ಮೂರ್ತಿಗಳೆಂದರೆ ನರಸಿಂಹ, ವೃಷಭವಾಹನ ಶಿವ, ಮಹಿಷಾಸುರ ಮರ್ಧಿನಿ, ವರಾಹ, ಹರಿಹರ, ವಿಷ್ಣು (ಗರುಡ ವಾಹನ) ಶಿಲ್ಪಗಳಿವೆ.

ಈ ದೇವಾಲಯುದ ಮೇಲ್ಛಾವಣಿಯು ವಿಶೇಷತೆಯುನ್ನು ಹೊಂದಿದ್ದಾಗಿದೆ. ಚಾಲುಕ್ಯ ದೇವಾಲಯಗಳ ಛಾವಣಿಯ ಕೊಡುಗೆಯಲ್ಲಿಯೇ ಇದು ವಿಶೇಷ ಪರಿಕಲ್ಪನೆಯನ್ನು ಹೊಂದಿದ್ದಾಗಿದೆ. ಛಾವಣಿಗೆ ಉಪಯೋಗಿಸಿದ ಹಾಸುಗಲ್ಲುಗಳು ಸಾಕಷ್ಟು ದಪ್ಪವಾಗಿದ್ದು ಉದ್ದಗಲಳತೆಯನ್ನೂ ಹೊಂದಿವೆ. ಈ ಛಾವಣಿಯು ನಾಲ್ಕು ಸ್ತರಗಳಲ್ಲಿ ಗುಡಿಯ ಸುತ್ತಲೂ ಆವರಿಸಿಕೊಂಡಿದೆ. ಅತ್ಯಂತ ಕೆಳಗಿನ ಛಾವಣಿಯು ಅಂಚಿನಲ್ಲಿ ಕಪೋತ ಶೈಲಿಯುನ್ನು ಹೊಂದಿಕೊಂಡು ಸುತ್ತಲಿನ ಗಜಪೃಷ್ಠಾಕೃತಿಯ ಅಂಕಣಕ್ಕೆ ಹೊದಿಕೆಯನ್ನು ಮಾಡಿದೆ. ತದನಂತರ ಇದರ ಮೇಲ್ಗಡೆಯ ಛಾವಣಿಯ ಸುತ್ತಲೂ ದಪ್ಪವಾದ ಕಟ್ಟೆಯನ್ನು ಹೊಂದಿದ್ದು ಅದು ಮಂಟಪ, ಸಭಾಂಗಣದ ಆವರಣವನ್ನು ಆಚ್ಛಾದಿಸುತ್ತದೆ. ಇನ್ನು ಮೂರನೇಯ ಹಾಗೂ ನಾಲ್ಕನೆಯ ಮೇಲ್ಛಾವಣಿಯ ಸ್ತರಗಳು ಸಪಾಟಾಗಿದ್ದು ಇವು ಮುಖ್ಯ ಸಭಾಂಗಣ ಹಾಗೂ ಗರ್ಭಗೃಹಗಳನ್ನಾವರಿಸಿವೆ. ಅಂತಿಮವಾಗಿ ಗರ್ಭಗೃಹದ ಮೇಲ್ಗಡೆ ನಾಗರಶೈಲಿಯ ಅಮಲಕಗಳಿಂದ ಕೂಡಿದ ಶಿಖರವಿದೆ. ಅದಕ್ಕೆ ಕಳಸಪ್ರಾಯವಾದ ದೊಡ್ಡ ಅಮಲಕವು ಕಾಲಾಂತರದಲ್ಲಿ ಜರಿದು ಕೆಳಗೆ ಬಿದ್ದುದನ್ನು ಕಾಣಬಹುದು. ಟನ್ನುಗಟ್ಟಲೇ ಭಾರವಾದ ಈ ಶಿಲಾ ಅಮಲಕವನ್ನು ಪುನರಪಿ ಶಿಖರದ ಮೇಲೆ ಕೂಡಿಸಲು ಭಾರತೀಯ ಪುರಾತತ್ವ ಸರ್ವೇಕ್ಷಣವು ಪ್ರಯತ್ನ ಕೈಗೊಳ್ಳುತ್ತಲಿದೆ. ಈ ರೀತಿ ಅದರ ಪ್ರಯತ್ನವು ಸಾಫಲ್ಯವಾದರೆ ಅದೊಂದು ಜೀರ್ಣೋದ್ಧಾರದ ಅಭಿಯಾಂತ್ರಿಕತೆಯ ಧೀರ ಗಾಥೆಯಾಗುತ್ತದೆ.



ಗರ್ಭಗೃಹದ ದ್ವಾರ

ಅಂತತಃ ಈ ಪ್ರಾಚೀನ ಆರ್ಯಪುರದ (ಐಹೊಳೆ) ಒಡಲಿನಲ್ಲಿ ಹಾಗೂ ಪರಿಸರದಲ್ಲಿ ನಿರ್ಮಿಸಿದ ಸುಮಾರು ನೂರಾರು ದೇವಾಲಯಗಳಲ್ಲಿ ಬಾದಾಮಿ ಚಾಲುಕ್ಯರು ವಿವಿಧ ವಿನ್ಯಾಸಗಳಲ್ಲಿ ವೈವಿಧ್ಯ ದೇವಾಲಯಗಳ ಪ್ರಯೋಗ ಮಾಡಿದ್ದಾರೆ. ವಿದ್ವಾಂಸರು ಹೇಳುವಂತೆ ಈ ತಾಣವು ಭಾರತೀಯ ದೇವಾಲಯಗಳ ಪ್ರಾರಂಭಿಕ ತೂಗುವ ತೊಟ್ಟಿಲವೂ ಹೌದು. ದರ್ಶಕನಾಗಲಿ ಸಂಶೋಧಕನಾಗಲಿ ದೇವಾಲಯಗಳ ವಿನ್ಯಾಸದ ಬೆಳವಣಿಗೆಯನ್ನು ಇಲ್ಲಿ ಹೆಜ್ಜೆ ಹೆಜ್ಜೆಗೂ ಅಲ್ಲಲ್ಲಿ ಚೆಲ್ಲುವರೆದ ದೇವಾಲಯಗಳಲ್ಲಿ ಕಾಣುತ್ತಾನೆ. ಈ ಆರ್ಯಪುರವು ಬಾದಾಮಿ ಚಾಲುಕ್ಯರ ಕಾಲಘಟ್ಟದ ಪೂರ್ವಾರ್ಧದಲ್ಲಿ

ರಾಜಧಾನಿಯಾಗಿಯೂ ಮೆರೆದಿರುವುದರಿಂದ ಬಹಳಷ್ಟು ಸಂಖ್ಯೆಯಲ್ಲಿ ಈ ಪರಿಸರದಲ್ಲಿ ವಾಸ್ತುಶಿಲ್ಪಗಳ ಹಾಗೂ ದೇವಾಲಯಗಳ ನಿರ್ಮಾಣದ ಬಗ್ಗೆ ತೀವ್ರ ಕಾರ್ಯೋನ್ಮುಖಗೊಳ್ಳಲು ಸಾಧ್ಯವಾಯಿತೆಂದು ಹೇಳಬಹುದು. ಹೀಗಾಗಿ ಐಹೊಳೆ ತಾಣವು ಇಡಿಯಾಗಿ ನೋಡಿದರೂ ಇದೊಂದು ಹಿಂದೂ ದೇವಾಲಯಗಳ ಪ್ರಯೋಗಶಾಲೆ ಎನ್ನುವುದು ಸತ್ಯಸ್ಯ ಸತ್ಯ ಎಂದು ನಾವು ಹೇಳಿದರೆ ಯಾವುದೇ ಉತ್ಪ್ರೇಕ್ಷೆಯಿಲ್ಲ.

ದುರ್ಗಾದೇವಾಲಯವು ವಾಸ್ತು ವಿನ್ಯಾಸ ದೃಷ್ಟಿಯಲ್ಲಿ ತುಂಬಾ ಮಹತ್ವ ಪಡೆದುಕೊಂಡಿರುವ ದೇವಾಲಯ. ಇಲ್ಲಿಯ ತಲವಿನ್ಯಾಸವು ಚೌಕಾಕಾರದ್ದಾಗಿರುವುದರಿಂದ (ಬಿಲ್ಲನ್ನು ಹೋಲುವ) ಈ ದೇವಾಲಯ ಹಾಗೂ ಸಮೀಪದ ಚಿಕ್ಕ ಮಹಾಕೂಟದಲ್ಲಿ ಇರುವ ದೇವಾಲಯಗಳು ಗಜಪೃಷ್ಠಾಕೃತಿಯ ಹಿಂಭಾಗ ಹೊಂದಿರುತ್ತವೆ. ಆಯತಾಕಾರದ ಸಭಾಮಂಟಪ ಅದಕ್ಕೆ ಹೊಂದಿಕೊಂಡಿರುವ ಅರ್ಧ ವರ್ತುಳಾಕಾರದ ವಿನ್ಯಾಸದಲ್ಲಿ ಇದು ನಿಂತ ಆನೆಯಂತೆ ಕಾಣುವುದಾದ್ದರಿಂದ "ಗಜಪೃಷ್ಠ" ಆಕೃತಿಯದೆಂದು ಹೆಸರಿಸಿಕೊಂಡಿದೆ. ಇಲ್ಲಿರುವ ಶಾಸನದಂತೆ ಇದು ಇಮ್ಮಡಿ ವಿಕ್ರಮಾದಿತ್ಯನ ಕಾಲದ ರಚನೆಯಾಗಿದ್ದು ಈ ದೇವಾಲಯವು "ಆದಿತ್ಯಭಟರಿಗೆ (ಸೂರ್ಯದೇವತೆ) ಮುಡುಪಾದದ್ದೆಂದು ಸಂಶೋಧಕರು ಅಭಿಪ್ರಾಯ ಪಡುತ್ತಾರೆ.

**ದುರ್ಗಾ ದೇವಾಲಯದ ಪ್ರೇಕ್ಷಣೀಯ ವಿಗ್ರಹಗಳು**


ಹರಿಹರ


ಮಹಿಷಾಸುರಮರ್ದಿನಿ


ನಾರಸಿಂಹ


ವರಾಹ

ದುರ್ಗಾದೇವಾಲಯದ ನಿರ್ಮಾಣಕ್ಕೆ ಪ್ರೋತ್ಸಾಹಿಸಿದವನು ಕೊಮರಸಿಂಗನೆಂದೂ ಇದು ಮೂಲತ: ಸೂರ್ಯದೇವಾಲಯವೆಂತಲೂ ಚರಿತ್ರೆಯಿಂದ ತಿಳಿದು ಬರುತ್ತದೆ. "ಇದರಲ್ಲಿ ಹಲವು ವೈಶಿಷ್ಟ್ಯಗಳಿವೆ. ಒಳಗಡೆ ಚೌಕಾಕಾರದ ಗೂಢ ಮಂಟಪದಲ್ಲಿರಿಸಿರುವ ಅರ್ಧ ವೃತ್ತಾಕೃತಿಯ ಸಾಂಧಾರ ಗರ್ಭಗೃಹ, ಗೂಢ ಮಂಟಪದ ಮುಂದುಗಡೆ ಕಕ್ಷಾಸನ ಸಹಿತ ಮುಖ ಮಂಟಪವಿದೆ. ಈ ಇಡೀ ಸಮೂಹವು ಎತ್ತರವಾದ ಬಾಹ್ಯರೂಪದಲ್ಲಿ ಅದೇ ಆಕಾರಕ್ಕೆ ಬದ್ಧವಾಗಿರುವ ಪಂಜರದಂತಿರುವ ರಚನೆಯೊಳಗೆ ಇರಿಸಲ್ಪಟ್ಟಿರುವಂತೆ ಭಾಸವಾಗುತ್ತದೆ. ಮುಖಮಂಟಪದ ಮಟ್ಟಕ್ಕೇರಲು ಎರಡೂ ಪಾರ್ಶ್ವಗಳಿಂದ ಮೆಟ್ಟಿಲುಗಳಿವೆ. ಗೂಢ ಮಂಟಪದ ಮಧ್ಯ ಭಾವಣಿ ಸಮತಟ್ಟಾಗಿದೆ. ಪಾರ್ಶ್ವಗಳಿಗೆ ಸುತ್ತಲೂ ಇಳಿಜಾರಾದ ಭಾವಣಿಯಿದೆ. ವಾಸ್ತುಗ್ರಂಥಗಳ ಪ್ರಕಾರ ಚೌಕಾಕಾರದ ಗುಡಿಗಳಿಗೆ ಅದೇ ಆಕಾರದ ಇಲ್ಲವೆ

ವೃತ್ತಾಕಾರದ ಶಿಖರವಿರಬೇಕು. ಇಲ್ಲಿ ರೇಖಾ ಶಿಖರವನ್ನು ಮಾಡಿರುವುದು ಪ್ರಯೋಗವೆಂದು ಭಾವಿಸಬಹುದು". (ಪ್ರೊ. ಶ್ರೀನಿವಾಸ ಪಾಡಿಗಾರ, ಬಾದಾಮಿ ಚಾಲುಕ್ಯರ ಶಾಸನಗಳು, ವಾಸ್ತು ಮತ್ತು ಶಿಲ್ಪಕಲೆ – ಪುಟ–52).

**ಬಾದಾಮಿಯ ರಾಚನಿಕ ದೇವಾಲಯಗಳು:**

ಬಾದಾಮಿ ಎಂದೊಡನೆಯೇ ನಮ್ಮ ಕಣ್ಣೆದುರಿನಲ್ಲಿ ಸುಂದರವಾದ ಗುಹಾಂತರ ದೇವಾಲಯಗಳೇ ಸ್ಮರಣೆಗೆ ಬರುತ್ತವೆ. ಅವುಗಳಿಗಿಂತಲೂ ಕಲಾತ್ಮಕವಾದ ಕೆಲವು ರಾಚನಿಕ ದೇವಾಲಯಗಳೂ ಬಾದಾಮಿಯ ಸಾಂಸ್ಕೃತಿಕ ಹಿರಿಮೆಯನ್ನೂ ಹೆಚ್ಚಿಸಿವೆ ಎಂಬುದು ಕೆಲವರಿಗೆ ಪರಿಚಯವಿಲ್ಲ. ಬಾದಾಮಿಯ ವಾಸ್ತು ವೈಭವವನ್ನು ಇನ್ನಷ್ಟು ಹೆಚ್ಚಿಸಿರುವ ಈ ವಾಸ್ತು ಶಿಲ್ಪಗಳಲ್ಲಿಯ ಕೆಲವು ಪ್ರಯೋಗಗಳು, ವಿನ್ಯಾಸ ವೈವಿಧ್ಯತೆಗಳು ಚಾಲುಕ್ಯ ಸ್ಥಪತಿಗಳ ಕಲ್ಪಕ ಶಕ್ತಿಯನ್ನು ಎತ್ತಿತೋರಿಸುತ್ತವೆ.

"ಬಾದಾಮಿಯಲ್ಲಿ ರಣರಾಗನ ಕಾಲದಿಂದಲೇ ರಾಚನಿಕ ದೇವಾಲಯಗಳ ನಿರ್ಮಾಣಕಾರ್ಯ ಆಗಿರಬಹುದೆಂದು ಡಾ. ಶೀಲಾಕಾಂತ ಪತ್ತಾರ ಅಭಿಪ್ರಾಯ ಪಡುತ್ತಾರೆ. ಬಾದಾಮಿಯಲ್ಲಿ ರಚನೆಗೊಂಡಿರುವ ಮಾಲೆಗಿತ್ತಿ ಶಿವಾಲಯ, ಮೇಲಿನ ಶಿವಾಲಯ, ಜಂಬುಲಿಂಗ ದೇವಸ್ಥಾನ ಹಾಗೂ ಭೂತನಾಥ ದೇವಾಲಯಗಳು ವಿವಿಧ ತಲವಿನ್ಯಾಸ ಪ್ರಯೋಗ ಹಾಗೂ ವಾಸ್ತು ವೈವಿಧ್ಯತೆಯ ಕಾರಣದಿಂದಾಗಿ ಪ್ರೇಕ್ಷಣೀಯವೆನಿಸುತ್ತದೆ.

ಚಾಲುಕ್ಯರ ಆಡಳಿತದ ಪ್ರಾರಂಭ ಕಾಲದಲ್ಲಿ ಹೆಚ್ಚಾಗಿ ಗುಹಾಂತರ ದೇವಾಲಯಗಳನ್ನೇ ನಿರ್ಮಿಸಿದ ಸ್ಥಪತಿಗಳು ನಂತರದಲ್ಲಿ ಅದ್ಭುತ ವಿನ್ಯಾಸಗಳನ್ನು ಹೊಂದಿದ ರಾಚನಿಕ ದೇವಾಲಯಗಳನ್ನು ಬಾದಾಮಿ, ಮಹಾಕೂಟ, ಐಹೊಳೆ, ಪಟ್ಟದಕಲ್ಲುಗಳಲ್ಲಿ ನಿರ್ಮಿತಿಗಳನ್ನು ಮಾಡಿ ತಮ್ಮಲ್ಲಿಯ ಕಲಾ ಜಾಣ್ಮೆಯ ಪರಿಚಯ ಮಾಡಿಕೊಟ್ಟಿದ್ದಾರೆ. ಬಾದಾಮಿಯ ಪರಿಸರದಲ್ಲಿ ಕೆಲವೇ ದೇವಾಲಯಗಳನ್ನು ರಚನೆ ಮಾಡಿದ್ದರೂ ಅವುಗಳಲ್ಲಿಯ ವಿವಿಧ ಪ್ರಯೋಗಗಳು ಕಲಾಭ್ಯಾಸಿಗಳಿಗೆ ಅಪೂರ್ವವಾದವುಗಳಾಗಿವೆಂಬುದನ್ನು ನಾವು ಮರೆಯುವ ಹಾಗಿಲ್ಲ.

**ಮಾಲೆಗಿತ್ತಿ ದೇವಾಲಯ :**

ಬಾದಾಮಿಯಲ್ಲಿನ ಪ್ರೇಕ್ಷಣೀಯ ದೇವಾಲಯಗಳಲ್ಲಿ ಒಂದಾಗಿರುವ ಮಾಲೆಗಿತ್ತಿ ದೇವಾಲಯವು ಉತ್ತರಕಲ್‌ಬೆಟ್ಟದ ಪಶ್ಚಿಮ ತುದಿಯಲ್ಲಿರುವ ಬೃಹತ್ ಬಂಡೆಯ ಮೇಲೆ ನಿರ್ಮಾಣಗೊಂಡಿರುತ್ತವೆ. ಪೂರ್ವಾಭಿಮುಖವಾಗಿ ನಿರ್ಮಾಣಗೊಂಡ ಈ ದೇವಾಲಯವು ಹೊಡೆದ ಕಲ್ಲುಗಳಿಂದ ರಚನೆಗೊಂಡಿದೆ. ಇದೊಂದು ನಿರಂಧಾರ ಶೈಲಿಯ ದೇವಾಲಯವಾಗಿದ್ದು, ಒಂದು ಮುಖಮಂಟಪ, ಗೂಢಮಂಟಪ, ಅಂತರಾಳ ಹಾಗೂ ಗರ್ಭಗೃಹ ಹೊಂದಿದೆ. ಈ ರಾಚನಿಕ ದೇವಾಲಯದ ಅಧಿಷ್ಠಾನವು ಉಪಾನ, ಪದ್ಮ, ಕುಮುದ, ಕಂಠ, ಕಪೋತ, ಮಕರಪಟ್ಟಿಕಾ ಪದ್ಮವೇದಿ ಮಡಿಕೆಗಳಿಂದ ಕೂಡಿದ್ದಾಗಿದೆ.



ಮಾಲೆಗಿತ್ತಿ ದೇವಾಲಯ

ಕುಮುದವು ವೃತ್ತಾಕಾರದಲ್ಲಿದ್ದು ಅದರ ಮುಖದಲ್ಲಿ ಪಟ್ಟಿಯಿದೆ. ಮೂಲತ: ಇದೊಂದು ಸೂರ್ಯ ದೇವಾಲಯವೆಂದು ವಾಸ್ತುತಜ್ಞರು ಅಭಿಪ್ರಾಯ ಪಡುತ್ತಾರೆ. ಇದನ್ನು ನಿರ್ಮಿಸಿದವನು ಆರ್ಯಮಿಣ್ಚಿ ಉಪಾಧ್ಯಾಯನೆಂಬ ವಾಸ್ತುಶಿಲ್ಪಿ. ಈ ದೇವಾಲಯದ ಕಂಠದಲ್ಲಿ ಗಣಗಳ ಸುಂದರ ಶಿಲ್ಪಗಳಿವೆ. ಈ ದೇವಾಲಯದ ಹೊರಗೋಡೆಗಳಲ್ಲಿ ದಕ್ಷಿಣದಲ್ಲಿ ಶಿವ ಉತ್ತರದಲ್ಲಿ ವಿಷ್ಣುವಿನ ವಿಗ್ರಹಗಳಿವೆ.


ಮಾಲೆಗಿತ್ತಿ ದೇವಾಲಯದ ಊರ್ಧ್ವನೋಟ


ಮಾಲೆಗಿತ್ತಿ ದೇವಾಲಯದ ತಲವಿನ್ಯಾಸ

ಈ ಮಾಲೆಗಿತ್ತಿ ದೇವಾಲಯದ ಕುರಿತು ವಿಶೇಷವಾಸ್ತು ಕುರಿತ ವಿವರಣೆ ಹೀಗಿದೆ. "ಈ ದೇವಾಲಯದ ಕಂಠದಲ್ಲಿ ಗಣಗಳ ಆಕರ್ಷಕ ಉಬ್ಬು ಶಿಲ್ಪಗಳಿವೆ. ಪಾದದಲ್ಲಿ ಕರ್ಣ ಭದ್ರಗಳಿದ್ದು ಕುಡ್ಯ ಸ್ತಂಭಗಳು ಗಮನೀಯವಾಗಿವೆ. ಕಪೋತದ ವಲಭಿಯಲ್ಲಿ ಗಣ-ಹಂಸಗಳ ಮಾಲೆಯಿದೆ. ಆದಿತಲದ ಹಾರವು ಗೂಢ ಮಂಟಪದ ಮೇಲೂ ಸಾಗಿದೆ. ತಲಗಳ ರೂಪು ಹೆಚ್ಚು ಸ್ಪಷ್ಟವಾಗಿದೆ. ಗ್ರೀವ ಶಿಖರದ ಉಪದಿಕ್ಕುಗಳಲ್ಲಿ ಚಿಕ್ಕ ಕೂಟಗಳು ರಚಿತವಾಗಿವೆ. ಸ್ತೂಪಿ ಬಿದ್ದು ಹೋಗಿದೆ. ಶಿಖರವು ಅಷ್ಟಕೋನಾಕಾರದಲ್ಲಿರುವುದರಿಂದ ಇದು ನಿರಂಧಾರ ದ್ವಿತಲ ದ್ರಾವಿಡ ವಿಮಾನ.

ಗರ್ಭಗೃಹದ ದ್ವಾರ ಬಂಧದ ಅಲಂಕೃತ ಶಾಖೆಗಳಲ್ಲಿ ಗರುಡ ನಾಗಶಾಖಾ ಇರುವುದು ಹೊಸ ಲಕ್ಷಣ. ಅಂತರಾಳದಂತೆ ಕಾಣುವ ಭಾಗದಲ್ಲಿ ಎಡಗಡೆ ಸೂರ್ಯನು ಛಾಯಾದೇವಿಯನ್ನು ದಂಡಿಸುತ್ತಿರುವ ಉಬ್ಬು ಶಿಲ್ಪವಿದೆ. ಗೂಢಮಂಟಪದ ವಿತಾನದಲ್ಲಿ ಗರುಡಾರೂಢ ವಿಷ್ಣುವಿನ ಶಿಲ್ಪವಿದೆ. ಗುಹಾಲಯಗಳಲ್ಲಿರುವಂತೆ ಗೂಢಮಂಟಪದ ಕಂಬಗಳ ಸಾಲುಗಳು ಪೂರ್ವ-ಪಶ್ಚಿಮವಾಗಿ ತುಸು ಎತ್ತರದ ನೆಲಪಟ್ಟಿಯ ಮೇಲೆ ನಿಂತಿವೆ. ಗೂಢ ಮಂಟಪದ ಗೋಡೆಗಳ ಮೇಲೆ ಸ್ಥಾನಕ ಶಿವ (ದಕ್ಷಿಣ ದಿಕ್ಕು) ಮತ್ತು ಸ್ಥಾನಕ ವಿಷ್ಣು (ಉತ್ತರ ದಿಕ್ಕು) ಶಿಲ್ಪಗಳು ವಿಶಿಷ್ಟ ಪ್ರಕಾರದವು. ಗುಪ್ತರ ಅಂತ್ಯ ಕಾಲದ ಶಿಲ್ಪಶೈಲಿಯ ಲಕ್ಷಣಗಳು ಇಲ್ಲಿವೆ. ಗರುಡ-ನಾಗಶಾಖಾ ವಿನ್ಯಾಸ ಮತ್ತು ಗುಪ್ತರ ಅಂತ್ಯಕಾಲದ ಶಿಲ್ಪಶೈಲಿಯ ಪ್ರಭಾವ ಇವೆರಡೂ ವೈಶಿಷ್ಟ್ಯಗಳು ದ್ರಾವಿಡ ದೇಶದ ಶೈಲಿಯಲ್ಲಿ ಔತ್ತರೇಯ ಲಕ್ಷಣಗಳು ನುಸುಳುತ್ತಿರುವುದನ್ನು ಸೂಚಿಸುತ್ತವೆ. ಈ ದೇವಾಲಯ ಅದೇ ಬೆಟ್ಟದಲ್ಲಿದ್ದರೂ ಮೂಲಕೋಟೆಯ ಹೊರವಲಯದಲ್ಲಿದೆ. ಇದು ನಿರಂಧಾರ ವಿನ್ಯಾಸದಲ್ಲಿರುವುದರಿಂದ ಪೋಷಕನು ಬಹುಷ: ಅರಸು ವಂಶಕ್ಕೆ ಸಂಬಂಧಿಸಿರದ ವ್ಯಕ್ತಿಯಿರಬೇಕು. ಇಮ್ಮಡಿ ಪೊಲೆಕೇಶಿಯ ಆಳ್ವಿಕೆಯ ಕಾಲದಲ್ಲಿ (610-642) ಇದು ನಿರ್ಮಾಣವಾಗಿರುವ ಸಾಧ್ಯತೆ ಹೆಚ್ಚು". (ಪ್ರೊ. ಶ್ರೀನಿವಾಸ ಪಾಡೀಗಾರ, ಬಾದಾಮಿ ಚಾಲುಕ್ಯರ ಶಾಸನಗಳು, ವಾಸ್ತು ಮತ್ತು ಶಿಲ್ಪಕಲೆ, ಪುಟ- 35).

ಪೂರ್ವದಿಗಂತಕ್ಕೆದುರಾಗಿರುವ ಈ ವಾಸ್ತುಶಿಲ್ಪವು ಮೊದಲು ನಾಲ್ಕು ಕಂಬಗಳನ್ನು ಹೊತ್ತು ನಿಂತ ಮುಖಮಂಟಪದ ಪ್ರವೇಶವನ್ನು ಪಡೆಯುತ್ತದೆ. ಸಭಾ ಮಂಟಪವು ನಾಲ್ಕು ಕಂಬಗಳನ್ನು ಎಂಟು ಅರ್ಧಕಂಬಗಳನ್ನೊಳಗೊಂಡಿದ್ದು, ದಕ್ಷಿಣ ಹಾಗೂ ಉತ್ತರ ದಿಕ್ಕುಗಳ ಹೊರಗೋಡೆಯಲ್ಲಿ ತಲಾ ಎರಡು ಜಾಲಂಧ್ರಗಳಿದ್ದು ಅವು ಸಭಾಮಂಟಪದಲ್ಲಿ ಗಾಳಿ ಬೆಳಕು ಬರಲು ವ್ಯವಸ್ಥೆ ಮಾಡಲಾಗಿದೆ. ಸಭಾಮಂಟಪವು ಗರ್ಭಗೃಹಕ್ಕೆದುರಾಗಿರುವ ಅಗಲವಾದ ಅಂಕಣವನ್ನೂ, ನಂತರ ಎಡಬಲದಲ್ಲಿ ಚಿಕ್ಕ ಅಂಕಣಗಳನ್ನು ವಿಭಜಿಸುವಂತೆ ಮಾಡಿದೆ. ಗರ್ಭಗೃಹವು ಚೌಕಾಕಾರದಾಗಿದ್ದು, ಅದರ ಮುಂದೆ ಅಂತರಾಳದ ವಿನ್ಯಾಸವನ್ನೂ ಇಲ್ಲಿ ಕಲ್ಪಿಸಿದೆ. ಗರ್ಭಗೃಹದಲ್ಲಿ ಲಿಂಗವಿದೆ. ಬೆಟ್ಟದ ಮೇಲಿನ ಈ ದೇವಾಲಯವು ವೈಶಿಷ್ಟ್ಯಪೂರ್ಣ ವಾಸ್ತುಶಿಲ್ಪವೆನಿಸುತ್ತದೆ.

**ಮೇಲಿನ ಶಿವಾಲಯ :**

ಬಾದಾಮಿಯ ದೇವಾಲಯಗಳಲ್ಲಿ ದಕ್ಷಿಣ ಭಾರತದ ದ್ರಾವಿಡ ಶೈಲಿಯ ವಿಮಾನಗಳಿಗೆ ಪ್ರಾರಂಭದ ಉದಾಹರಣೆಗಳನ್ನೊದಗಿಸುತ್ತವೆ. ಬಾದಾಮಿಯ ಉತ್ತರ ಕೋಟೆಯ ಬೆಟ್ಟದ ಮೇಲೆ ನಿರ್ಮಿಸಿದ ಈ ಮೇಲಿನ ಶಿವಾಲಯವು ಒಂದು ಸಾಂಧಾರ ಶೈಲಿಯ ಸುಂದರ ದೇವಾಲಯವು. ಮೂಲತ: ಇದೊಂದು ವಿಷ್ಣು ದೇವಾಲಯವೆಂದೂ ಮೊದಲನೆಯ ಪೊಲೆಕೇಶಿಯು ನಿರ್ಮಿಸಿದ ಕೋಟೆಯ ಒಳಗಿರುವುದರಿಂದ ಚಾಲುಕ್ಯ ಅರಸರಿಗೋಸ್ಕರ ಕಟ್ಟಲ್ಪಟ್ಟಿದೆ ಎಂಬುದು ವಾಸ್ತವವೆಂದು ಪ್ರೊ. ಶ್ರೀನಿವಾಸ ಪಾಡಿಗಾರರವರು ಅಭಿಪ್ರಾಯ ಪಡುತ್ತಾರೆ.


ಮೇಲಿನ ಶಿವಾಲಯದ ಊರ್ಧ್ವನೋಟ


ಮೇಲಿನ ಶಿವಾಲಯದ ತಲವಿನ್ಯಾಸ

ಈ ದೇವಾಲಯದ ನಿರ್ಮಾಣದ ಕುರಿತು ವಾಸ್ತು ವಿನ್ಯಾಸ ದೃಷ್ಟಿಯಿಂದ ಇದನ್ನು "ಸಾಂಧಾರ ತ್ರಿತಲ ನಾಗರ ವಿಮಾನ" ಶೈಲಿಯ ವಾಸ್ತು ಶಿಲ್ಪವೆಂದೂ ಮೇಲ್ಕಟ್ಟಡದ ರಚನೆಯಲ್ಲಿ ಕೆಲವು ವಿಕಸಿತವಲ್ಲದ ಲಕ್ಷಣಗಳನ್ನು ಈ ದೇವಾಲಯ ಪ್ರಕಟಿಸುತ್ತದೆಯೆಂದೂ ಮೊದಲ ತಲಕ್ಕೆ ಹಾರ ಸ್ಪಷ್ಟವಿದೆ. ಇದು ವಿಮಾನ ಭಾಗದ ಮೇಲೆ ಅಷ್ಟೇ ಅಲ್ಲದೇ ಗೂಢಮಂಟಪದ ಮೇಲೂ ಮುಂದುವರಿದಿತ್ತು. ಈಗ ಭಾಗಶ: ಹಾಳಾಗಿದೆ. ಎರಡನೇಯ ತಲ ಸಾಕಷ್ಟು ಎತ್ತರವಾಗಿದೆ. ಮೂರನೆಯ ತಲ ಅದರ ಅರ್ಧದಷ್ಟು ಕುಳ್ಳವಾಗಿದೆ. ಎರಡನೇ ಮತ್ತು ಮೂರನೇಯ ತಲಗಳ ಕಪೋತಗಳ ಮೇಲ್ಗಡೆ ವ್ಯಾಳ ಮಾಲಾ ಮತ್ತು ವೇದಿ ಭಾಗಗಳು ಮಾತ್ರವಿದ್ದು ಕಾಲ-ಕೂಟಗಳ ರಚನೆಯಿಲ್ಲ, ಚೌಕವು ನಾಗರ ಪ್ರಕಾರದಿದ್ದು ಪ್ರತಿಯೊಂದು ಮುಖದಲ್ಲಿ ನಾಸಿ ಅಲಂಕಾರವಿದೆ. ಸ್ತೂಪಿ ಬಿದ್ದು ಹೋಗಿರುವುದಾಗಿ ಪ್ರೊ. ಪಾಡೀಗಾರ ತಮ್ಮ ಕೃತಿಯಲ್ಲಿ ಪರಿಚಯಿಸುತ್ತಾರೆ.


ಮೇಲಿನ ಶಿವಾಲಯ

ಈ ಮೇಲಣ ಶಿವಾಲಯದಲ್ಲಿಯ ಕೆಲವು ವಾಸ್ತು ವಿನ್ಯಾಸದ ಭಾಗಗಳು ನಾಶಗೊಂಡಿವೆ. ಗರ್ಭಗೃಹದ ಸುತ್ತಲೂ ಪ್ರದಕ್ಷಿಣಾ ಪಥವಿದೆ. ಗರ್ಭಗೃಹದ ದ್ವಾರಬಂಧದ ಶಾಖೆಗಳಲ್ಲಿನ ಅಲಂಕಾರ ಅಪೂರ್ಣಗೊಂಡದ್ದಾಗಿದೆ. ಈ ದೇವಾಲಯದ ಸಭಾಮಂಟಪದ ಮಧ್ಯದ ಕಂಬಗಳು ಬಿದ್ದು ನಾಶ ಹೊಂದಿವೆ. ಒಂದು ಭಾಗದ ಗೋಡೆಯ ಅರ್ಧಕಂಬಗಳು ಮಾತ್ರ ನಮಗೆ ಕಾಣಸಿಗುತ್ತವೆ. ಪಾದದಲ್ಲಿ ಕುಡ್ಯ ಸ್ತಂಭಗಳೂ, ದೇವಕೋಷ್ಠಗಳು ಇವೆ. ಇದರಲ್ಲಿ ಗೋವರ್ಧನಧಾರಿ ಕೃಷ್ಣ, ಕಾಲೀದಮನ ಕೃಷ್ಣ, ಹಿರಣ್ಯ ಕಶ್ಯಪನೊಂದಿಗೆ ದ್ವಂದ್ವ ಯುದ್ಧದಲ್ಲಿ ತೊಡಗಿದ ನರಸಿಂಹ ಇವೇ ಮುಂತಾದ ಆಕರ್ಷಕ ಉಬ್ಬು ಶಿಲ್ಪಗಳು ನಮಗೆ ನೋಡಲಿಕ್ಕೆ ಸಿಗುತ್ತವೆ. ಈ ದೇವಾಲಯದ ವಾಸ್ತು ಲಕ್ಷಣಗಳನ್ನು, ಅಂಶಗಳನ್ನೂ ಗಮನಿಸಿದರೆ ಈ ಮೇಲಣ ಶಿವಾಲಯವು 6ನೇಯ ಶತಮಾನದ್ದಾಗಿರಬಹುದೆಂದು ಪ್ರಾಯಶ: ಮೊದಲನೇ ಪೊಲೆಕೇಶಿ (543–566) ಇಲ್ಲವೇ ಮೊದಲನೆಯ ಕೀರ್ತಿವರ್ಮನ (566–591) ಕಾಲದ ನಿರ್ಮಾಣವಿರಬಹುದು ಎಂಬುದು ವಾಸ್ತುಕಲಾ ವಿದ್ವಾಂಸರ ಅಭಿಪ್ರಾಯವಾಗಿದೆ.

**ಜಂಬುಲಿಂಗ ದೇವಾಲಯ :**


ಜಂಬುಲಿಂಗ ದೇವಾಲಯದ ತಲವಿನ್ಯಾಸ

ಬಾದಾಮಿಯಲ್ಲಿನ ಚಾಲುಕ್ಯ ದೇಗುಲಗಳಲ್ಲಿ ಅಪರೂಪದ ದೇವಾಲಯವಿದು. ಕ್ರಿ.ಶ. 699ರಲ್ಲಿ ವಿಜಯಾದಿತ್ಯನಿಂದ ರಾಜಮಾತೆ ವಿನಯವತಿಯು ವಿನಂತಿಯ ಮೇರೆಗೆ ನಿರ್ಮಾಣಗೊಂಡ ಈ ದೇವಾಲಯ ಒಂದು ಸುಂದರ ತ್ರಿಕೂಟಾಚಲ. ಕರ್ನಾಟಕದಲ್ಲಿ ಪ್ರಯೋಗಗೊಂಡ ತ್ರಿಕೂಟ ತಲವಿನ್ಯಾಸದಲ್ಲಿ ರಚನೆಗೊಂಡ ಮೊಟ್ಟಮೊದಲನೆಯದೆಂದು ವಾಸ್ತು ತಜ್ಞರು ಅಭಿಪ್ರಾಯ ಪಡುತ್ತಾರೆ.

ಪೂರ್ವಾಭಿಮುಖವಾಗಿರುವ ಈ ಜಂಬುಲಿಂಗ ದೇವಾಲಯಕ್ಕೆ ಮೂರು ಗರ್ಭಗೃಹಗಳಿವೆ. ಆಯುತಾಕಾರದ ಸಭಾಮಂಟಪ, ಕಕ್ಷಾಸನಗಳನ್ನೂ ಹೊಂದಿದ ಮುಖಮಂಟಪವಿದೆ. ಮುಖ್ಯ ಗರ್ಭಗೃಹದಲ್ಲಿ ಶಿವಲಿಂಗವನ್ನೂ, ಉಳಿದೆರಡು ಗರ್ಭಗೃಹಗಳಲ್ಲಿ ವಿಷ್ಣು, ಬ್ರಹ್ಮದೇವತೆಗಳನ್ನೂ ಪ್ರತಿಷ್ಠಾಪಿಸಲ್ಪಟ್ಟಿದೆ. ಗೂಢ ಮಂಟಪದ ವಿತಾನದಲ್ಲಿ ತ್ರಿಮೂರ್ತಿಗಳ ಸುಂದರ ಉಬ್ಬು ಶಿಲ್ಪಗಳಿವೆ. ಇದರೊಂದಿಗೆ ಸ್ವಸ್ತಿಕ ಬಂಧ, ಮತ್ಸ–

ಚಕ್ರ ಮುಂತಾದ ವಿನ್ಯಾಸಗಳಿಂದ ಮೇಲ್ಛತ್ತು ಅಲಂಕೃತಗೊಂಡಿದೆ. ಸಭಾಮಂಟಪದಲ್ಲಿ ಎಂಟು ಬೃಹದಾಕಾರದ ಕಂಬಗಳೂ, ಹತ್ತು ಅರ್ಧಕಂಬಗಳಿದ್ದು ಅವು ಐಹೊಳೆಯ ಲಾಡಖಾನ್ ದೇವಾಲಯದ ಕಂಬಗಳ ನೆನಪನ್ನು ತರುತ್ತವೆ. ಮುಖಮಂಟಪದಲ್ಲಿನ 16ಕಂಬಗಳನ್ನು ಮೇಲ್ಛತ್ತು ಆವರಿಸಿದೆ. ಇಡೀ ದಕ್ಷಿಣ ಭಾರತದಲ್ಲಿಯೇ ಕಟ್ಟಡ ಶೈಲಿಯ ಪ್ರಥಮ ತ್ರಿಕೂಟಾಚಲವೆಂಬ ಹೆಗ್ಗಳಿಕೆ ಪಡೆದುಕೊಂಡಿರುವ ಈ ದೇವಾಲಯವು ಬಾದಾಮಿ ಚಾಲುಕ್ಯರ ಕಾಲದ ಏಕಮಾತ್ರ ತ್ರಿಕೂಟಾಚಲವಾಗಿದೆ. ಆ ನಂತರದಲ್ಲಿ ರಚನೆಗೊಂಡ ಹಲವು ತ್ರಿಕೂಟಾಚಲಗಳಿಗೆ ಈ ದೇವಾಲಯದ ತಲವಿನ್ಯಾಸವು ಮಾದರಿಯಾಯಿತೆಂದೇ ಹೇಳಬಹುದು.

ಜಂಬುಲಿಂಗ ದೇವಾಲಯದ ವಿನ್ಯಾಸದಲ್ಲಿ ಗರ್ಭಗೃಹದ ಸುತ್ತಲೂ ಪ್ರದಕ್ಷಿಣಾಪಥವಿಲ್ಲದ ಕಾರಣದಿಂದ ಇದೊಂದು ನಿರಂಧಾರ ವಾಸ್ತುಶಿಲ್ಪ. ಗರ್ಭಗೃಹದ ಹೊರಗೋಡೆಗಳಲ್ಲಿ ಮುಂಚಾಚಿರುವ ದೇವಕೋಷ್ಠಗಳು, ಔತ್ತರೇಯ ಶೈಲಿಯ ಚಂದ್ರಶಾಲಾ ಅಲಂಕಾರದಲ್ಲಿ ಕಾಣಸಿಗುತ್ತವೆ. ಈ ಕಾರಣದಿಂದ ಇಲ್ಲಿ ಔತ್ತರೇಯ ಶಿಲ್ಪಶೈಲಿಯು ಮಾದರಿಯಾಗಿದೆ. ಈ ದೇವಾಲಯದ ಮೇಲಿನ ಶಿಖರವು ವಿಜಯನಗರ ಆಡಳಿತ ಕಾಲದಲ್ಲಿ ಇಟ್ಟಿಗೆ ಗಾರೆಯಿಂದ ರಚಿತವಾದುದೆಂಬುದಾಗಿ ಪ್ರೊ. ಶ್ರೀನಿವಾಸ ಪಾಡಿಗಾರ ಅವರು ಉಲ್ಲೇಖಿಸುತ್ತಾರೆ.



ಜಂಬುಲಿಂಗ ದೇವಾಲಯ

ಜಂಬುಲಿಂಗೇಶ್ವರ ದೇವಾಲಯವೆಂದು ಕರೆಯಲ್ಪಡುವ ಈ ದೇವಾಲಯ ರಚನೆಗೊಂಡದ್ದು ಕ್ರಿ.ಶ. 699ರಲ್ಲಿ. ಚಾಲುಕ್ಯ ಶೈಲಿಯ ಪರಿಪೂರ್ಣತೆಯನ್ನು ಇದು ಹೊಂದಿರುವುದರಿಂದ ಈ ದೇವಾಲಯವು ತುಂಬಾ ಮಹತ್ವವನ್ನು ಪಡೆದುಕೊಂಡಿದೆ. ದೇವಾಲಯದ ಕಂಬದ ಮೇಲೆ ಕೆತ್ತಲಾಗಿರುವ ಶಾಸನಾಧಾರದಿಂದ ಇದು ವಿನಯಾದಿತ್ಯನ ತಾಯಿ ವಿನಯವತಿಯು ನಿರ್ಮಾಣ ಮಾಡಿಸಿದ್ದಾಗಿಯೂ ತ್ರೈಪುರುಷದೇವರ ಪ್ರತಿಷ್ಠಾಪನೆಗೆ ರಚನೆಗೊಂಡಿದೆಯೆಂದು ತಿಳಿದು ಬರುತ್ತದೆ.

**ವಾಸ್ತು ವಿಶೇಷ :**

ಬಾದಾಮಿಯ ಈ ಜಂಬುಲಿಂಗ ದೇವಾಲಯವು ಆಯತಾಕೃತಿಯ ಗೂಢಮಂಟಪವನ್ನು ಮೂರು ಗರ್ಭಗೃಹಗಳನ್ನು ಒಳಗೊಂಡಿರುತ್ತದೆ. ದಕ್ಷಿಣ, ಪಶ್ಚಿಮ ಮತ್ತು ಉತ್ತರ ದಿಕ್ಕುಗಳಿಗೆ ಮುಖಮಾಡಿದ ಈ ಮೂರು ಗರ್ಭಗೃಹಗಳಲ್ಲಿ ತ್ರಿಮೂರ್ತಿಗಳ ಪ್ರತಿಷ್ಠಾಪನೆ ಮಾಡಲಾಗಿದೆ. ಪೂರ್ವ ದಿಕ್ಕಿನಲ್ಲಿ ಆಯತಾಕಾರದ ಮುಖಮಂಟಪವಿದೆ. ವಾಸ್ತು ವಿನ್ಯಾಸದ ದೃಷ್ಟಿಯಲ್ಲಿ ನೋಡಿದಾಗ ಈ ದೇವಾಲಯದ ತಲವಿನ್ಯಾಸವು ಪ್ರತಿಬಂಧ ಮಾದರಿಗೆ ಸೇರಿದ್ದಾಗಿಯೂ ಉಪಾನ, ಖುರ, ಕುಂಭಕ, ಧಾರಾವೃತ್ತ, ಕುಮುದ, ಪ್ರತಿವಾಜನ, ಮಹಾವಾಜನದ ಮೇಲೆ ಸಣ್ಣ ಕಂಪಗಳೆಂದ ಭಾಗಗಳನ್ನು ಒಳಗೊಂಡಿದೆ. ಪ್ರತಿವಾಜನದ ಮೇಲೆ ವ್ಯಾಳಗಳನ್ನು ಕಾಣಬಹುದು. ಬ್ರಹ್ಮ, ವಿಷ್ಣು, ಮಹೇಶ್ವರರಿಗಾಗಿ ಮೀಸಲಾದ ಮೂರು ಗರ್ಭಗೃಹಗಳು

ಭಿತ್ತಿ ಭಾಗದಲ್ಲಿ ಮುಂಚಾಚಿದ ಭದ್ರ ಭಾಗವನ್ನು, ಗೂಡುಗಳನ್ನು, ಹೊಂದಿದೆ. ಬ್ರಹ್ಮಕಾಂತ ಮಾದರಿಯ ಗೋಡೆ ಕಂಬಗಳು, ಗರ್ಭಗೃಹ ಮತ್ತು ಗೂಢಮಂಟಪದ ಭಿತ್ತಿಯಲ್ಲಿ ಕಂಡು ಬರುತ್ತವೆ. ಪ್ರಸ್ತರ ಭಾಗದ ಕಪೋತದ ಕೆಳಗೆ ಹಂಸಮಾಲಾ, ಮೇಲಿನ ಭಾಗದಲ್ಲಿ ವ್ಯಾಳಮಾಲಾ ರಚನೆ ಇದೆ. ಕಪೋತದ ಮೇಲೆ ಕಪೋತನಾಸಿಗಳಿವೆ.

ಮುಖಮಂಟಪವು ಚೌಕಾಕಾರದ ರುಚಿಕ ಮಾದರಿಯ ಕಂಬಗಳನ್ನು ಹೊಂದಿದೆ. ಈ ಕಂಬಗಳು ಅರ್ಧಪದಕಗಳು, ಮಧ್ಯಪಟ್ಟಿಕೆ ಮತ್ತು ತರಂಗ ಬೋದಿಗೆಗಳಿಂದ ಕೂಡಿವೆ. ಅಡ್ಡ ತೊಲೆಗಳ ಮೇಲೆ ವಿದ್ಯಾಧರ ಉಬ್ಬು ಶಿಲ್ಪಗಳಿವೆ. ಈ ತೊಲೆಗಳು ಸಮತಲ ವಿತಾನಕ್ಕೆ ಆಧಾರವಾಗಿವೆ. ಎರಡು ವಿತಾನಗಳು ಅಲಂಕೃತವಾಗಿದ್ದು ಒಂದರಲ್ಲಿ ನಾಗ, ಇನ್ನೊಂದರಲ್ಲಿ ಕಮಲಗಳು ಹಾಗೂ ಯಕ್ಷರ ಉಬ್ಬು ಶಿಲ್ಪಗಳಿವೆ.

ಗೂಢ ಮಂಟಪದ ಮಧ್ಯ ಕಂಬಗಳೂ ಸಹ ರುಚಿಕ ಮಾದರಿಯಲ್ಲಿದ್ದು, ಇವು ಒಂದಕ್ಕೊಂದು ಸಂಬಂಧ ಪಡೆಯುವಂತೆ ಕಮಲ ಪದಕದಿಂದ ಅಲಂಕೃತಗೊಂಡ ಉತ್ತರಾ ರಚನೆಯಿದೆ. ಇದರ ಒಳಮುಖವು ಅಲ್ಪನಾಸಿ, ಹಂಸ, ಚಕ್ರವಾಕ, ಮಯೂರ, ಆನೆ ಮುಂತಾದವುಗಳಿಂದ ಅಲಂಕೃತಗೊಂಡಿದೆ. ಮೂರು ಗರ್ಭಗೃಹಗಳ ಬಾಗಿಲು ವಾಡಗಳು ಪಂಚಶಾಖೆಯಿಂದ ಕೂಡಿದ್ದು ಪಾದ ಫಲಕದಲ್ಲಿ ಗಂಗೆ, ಯಮುನೆಯರು, ಚಾಮರ ಧಾರಣಿಯರೊಂದಿಗೆ ಚಿತ್ರಿತಗೊಂಡಿದ್ದಾರೆ. ಬಾಗಿಲು ವಾಡದ ಮೇಲೆ ಹಾರಗಳಲ್ಲಿ ಕಂಡುಬರುವ ಕೂಟ ಮತ್ತು ಶಾಲಾ ರಚನೆಗಳಿವೆ. ಅವುಗಳ ಕೆಳಗೆ ಮಿಥುನ ಶಿಲ್ಪಗಳಿವೆ. (ಡಾ. ಡಿಜಿ.ಕುಲಕರ್ಣಿ, ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು, ಪು. 19–20).

ಚಾಲುಕ್ಯ ರಾಚನಿಕ ವಾಸ್ತು ಉದಾಹರಣೆಗಳು ಹಲವು ದೃಷ್ಟಿಕೋನಗಳಿಂದಾಗಿ ಮಹತ್ವದ್ದೆನಿಸುತ್ತವೆ. ದಕ್ಷಿಣ ಭಾರತದಲ್ಲಿಯ ಈ ಪ್ರಾಚೀನ ದೇವಾಲಯಗಳ ನಿರ್ಮಾಣ ಕಾರ್ಯದಲ್ಲಿ ವಿವಿಧ ಭಾಗಗಳಿಂದ ಬಂದಿದ್ದ ಶಿಲ್ಪಿಗಳ ಸಮೂಹವು ಈ ವಾಸ್ತುಶಿಲ್ಪಗಳು ನಿರ್ಮಾಣಗೊಂಡ ಕಾರಣದಿಂದ ಹಲವು ಬಗೆಯ ವಾಸ್ತುಶೈಲಿ, ವಿನ್ಯಾಸಗಳ ಪ್ರಯೋಗ ನಡೆಸಿರುವುದು ನಮ್ಮ ಗಮನಕ್ಕೆ ಬರುತ್ತದೆ.

**ಭೂತನಾಥ ದೇವಾಲಯ:**

ಬಾದಾಮಿಯ ಅಗಸ್ತ್ಯ ತೀರ್ಥದ ಪೂರ್ವ ತಟದಲ್ಲಿ ಭೂತನಾಥ ದೇವಾಲಯವಿದೆ. ಚಾಲುಕ್ಯರ ಕಾಲದಲ್ಲಿ ರಚನೆಗೊಂಡ ದಾಕ್ಷಿಣಾತ್ಯ ಶೈಲಿಯ ದೇವಾಲಯಗಳಲ್ಲಿ ಇದು ಕೊನೆಯದೆಂದು ಇತಿಹಾಸ ಸಂಶೋಧಕರು ಅಭಿಪ್ರಾಯ ಪಡುತ್ತಾರೆ. ಭೂತನಾಥ ಶಿವನ ಆರಾಧನೆಗಾಗಿ ರಚನೆಗೊಂಡ ಈ ದೇವಾಲಯವು ನಿರಂಧಾರ ಶೈಲಿಯದಾಗಿದೆ. ವಾಸ್ತು ವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ ಸಭಾಮಂಟಪ (ಗೂಢ ಮಂಟಪ), ಮತ್ತು ಮುಖಮಂಟಪಗಳನ್ನು ಹೊಂದಿರುವ ಈ ಭೂತನಾಥ ದೇವಾಲಯದಲ್ಲಿ



ಭೂತನಾಥ ದೇವಾಲಯದ ಊರ್ಧ್ವನೋಟ



ಭೂತನಾಥ ದೇವಾಲಯದ ತಲವಿನ್ಯಾಸ




ಮುಖಮಂಟಪಗಳನ್ನು 11–12ನೇ ಶತಮಾನದಲ್ಲಿ ಹೆಚ್ಚು ವಿಶಾಲವಾದಂಥ ತೆರೆದ ಮಂಟಪದಂತೆ ವಿಸ್ತರಣೆ ಮಾಡಿದ್ದು ಕಂಡು ಬರುತ್ತದೆ.

ಭೂತನಾಥ ದೇವಾಲಯದ ಊರ್ಧ್ವ ರಚನೆಯಲ್ಲಿರುವ ವಾಸ್ತು ಅಂಗಗಳೆಂದರೆ "ಅಧಿಷ್ಠಾನವು ಉಪಾನ, ಜಗತಿ, ತ್ರಿಪಟ್ಟಿ, ಕುಮದ, ಕಂಠ ಪಟ್ಟಿಕಾ ಮತ್ತು ಪ್ರತಿಗಳನ್ನು ಒಳಗೊಂಡಿದೆ. ಪಾದದ ಕರ್ಣ ಮತ್ತು ಭದ್ರಗಳು ಕುಡ್ಯಸ್ತಂಭಗಳಿಂದೊಡಗೂಡಿ ನಿಖರವಾಗಿವೆ. ಮೂರು ದಿಕ್ಕಿನ ಭದ್ರಗಳಲ್ಲಿ ದೇವ ಕೋಷ್ಠಗಳಿವೆ. ಕಪೋತ, ಮಕರ ಪಟ್ಟಿಕಾ, ಕೂಟ–ಶಾಲಾಹಾರ ಯೋಗ್ಯವಾಗಿ ರಚಿತವಾಗಿವೆ. ಈ ವಿಮಾನದಲ್ಲಿ ಮೂರು ತಲಗಳಿವೆ. ಆದರೆ ಕೊನೆಯ ತಲಕ್ಕೆ ಹಾರವಿಲ್ಲ. ಚೌಕ ವಿನ್ಯಾಸವುಳ್ಳ ಶಿಖರದ ಮೇಲೆ ಕಲಶಸ್ತೂಪಿ ಇದೆ. ತಲಗಳ ರಚನೆ ಪ್ರಮಾಣ ಬದ್ಧವಾಗಿದೆ. ಇದು ನಿರಂಧಾರ ತ್ರಿತಲ ನಾಗರ ವಿಮಾನ. ಇತರ ಚಾಲುಕ್ಯ ದೇವಾಲಯಗಳಿಗೆ ಹೋಲಿಸಿದರೆ ತಲವಿನ್ಯಾಸ ಮತ್ತು ಊರ್ಧ್ವ ರಚನೆಯಲ್ಲಿ ಇದು ಸಾಕಷ್ಟು ವಿಕಸಿತ ಲಕ್ಷಣಗಳಿಂದ ಕೂಡಿದೆ. ಮುಖ ಮಂಟಪದಲ್ಲಿರುವ ಶೈವ ದ್ವಾರಪಾಲಕರು ಪಟ್ಟದಕಲ್ಲಿನ ದ್ವಾರಪಾಲಕರನ್ನು ನೆನಪಿಸುತ್ತಾರೆ. ಆದುದರಿಂದ ಇದನ್ನು ನಿರ್ಮಿಸಿದ್ದು ಕ್ರಿ.ಶ. 700–730ರ ಅವಧಿಗೆ ವಿಸ್ತರಿಸಬಹುದು. "(ಪ್ರೊ. ಶ್ರೀನಿವಾಸ ಪಾಡಿಗಾರ – ಬಾದಾಮಿ ಚಾಲುಕ್ಯರ ಶಾಸನಗಳು ವಾಸ್ತು ಮತ್ತು ಶಿಲ್ಪಕಲೆ ಪು. 35–36)".

ಬಾದಾಮಿಯ ಭೂತನಾಥ ಗುಡಿಗಳ ಗುಂಪಿನಲ್ಲಿರುವ ದೇವಾಲಯಗಳ ವಿಶೇಷತೆಗಳು ಶಿಲ್ಪಾಸ್ತಕರಿಗೆ ಕೆಲವು ವಿಶೇಷ ಮಾಹಿತಿಯನ್ನು ನೀಡುತ್ತವೆ. ಅಗಸ್ತ್ಯತೀರ್ಥದ ಉತ್ತರಕ್ಕಿರುವ ಭೂತನಾಥ ಗುಡಿಗಳ 1ನೇಯ ಸಮೂಹದಲ್ಲಿ ನಾಲ್ಕು ದೇವಾಲಯಗಳಿವೆ. ಇವೆಲ್ಲವೂ ದಕ್ಷಿಣಾಭಿಮುಖವಾಗಿವೆ. ಈ ಸಮೂಹದ ಮುಖ್ಯ ದೇವಾಲಯದಲ್ಲಿ ವಿಶಾಲವಾದ ಮುಖಮಂಟಪ, ಸಭಾಮಂಟಪ, ಅಂತರಾಳ ಹಾಗೂ ಗರ್ಭಗೃಹಗಳ ವಾಸ್ತು ಲಕ್ಷಣಗಳು ನಮಗೆ ಕಾಣಸಿಗುತ್ತವೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ಶುಖನಾಶಿಯಲ್ಲಿ ವಿಷ್ಣು ವಿಗ್ರಹವಿದೆ. ಈ ಮುಖ್ಯ ದೇವಾಲಯದ ಪಕ್ಕದಲ್ಲಿ ಎರಡು ಶಿಖರಗಳಿರುವ ಇನ್ನೊಂದು ದೇವಾಲಯವೂ ಇದೆ.

**ಪ್ರಕೃತಿ ರಮಣೀಯ ಮಹಾಕೂಟ:**

ಬಾದಾಮಿ ಚಾಲುಕ್ಯರ ವಾಸ್ತು ಶಿಲ್ಪಗಳಿಂದ ಪ್ರಸಿದ್ಧವಾದ ಮಹಾಕೂಟವು ಗುಡ್ಡದ ಹಾದಿಯಿಂದ ಬಾದಾಮಿಯಿಂದ ಕೇವಲ 5 ಕಿ.ಮೀ. ಅಂತರದಲ್ಲಿದೆ. ಬನಶಂಕರಿ, ಶಿವಯೋಗ ಮಂದಿರದ ಮಾರ್ಗವಾಗಿ ಹೋದರೆ 14 ಕಿ.ಮೀ. ಅಂತರದಲ್ಲಿದೆ. ಮಹಾಕೂಟವು ಚಾಲುಕ್ಯರ ಕಾಲದಲ್ಲಿ ವಾಸ್ತು ಶಿಲ್ಪ ಪ್ರಯೋಗಕ್ಕಾಗಿ ಆಯ್ದುಕೊಂಡ ಮಾಟಾದಕೂಟವಿದು. ಇಲ್ಲಿಯ ಹತ್ತಾರು ಸಣ್ಣ ದೊಡ್ಡ ದೇವಾಲಯಗಳು ವಾಸ್ತುಪ್ರೇಮಿಗಳ ಮನವನ್ನು ಆಕರ್ಷಿಸುತ್ತವೆ. ಪ್ರಕೃತಿ ರಮಣೀಯತೆಯಂತೂ ನಮ್ಮ ಹೃದಯವನ್ನು ಸೂರೆಗೊಳ್ಳುತ್ತದೆ.




ಹೊಸ ಮಹಾಕೂಟದ ದೇವಾಲಯಗಳ ನಕ್ಷೆ

ಮಹಾಕೂಟವು ಬಾದಾಮಿ ಸುತ್ತ ಮುತ್ತಲಿನಲ್ಲಿ "ದಕ್ಷಿಣಕಾಶಿ"ಯೆಂತಲೇ ಕರೆಯಲ್ಪಡುತ್ತದೆ. ಲಿಂಗಗಳ ಕೂಟವಾಗಿರುವ ಇದು ಮಹಾಕೂಟ. ಇಲ್ಲಿರುವ ಸರಸ್ವತಿ, ವೀರಭದ್ರ ದೇವರ ಹಾಗೂ ಚಿಕ್ಕದೇವಾಲಯಗಳು, ಲಜ್ಜಾಗೌರಿ, ವೇಣುಗೋಪಾಲರ ವಿಗ್ರಹಗಳು ನಮ್ಮ ಮನಸ್ಸನ್ನು ಆಕರ್ಷಿಸುತ್ತವೆ. ಇಲ್ಲಿನ ಪುಷ್ಕರಣಿ, ಐತಿಹಾಸಿಕ ಹಿನ್ನೆಲೆಯನ್ನು ಹೊಂದಿರುವ ಮಹಾಕೂಟೇಶ್ವರ ದೇವಸ್ಥಾನ, ಬೇರೆ ಬೇರೆ ಶಿಖರವಿನ್ಯಾಸಗಳಲ್ಲಿ ನಿರ್ಮಿತಿಗೊಂಡ ವಾಸ್ತು ಶಿಲ್ಪಗಳು ಚಾಲುಕ್ಯ ಶಿಲ್ಪಿಗಳ ಪ್ರಯೋಗಶೀಲತೆಯ ದರ್ಶನ ಮಾಡಿಸುತ್ತವೆ.

ಮಹಾಕೂಟವು ಪ್ರಸಿದ್ಧ "ಶೈವಧರ್ಮಸ್ಥಳ"ವೆನಿಸಿತ್ತು. ಇಲ್ಲಿ ಶೈವಧರ್ಮಕ್ಕೆ ಪ್ರೇರಣೆ ನೀಡಿದ ಪಾಶುಪತ ಲಾಕುಳರು ಕಟ್ಟಿಸಿದ ಪ್ರಾಚೀನ ದೇವಾಲಯವು ನಂದಿ ಮಂಟಪ, ಗುಪ್ತರ ಶೈಲಿಯವಾಗಿವೆ.

ಮಹಾಕೂಟದ ಮುಕುಟೇಶ್ವರ ದೇವಾಲಯ ಸಾಂಧಾರ ಶೈಲಿಯ ದೇವಾಲಯ. ಈ ಪರಿಸರದಲ್ಲಿ ನಿರ್ಮಾಣಗೊಂಡಿರುವ ಒಂದೊಂದೂ ವಾಸ್ತುಶಿಲ್ಪಗಳೂ ವಾಸ್ತುಶಿಲ್ಪದ ದೃಷ್ಟಿಯಿಂದಾಗಿ ವಿಶೇಷ ಮಹತ್ವವನ್ನು ಪಡೆದುಕೊಂಡಿವೆ. ಇಲ್ಲಿರುವ ಸ್ತಂಭ ಶಾಸನದಲ್ಲಿ ಚಾಲುಕ್ಯ ಅರಸ ಮಂಗಲೇಶನನ್ನು ಮುಕ್ತ ಕಂಠದಲ್ಲಿ ಹೊಗಳಿದ್ದು ಕಂಡು ಬರುತ್ತದೆ. ಕ್ರಿ.ಶ. 508ರಲ್ಲಿ ತನ್ನ ಸಹೋದರ ಕೀರ್ತಿವರ್ಮನ ಇಚ್ಛೆಯಂತೆ ರಾಜ್ಯದ ಸೂತ್ರವಹಿಸಿಕೊಂಡು ಇಲ್ಲಿ ಕಲಚೂರ್ಯರಿಂದ ಗೆದ್ದ ಸಂಪತ್ತನ್ನು ಮುಕುಟೇಶ್ವರನಿಗೆ ಸಲ್ಲಿಸಿದ ಬಗ್ಗೆ ಹಾಗೂ ತನ್ನ ತಾಯಿ ದುರ್ಲಭಾದೇವಿಯ ಅಭಿಲಾಷೆಯ ಮೇರೆಗೆ ಮಹಾಕೂಟೇಶ್ವರ ದೇವಾಲಯಕ್ಕೆ ಹತ್ತು ಹಳ್ಳಿಗಳನ್ನು ದತ್ತಿಯಾಗಿ ಬಿಟ್ಟುಕೊಟ್ಟ ವಿವರವನ್ನು ವಿಜಯಸ್ತಂಭದ ಶಾಸನ ತಿಳಿಸಿಕೊಡುತ್ತದೆ. ಈ ಶಾಸನದ ಕಾಲ ಕ್ರಿ.ಶ. 602 ಆಗಿದ್ದು ಇದನ್ನು ಇಂದು ವಿಜಾಪುರದ ವಸ್ತು ಸಂಗ್ರಹಾಲಯದಲ್ಲಿರಿಸಲಾಗಿದೆ.

ಚಾಲುಕ್ಯ ಅರಸರ ಕಾಲದಲ್ಲಿ ಈ ಭಾಗವು ಎಲ್ಲ ದೃಷ್ಟಿಯಿಂದಲೂ ಸಮೃದ್ಧಿ ಹೊಂದಿದ ಪ್ರಸಿದ್ಧವಾದ ಪ್ರದೇಶವಾಗಿತ್ತು. ಚಾಲುಕ್ಯ ಅರಸರಾದ ಪುಲಕೇಶಿ, ಕೀರ್ತಿವರ್ಮ, ಮಂಗಲೇಶ, ಇಮ್ಮಡಿ ಪುಲಿಕೇಶಿ ಮುಂತಾದವರು ತಮ್ಮ ಸಾಮ್ರಾಜ್ಯದ ವೈಭವ ಮೆರೆಸುವುದರೊಂದಿಗೆ ಕಲೆ, ಸಾಂಸ್ಕೃತಿಕ ಸಂಪತ್ತನ್ನು ವೃದ್ಧಿಸಿದ್ದಾರೆಂಬುದಕ್ಕೆ ಈ 'ಮಹಾಕೂಟ' ಸ್ಪಷ್ಟವಾದ ನಿದರ್ಶನಗಳನ್ನೊದಗಿಸುತ್ತದೆ.

**ಮಹಾಕೂಟದ ವಾಸ್ತುಶಿಲ್ಪಗಳು:**

ಬಾದಾಮಿ ಚಾಲುಕ್ಯರ ಕಾಲದಲ್ಲಿ ಕಲಾವೈಭವ ಮೆರೆಸಿದ ಮಹಾಕೂಟ ಪ್ರಕೃತಿ ಪ್ರಿಯರಿಗೆ ರಮಣೀಯವಾದ ಸ್ಥಳ. ಜಲಶ್ರೀ, ವನಶ್ರೀ ವೈಭವದಲ್ಲಿ ಕಣ್ಮನಗಳನ್ನು ತಣಿಸುವ ಈ ಮಹಾಕೂಟ ಪರಿಸರದಲ್ಲಿರುವ ಕೆಲವು ವಾಸ್ತುಶಿಲ್ಪಗಳು ತುಂಬ ಮಹತ್ವವನ್ನು ಪಡೆದುಕೊಂಡವುಗಳಾಗಿವೆ. ಅರ್ಧಚಂದ್ರಾಕೃತಿಯ ಕಲ್ಬೆಟ್ಟದ ಈ ಕಣಿವೆಯಲ್ಲಿ ಅರಳಿದ ಒಂದೊಂದೂ ದೇವಾಲಯಗಳಲ್ಲಿಯೂ ವಿಶೇಷ ವಾಸ್ತು ವೈಭವ ಮೆರೆದಿರುವುದನ್ನು ನಾವು ಕಾಣಬಹುದು. ಇಲ್ಲಿನ ಪುಷ್ಕರಣಿಗಳು, ಗಿಡಮರಗಳು ಮನಸ್ಸಿಗೆ ಸಂತಸ ನೀಡುತ್ತವೆ. ಮಹಾಕೂಟದಲ್ಲಿರುವ ದೇವಾಲಯಗಳಲ್ಲಿ ವಾಸ್ತುಕಲೆಯ ದೃಷ್ಟಿಯಿಂದ ನಾಲ್ಕು ದೇವಾಲಯಗಳು ಹೆಚ್ಚಿನ ವಿಶೇಷತೆಗಳನ್ನು ಪಡೆದವುಗಳಾಗಿವೆ. ಅವುಗಳಲ್ಲಿ 1) ಬಾಣಂತಿಗುಡಿ 2) ಮಲ್ಲಿಕಾರ್ಜುನ ದೇವಾಲಯ, 3) ಸಂಗಮೇಶ್ವರ ದೇವಾಲಯ 4) ಮಹಾಕೂಟೇಶ್ವರ ದೇವಾಲಯ.

**ಬಾಣಂತಿಗುಡಿ:**

ಮಹಾಕೂಟದ ದೇವಾಲಯಗಳಲ್ಲಿ ತುಂಬಾ ಪ್ರಾಚೀನತೆಯದಾದ ಈ ದೇವಾಲಯವು ಏಕಕೂಟ ದೇವಾಲಯದ ಸೂಕ್ತ ಉದಾಹರಣೆ-ಯಾಗಿದೆ. ಇದಕ್ಕೆ 'ಏಕದೇವಾಲಯ' ವೆಂತಲೂ ಕರೆಯಲಾಗುತ್ತದೆ. ಒಂದೇ ಗರ್ಭಗೃಹವಿರುವ ಈ ದೇವಾಲಯದಲ್ಲಿ ಗರ್ಭಗೃಹದ ಮುಂದೆ ಮಂಟಪಕ್ಕೆ ಮಾತ್ರ ಅವಕಾಶವಿದೆ. ಇಲ್ಲಿ ಪ್ರದಕ್ಷಿಣಾ ಪಥವಿರುವುದಿಲ್ಲ. ಎತ್ತರದ ಪ್ರದೇಶದಲ್ಲಿರುವ ಈ ಬಾಣಂತಿ ಗುಡಿಯನ್ನು ತಲುಪಲು ಸುಂದರ ಸೋಪಾನಗಳ ನಿರ್ಮಾಣವನ್ನು ಇತ್ತೀಚೆಗಷ್ಟೆ



ಬಾಣಂತಿಗುಡಿ

ಮಾಡಲಾಗಿದೆ. ಯಾವುದೇ ವಿಶೇಷತೆಗಳಿಲ್ಲದ ತೀರ ಸಾದಾ ಶೈಲಿಯ ದೇವಾಲಯವಿದು. ದೇವಾಲಯದ ಮೇಲೆ ಸರಳವಾದ ಚೌಕಾದ ಶಿಖರವಿರುವುದು. ಶಿಥಿಲಸ್ಥಿತಿಯಲ್ಲಿ ದೇವಾಲಯವಿದೆ.

ಮಹಾಕೂಟವನ್ನು ಪ್ರಾಚೀನ ದೇವಾಲಯಗಳ ಮಾಟಾದ ದೇಗುಲಕೂಟವೆಂದು ಕೆಲವು ಇತಿಹಾಸಕಾರರು ಬಣ್ಣಿಸುತ್ತಾರೆ. ಸೀಮಿತ ಪರಿಸರದಲ್ಲಿ ಸುಮಾರು ಹದಿನೆಂಟಕ್ಕೂ ಮಿಗಿಲಾದ ಚಿಕ್ಕ ದೊಡ್ಡ ದೇವಾಲಯಗಳು ನಿರ್ಮಾಣಗೊಂಡಿರುವುದು ನಮ್ಮ ಗಮನಕ್ಕೆ ಬರುತ್ತದೆ. ಇದು ಇಲ್ಲಿನ ವಿಶೇಷ. ಇವೆಲ್ಲವೂ ಶೈವ ದೇವಾಲಯಗಳೇ.



ಬಾಣಂತಿಗುಡಿಯ ಊರ್ಧ್ವನೋಟ



ಬಾಣಂತಿಗುಡಿಯ ತಲವಿನ್ಯಾಸ

**ವಾಸ್ತು ವಿಶೇಷ:**

ಏಕಕೂಟ ದೇವಾಲಯದ ವಿಮಾನ ರಚನೆಯಲ್ಲಿ ತೀರ ಸಾಧಾರಣ ರೀತಿಯಲ್ಲಿ ತಳದಿಂದ ತುದಿ ಭಾಗದ ತನಕವೂ ಎತ್ತರದಲ್ಲಿ ಆರು ಭಾಗಗಳು ಶಿಲ್ಪಶಾಸ್ತ್ರದಲ್ಲಿರುವಂತೆ ಅಧಿಷ್ಠಾನ, ಪಾದ, ಭಿತ್ತಿ, ಪ್ರಸ್ತಾರ, ಗ್ರೀವ, ಶಿಖರ ಮತ್ತು ಸ್ತೂಪಿ ಈ ಭಾಗಗಳನ್ನು ನಿರ್ಮಿಸುವುದರೊಂದಿಗೆ ಚಾಲುಕ್ಯ ಶಿಲ್ಪಿಗಳ ವಾಸ್ತುಶಿಲ್ಪ ರಚನೆಗೆ ಸೂಕ್ತ ಉದಾಹರಣೆ ಈ ಬಾಣಂತಿ ಗುಡಿ. ಇದು ಬಾದಾಮಿ ಚಾಲುಕ್ಯರ ಪ್ರಾಚೀನ ದೇವಾಲಯಗಳಲ್ಲೊಂದು.

ಗರ್ಭಗೃಹದಲ್ಲಿ ಯಾವುದೇ ವಿಗ್ರಹವಿಲ್ಲ. ಚೌಕಾಕಾರದ ಈ ಗರ್ಭಗೃಹ ನಸುಗೆಂಪು ಉಸುಕು ಕಲ್ಲುಗಳಿಂದ ನಿರ್ಮಾಣಗೊಂಡಿದೆ. ಮುಂದಿರುವ ನಾಲ್ಕು ಕಲ್ಲುಗಳ ಮೇಲೆ ರಚಿಸಿದ ಮುಖ ಮಂಟಪವಿದ್ದು, ಅದನ್ನೇರಿ ಹೋಗಲು ಸೋಪಾನವಿದೆ. ತೀರ ಸರಳ ಶೈಲಿಯ ಈ ಶೈವ ದೇವಾಲಯ ಸುಂದರವಾಗಿದೆ. ನಾಗರಶಿಲ್ಪ ವಿಮಾನ ನಿರಂಧಾರ ಶೈಲಿಯ ಈ ದೇವಾಲಯದ ರಚನೆ ಕ್ರಿ.ಶ. 6ನೇಯ ಶತಮಾನ.

**ಮಲ್ಲಿಕಾರ್ಜುನ ದೇವಾಲಯ :**

ಮಹಾಕೂಟದ ದೇವಾಲಯ ಪ್ರಾಂಗಣದಲ್ಲಿ ಪುಷ್ಕರಣಿಯ ದಕ್ಷಿಣಕ್ಕಿರುವ ಮಲ್ಲಿಕಾರ್ಜುನ ದೇವಾಲಯವು ಸುಂದರ ಶೈಲಿಯಲ್ಲಿ ಕಟ್ಟಿದ ದ್ರಾವಿಡ ಶಿಖರವಿನ್ಯಾಸ ಹೊಂದಿರುವ ವಾಸ್ತುಶಿಲ್ಪವಾಗಿದೆ. ಮಧ್ಯಮ ಗಾತ್ರದ ದ್ವಿತಲ ಸಾಂಧಾರ ವಿಮಾನವುಳ್ಳ ಇದೊಂದು ಸುಂದರ ವಾಸ್ತುಶಿಲ್ಪವಾಗಿದೆ. ನಂದಿ ಮಂಟಪ, ಮುಖಮಂಟಪ, ವಿಶಾಲ ಸಭಾಮಂಟಪ, ಅದರ ಛತ್ತಿನಲ್ಲಿರುವ ನಂದಿ



ಮಲ್ಲಿಕಾರ್ಜುನ ದೇವಾಲಯ



ಮಲ್ಲಿಕಾರ್ಜುನ ದೇವಾಲಯದ ಊರ್ಧ್ವನೋಟ



ಮಲ್ಲಿಕಾರ್ಜುನ ದೇವಾಲಯದ ತಲವಿನ್ಯಾಸ

ಸಮೇತ ಶಿವ, ಬ್ರಹ್ಮ ಕಮಲದ ಸುತ್ತಲಿರುವ ಗಂಧರ್ವರ ಶಿಲ್ಪಗಳು ಆಕರ್ಷಣೀಯವೆನಿಸುತ್ತವೆ. ಈ ದೇವಾಲಯದ ಗರ್ಭಗೃಹದ ಸುತ್ತಲೂ ಪ್ರದಕ್ಷಿಣಾ ಪಥವಿದೆ. ಇಲ್ಲಿರುವ ಸಾಲು ಶಿಲ್ಪಗಳು ದೊಡ್ಡ ಮೂರ್ತಿಗಳು ನೋಡುವವರನ್ನು ಆಕರ್ಷಿಸುತ್ತವೆ. ಮುಖಮಂಟಪದಲ್ಲಿಯ ದ್ವಾರಪಾಲಕರ ವಿಶೇಷ ಶಿಲ್ಪ ಆಕರ್ಷಣೆಯಾಗಿದೆ. ಮಹಾಕೂಟದ ದೇವಾಲಯಗಳಲ್ಲಿಯೇ ದೊಡ್ಡದಾದ ಈ ವಾಸ್ತು ಶಿಲ್ಪದ ಶಿಖರವು ದ್ರಾವಿಡ ಶೈಲಿಯದು. ಎತ್ತರದ ಅಧಿಷ್ಠಾನದಲ್ಲಿ ನಿರ್ಮಿತಿಗೊಂಡ ಈ ಮಲ್ಲಿಕಾರ್ಜುನ ದೇವಾಲಯವನ್ನು "ಮುದಿ ಮಲ್ಲಿಕಾರ್ಜುನ ಗುಡಿ" ಎಂತಲೂ ರೂಢಿಯಲ್ಲಿ ಕರೆಯಲಾಗುತ್ತದೆ.

**ಸಂಗಮೇಶ್ವರ ದೇವಾಲಯ:**

ಮಹಾಕೂಟದ ವಿಷ್ಣು ಪುಷ್ಕರಣೀಯ ಉತ್ತರ ತಟದಲ್ಲಿರುವ ಸಂಗಮೇಶ್ವರ ದೇವಾಲಯವು ಔತ್ತರೇಯ ಶೈಲಿಯ ವಾಸ್ತುಶಿಲ್ಪದ ಉದಾಹರಣೆಯಾಗಿದೆ. ರೇಖಾನಾಗರ ಶಿಖರ ಶೈಲಿಯಲ್ಲಿರುವ ಈ ದೇವಾಲಯವು ಅತ್ಯಂತ ಸುಂದರ ಹಾಗೂ ಆಕರ್ಷಕವಾದದ್ದಾಗಿದೆ. ಕ್ರಿ.ಶ. 934ರ ಕಾಲದ ಶಾಸನವೊಂದು ಈ ದೇವಾಲಯದಲ್ಲಿದ್ದು ದೇವಾಲಯದ ದಕ್ಷಿಣ ಬದಿಯ ಗೋಡೆಯಲ್ಲಿರುವ ಲಕುಲೀಶನ ವಿಗ್ರಹವಿದೆ. ಹರಿಹರ, ಅರ್ಧನಾರೀಶ್ವರ ಮೂರ್ತಿಗಳು ಕ್ರಮವಾಗಿ ಉತ್ತರ ಹಾಗೂ ಪಶ್ಚಿಮ ಗೋಡೆಗಳನ್ನಲಂಕರಿಸಿವೆ. ಈ ಸಂಗಮೇಶ್ವರ



ಸಂಗಮೇಶ್ವರ ದೇವಾಲಯ ಹಾಗೂ ಪುಷ್ಕರಣಿ

ದೇವಾಲಯವು ತನ್ನ ಸುಂದರ ವಿನ್ಯಾಸಗಳಿಂದ ನೋಡುವವರನ್ನು ಆಕರ್ಷಿಸುತ್ತದೆ. ಮಹಾಕೂಟದ ಈ ಸಂಗಮೇಶ್ವರ ದೇವಾಲಯದಲ್ಲಿನ ಅರ್ಧನಾರೀಶ್ವರ ವಿಗ್ರಹವು ಚಾಲುಕ್ಯ ಶಿಲ್ಪಿಗಳ ಅಪರೂಪದ ಕಲಾತ್ಮಕವಾದ ರಚನೆಯಾಗಿದೆ ಎಂಬುದನ್ನು ಬೇರೆ ಹೇಳಬೇಕಾಗಿಲ್ಲ.

ಮಹಾಕೂಟ ಪರಿಸರದಲ್ಲಿ ನಿರ್ಮಿಸಲ್ಪಟ್ಟ ವೈವಿಧ್ಯ ಶೈಲಿಗಳ ಕಟ್ಟಡಗಳಲ್ಲಿ ದ್ರಾವಿಡ, ಔತ್ತರೇಯ, ಕದಂಬನಾಗರ, ಹಾಗೂ ರೇಖಾನಾಗರ ಶೈಲಿಯ ಶಿಖರವಿನ್ಯಾಸಗಳ ಮಾದರಿಗಳನ್ನು ನೋಡಲು ಸಿಗುತ್ತದೆ. ಚಿಕ್ಕ ದೊಡ್ಡ ಗಾತ್ರದ ದೇವಾಲಯಗಳಲ್ಲಿ ಶಿಲ್ಪಿಗಳು ತಮ್ಮ ಕಲಾನೈಪುಣ್ಯತೆಯನ್ನು ಹೊಂದಿದ್ದುದು ನಮ್ಮ ಗಮನಕ್ಕೆ ಬರುತ್ತದೆ. ಪುಷ್ಕರಣಿಯಲ್ಲಿನ ಮಂಟಪದಲ್ಲಿ ಕಂಡು ಬರುವ ಪಂಚಮುಖಿ ಶಿವನ ವಿಗ್ರಹ ವಿಶೇಷವಾದ ರಚನೆ ಈ ಪುಷ್ಕರಣಿಗೆ ಹೊಂದಿಕೊಂಡಂತೆಯೆ ಇರುವ ಕೋಣೆಯೊಂದರಲ್ಲಿ ಶಂಕರ ಲಿಂಗನ ವಿಗ್ರಹ ಸ್ಥಾಪಿಸಿದ್ದು ಅದನ್ನು ಕಾಣಲು ನೀರಿನಲ್ಲಿ ಮುಳುಗೇ ಪ್ರವೇಶ ಮಾಡಿ ಈ ವಿಗ್ರಹ ನೋಡಬೇಕು.

**ಮಹಾಕೂಟೇಶ್ವರ ದೇವಾಲಯ:**

ಮಹಾಕೂಟದಲ್ಲಿ ವಿಶೇಷ ಆಕರ್ಷಕ ದೇವಾಲಯುಗಳಲ್ಲಿ ಮಹಾಕೂಟೇಶ್ವರ ದೇವಾಲಯವೂ ಒಂದು. ಇದಕ್ಕೆ ಮುಕುಟೇಶ್ವರ ದೇವಾಲಯವೆಂತಲೂ ಕರೆಯಲಾಗುತ್ತದೆ. ಪೂರ್ವಾಭಿಮುಖವಾಗಿ ನಿರ್ಮಾಣಗೊಂಡ ಈ ವಾಸ್ತುಶಿಲ್ಪದಲ್ಲಿ ಮುಖ್ಯ ವಾಸ್ತುಲಕ್ಷಣಗಳಾದ ಮುಖಮಂಟಪ, ಸಭಾಮಂಟಪ, ಹಾಗೂ ಗರ್ಭಗೃಹಗಳಿವೆ. ಗರ್ಭಗೃಹದಲ್ಲಿ ಶಿವಲಿಂಗವಿದ್ದು ನಿತ್ಯ ಪೂಜಾ ಕೈಂಕರ್ಯ ನಡೆಯುತ್ತಿದೆ. ಮಟ್ಟಸವಾದ ಮೇಲ್ಛಾವಣಿ ಮೇಲೆ ರೂಪಿಸಿದ ದ್ರಾವಿಡ ಶೈಲಿಯ ಶಿಖರವಿನ್ಯಾಸ ಅದಕ್ಕೆ ಲೇಪಿಸಿರುವ ಬಿಳಿ ಸುಣ್ಣದಲ್ಲಿ ಶಿಖರದ ಅಲಂಕಾರ ಎದ್ದು ಕಾಣದಂತಾಗಿದೆ. ಈ ದೇವಾಲಯದ ಕಂಬಗಳು ಸ್ಥೂಲವಾಗಿದ್ದು ಪ್ರಮಾಣ ಬದ್ಧತೆ ಕಾಯ್ದುಕೊಂಡಿವೆ. ಈ ದೇವಾಲಯದ ಹೊರಭಾಗದಲ್ಲಿ ರಾವಣನು ಕೈಲಾಸವನ್ನೆತ್ತಿದ ದೃಶ್ಯ, ಅರ್ಧನಾರೀಶ್ವರ, ಹರಿಹರ ವಿಗ್ರಹಗಳನ್ನು ಕೆತ್ತಿ ಹೊರಗೋಡೆಗಳಲ್ಲಿ ಸಂಯೋಜಿಸಲಾಗಿದೆ.



ಮಹಾಕೂಟೇಶ್ವರ ದೇವಾಲಯದ ಊರ್ಧ್ವನೋಟ



ಮಹಾಕೂಟೇಶ್ವರ ದೇವಾಲಯದ ತಲವಿನ್ಯಾಸ

ಮಹಾಕೂಟೇಶ್ವರ ದೇವಾಲಯವು ಲಾಕುಳ ಶೈವರು ಕಟ್ಟಿಸಿದ ಪ್ರಾಚೀನ ದೇವಾಲಯಗಳಲ್ಲಿ ಒಂದೆಂದು ಮಂದಿರದ ಎದುರಿನಲ್ಲಿರುವ ನಂದಿಮಂಟಪವು ಗುಪ್ತರ ಕಾಲದ ಶೈಲಿಯದೆಂದು ಡಾ. ಶೀಲಾಕಾಂತ ಪತ್ತಾರ ಒಂದೆಡೆ ಹೇಳುತ್ತಾರೆ. ಇದರಲ್ಲಿರುವ ಗರ್ಭಗೃಹದ ಸುತ್ತಲೂ ಪ್ರದಕ್ಷಿಣಾ ಪಥದ ಕಾರಣದಿಂದ ಈ ದೇವಾಲಯವು ಸಾಂಧಾರ ವಿನ್ಯಾಸದ್ದಾಗಿದೆ. ಎತ್ತರವಾದ ಅಧಿಷ್ಠಾನದ ಮೇಲೆ ಕಟ್ಟಲ್ಪಟ್ಟಿರುವ ಈ ದೇವಾಲಯ ಸುತ್ತಲೂ ಜಾಲಂಧ್ರಗಳ ಸಂಯೋಜನೆಯಿಂದಾಗಿ ದೇವಾಲಯದ ಸಭಾ ಮಂಟಪ ಹಾಗೂ ಪ್ರದಕ್ಷಿಣಾ ಪಥಗಳಿಗೆ ಗಾಳಿ ಬೆಳಕನ್ನೊದಗಿಸಿದಂತಾಗಿದೆ.

ಈ ದೇವಾಲಯದ ಹೊರ ಭಿತ್ತಿಯಲ್ಲಿಯ ಲಕುಲೀಶನ ವಿಗ್ರಹವು ಬಹು ಸುಂದರವಾದದ್ದು. ತಲೆಯಲ್ಲಿರುವ ಕಿರೀಟ, ಕೊರಳಲ್ಲಿರುವ ಹಾರ, ಎಡಗೈಯಲ್ಲಿಯ ಲಕುಟಿ(ಯೋಗದಂಡ)ದಿಂದಾಗಿ ಲಕುಲೀಶನ ಗಾಂಭೀರ್ಯ ಕಣ್ಣಿಗೆ ಕಟ್ಟುವಂತಿದೆ. ಈ ದೇವಾಲಯದಲ್ಲಿ ಕಾಣುವ ಚಾಲುಕ್ಯ ಅರಸರ ಕಾಲದ ಶಾಸನಗಳು ಮಹಾಕೂಟದ ಇತಿಹಾಸವನ್ನು ಸಾರುತ್ತವೆ.



ಮಹಾಕೂಟೇಶ್ವರ ದೇವಾಲಯ ಹಿಂಭಾಗ

ಮಹಾಕೂಟೇಶ್ವರ ದೇವಾಲಯದ ಎದುರಿನಲ್ಲಿಯ ನಂದಿ ಮಂಟಪದ ಪಕ್ಕದಲ್ಲಿಯ ಚಿಕ್ಕ ದೇವಾಲಯವನ್ನು ಲಕುಲೀಶನಗುಡಿ ಎಂತಲೂ ಅದಕ್ಕೆ ಹೊಂದಿಕೊಂಡಿರುವ ಇನ್ನೊಂದು ದೇಗುಲದಲ್ಲಿ ಸರಸ್ವತಿ ವಿಗ್ರಹವು ವಿಶೇಷವಾದದ್ದಾಗಿವೆ. ಶಾರದಾಂಬೆಯು ಇಲ್ಲಿ ಪಾಶಾಂಕುಶ, ಜಪಮಣಿ, ಪುಸ್ತಕಗಳನ್ನು ತನ್ನ ನಾಲ್ಕು ಕೈಗಳಲ್ಲಿ ಧಾರಣ ಮಾಡಿದ್ದು, ಪ್ರಭಾವಳಿ, ಮಕರ ತೋರಣಗಳಿಂದ ಈ ವಿಗ್ರಹವು ಪ್ರೇಕ್ಷಣೀಯವೆನಿಸುತ್ತದೆ. ಪದ್ಮಾಸನದಲ್ಲಿ ಕುಳಿತ ಭಂಗಿಯಲ್ಲಿರುವ ಈ ಸರಸ್ವತಿ ವಿಗ್ರಹದ ಎಡಬಲಗಳಲ್ಲಿ ಚಾಮರ ಹಿಡಿದ ಇಬ್ಬರು ಸ್ತ್ರೀಯರನ್ನು ಕೆತ್ತಲಾಗಿದೆ. ಈ ಮಹಾಕೂಟೇಶ್ವರ ದೇವಾಲಯದ ಬಲಭಾಗದಲ್ಲಿ ವೀರಭದ್ರೇಶ್ವರ ದೇವಾಲಯ, ಅಲ್ಲಿಯೇ ಕಂಡುಬರುವ ಲಜ್ಜಾಗೌರಿ ವಿಗ್ರಹ ತುಂಡಾದದ್ದು ನೋಡುವವರ ಗಮನ ಸೆಳೆಯುತ್ತದೆ. ಕೆಲವು ಸುಂದರ ವಾಸ್ತುಶಿಲ್ಪಗಳಿಂದಾಗಿ ಈ ಪರಿಸರವು ಪ್ರವಾಸಿಗರಿಗೆ "ಶಿಲ್ಪಕಾಶಿ" ಎನಿಸುತ್ತದೆ.

ಮಹಾಕೂಟದ ದೇವಾಲಯಗಳನ್ನು ನೋಡಿದಾಗ ಕೆಲವೊಂದು ವಾಸ್ತು ವಿಶೇಷಗಳು ನಮ್ಮ ಗಮನವನ್ನು ಸೆಳೆಯುತ್ತವೆ. ಅವುಗಳನ್ನು ಈ ಕೆಳಗಿನಂತೆ ಗುರುತಿಸಬಹುದು.

ಇಲ್ಲಿರುವ ಬಾಣಂತಿಗುಡಿ ಏಕಬೇರಾಲಯದ ಉದಾಹರಣೆಯಾಗಿ ಕಾಣುತ್ತಿದ್ದರೆ, ಅದರ ಮೇಲಿನ ಶಿಖರ ವಿನ್ಯಾಸವು ದ್ರಾವಿಡ ಶೈಲಿಯಲ್ಲಿ ರೂಪಿತಗೊಂಡಿದೆ. ಚಚ್ಚೌಕಾಕಾರದ ಕಟ್ಟಡದಲ್ಲಿ ಗರ್ಭಗುಡಿ ನಿರ್ಮಿಸಿದ ಸಂಗಮೇಶ್ವರ ದೇವಾಲಯವು ಪ್ರದಕ್ಷಿಣೆ ಹಾಕಲು ಬರುವಂತಿದೆ. ನಂದಿ ಮಂಟಪ, ಮುಖಮಂಟಪ, ಸಭಾಮಂಟಪ, ಪ್ರದಕ್ಷಿಣಾ ಪಥ, ಗರ್ಭಗೃಹಗಳಿಂದ ಕೂಡಿದ ಮಲ್ಲಿಕಾರ್ಜುನ ದೇವಾಲಯವು, ಅದರ ಮೇಲೆ ಕಂಗೊಳಿಸುವ ದ್ರಾವಿಡ ಶಿಖರ ವಿನ್ಯಾಸ, ದೇಗುಲದ ಗೋಡೆಗಳಲ್ಲಿ ಸಂಯೋಜಿಸಲ್ಪಟ್ಟ ಜಾಲಂಧ್ರಗಳು ಹಾಗೂ ವಿಶೇಷ ವಿಗ್ರಹಗಳಿಂದಾಗಿ ಇದೊಂದು ಸುಂದರ ವಾಸ್ತು ಶಿಲ್ಪವಾಗಿ ನಮಗೆ ಕಂಡು ಬರುತ್ತದೆ. ಪ್ರಮುಖವಾಗಿರುವ ಮಹಾಕೂಟೇಶ್ವರ ದೇವಾಲಯವು ಮುಖಮಂಟಪ, ಸಭಾಮಂಟಪಕ್ಕೆ ಹೊಂದಿಕೊಂಡೇ ರೂಪುಗೊಂಡ ಗರ್ಭಗೃಹ, ಆದರ ಸುತ್ತಲೂ ಇರುವ ಪ್ರದಕ್ಷಿಣಾ ಪಥ, ಮೇಲೆ ಕಂಗೊಳಿಸುವ ಶಿಖರ ವಿನ್ಯಾಸದಲ್ಲಿಯ ದ್ರಾವಿಡ ಶೈಲಿ ಕಲಾರಸಿಕರಿಗೆ ತೃಪ್ತಿ ತರುತ್ತದೆ. ಮಹಾಕೂಟೇಶ್ವರ ದೇವಾಲಯದಲ್ಲಿ ನಾವು ಕೆಲವು ಮಾರ್ಪಾಡುಗಳನ್ನು ಕಾಣಬಹುದು. ನಿತ್ಯವೂ ಪೂಜಾ ಸಂಭ್ರಮದಲ್ಲಿಯ ಮುಕುಟೇಶ್ವರ ದರ್ಶನವು ಭಾವುಕರಿಗೆ ಅತ್ಯಂತ ಸಂತೃಪ್ತಿಯ ಅನುಭೂತಿಯನ್ನೊದಗಿಸುತ್ತದೆ.

ಮಹಾಕೂಟದ ಸಮಗ್ರ ಪರಿಸರವು ಕಲಾರಸಿಕರಿಗೆ ಹಾಗೂ ಪ್ರಕೃತಿ ಆರಾಧಕರಿಗೆ ಅತ್ಯಂತ ಆಪ್ತವೆನಿಸುತ್ತದೆ. ಇಲ್ಲಿ ಚೆಲ್ಲುವರೆದಿರುವ ಹಚ್ಚಹಸುರಿನ ಕಾನನ, ಬೆಟ್ಟದ ಗಾಂಭಿರ್ಯತೆ, ಕಲೆಯ ಅರಳುವಿಕೆ ಮಂತ್ರ ಮುಗ್ಧರನ್ನಾಗಿಸುತ್ತದೆ. ತಂಪು ನೀರಿನ ಪುಷ್ಕರಣಿಗಳು ಹರಿವ ಝುರಿ, ಮುಗಿಲೆತ್ತರಕ್ಕೆ ಬೆಳೆದುನಿಂತ ಗಿಡಮರಗಳು ಮನಸೆಳೆಯುತ್ತವೆ. ಅಭಿವೃದ್ಧಿಯ ನೆಪದಲ್ಲಿ ರೂಪಿಸಲ್ಪಟ್ಟ ಆಧುನಿಕ ಕಟ್ಟಡಗಳಿಂದಾಗಿ ಈ ಸ್ಥಳವು ತನ್ನ ಮೊದಲಿನ ಪ್ರಕೃತಿ ಸೌಂದರ್ಯವನ್ನು ಕಳೆದುಕೊಳ್ಳುತ್ತಿದೆಯೇನೋ ಎಂಬ ಭಯ ಎದುರಾಗುತ್ತದೆ. ನಾಡಿನ ಐತಿಹಾಸಿಕ ಮೇಲ್ಮೆಯನ್ನು ಸಾರಿದ ಚಾಲುಕ್ಯ ಅರಸರ ಕಲೆಯ ಅಡುಂಬೊಲವಾದ ಮಹಾಕೂಟದ ವಾಸ್ತುಕಲಾವೈಖರಿಯು ತನ್ನ ವಿಶೇಷತೆಗಳಿಂದಾಗಿ ತನ್ನ ಸೌಂದರ್ಯವನ್ನು, ಅಸ್ತಿತ್ವವನ್ನು ಸದಾ ಕಾಯ್ದುಕೊಂಡಿರಲೆಂಬುದು ನಮ್ಮ ಮಹದಾಶೆ.

**ಪಟ್ಟದಕಲ್ಲಿನ ವಾಸ್ತುಶಿಲ್ಪಗಳ ಐತಿಹಾಸಿಕ ವಿಶೇಷ:**

ಪಟ್ಟದಕಲ್ಲಿನ ಪರಿಸರದಲ್ಲಿ ಚಾಲುಕ್ಯ ಅರಸರ ಅಮರ ಸ್ಮಾರಕಗಳಿಗೆ ನಾಂದಿ ಹಾಡಿದವರಲ್ಲಿ ವಿನಯಾದಿತ್ಯನ ತರುವಾಯ ಕ್ರಿ.ಶ. 696ರಲ್ಲಿ ಸಿಂಹಾಸನವನ್ನೇರಿದ ವಿಜಯಾದಿತ್ಯನು ಮಲಪ್ರಭೆಯ ಎಡದಂಡೆಯ ಈ ಸುಂದರ ಪ್ರದೇಶದಲ್ಲಿ ಶೈವಕೇಂದ್ರದ ಬೆಳವಣಿಗೆ ಮಾಡಿದ ಉದಾಹರಣೆ ದೊರೆಯುತ್ತದೆ. ಇವನ ತರುವಾಯ ಪಟ್ಟಕ್ಕೇರಿದ ಎರಡನೆಯ ವಿಕ್ರಮಾದಿತ್ಯನು ತನ್ನ ಪರಾಕ್ರಮದಿಂದ ಪಲ್ಲವರನ್ನು ಸದೆಬಡೆದು ಬಂದ ವರ್ಣನೆ ಶಾಸನಗಳಲ್ಲಿ ಉಲ್ಲೇಖಗೊಂಡಿದೆಯಲ್ಲದೇ ಇವನ ಕಾಲದಲ್ಲಿಯ ವಾಸ್ತುಶಿಲ್ಪಗಳ ರಚನೆ ಚರಿತ್ರಾರ್ಹವಾಗಿವೆ. ಈ ಚಕ್ರವರ್ತಿಯ ವಿಜಯೋತ್ಸವದ ನೆನಪಿಗಾಗಿ ಆತನ ಅರಸಿಯರಾದ ಲೋಕಮಹಾದೇವಿ ಹಾಗೂ ತ್ರೈಲೋಕ್ಯಮಹಾದೇವಿಯರು ಕಟ್ಟಿಸಿದ ವಿರೂಪಾಕ್ಷ ಹಾಗೂ ಮಲ್ಲಿಕಾರ್ಜುನ ದೇವಾಲಯಗಳ ವಾಸ್ತು ವೈಭವಗಳು ಇಂದಿಗೂ ತಮ್ಮ ಕಲಾ ವೈಖರಿ ಮೆರೆಸುತ್ತಿವೆ. ಈ ದೇವಾಲಯಗಳ ಸ್ಥಪತಿಗಳಾದ ಸರ್ವಸಿದ್ಧಿ ಆಚಾರಿ ಹಾಗೂ ಗುಂಡ ಅನಿವಾರಿತಾಚಾರಿಯರಿಗೆ ಪೆರ್ಜೆರೆಪು



ಪಟ್ಟದಕಲ್ಲು ದೇವಾಲಯಗಳ ಪಕ್ಷಿನೋಟ

ಪಟ್ಟವನ್ನು ನೀಡಿ ಗೌರವಿಸಿದ ಬಗ್ಗೆ ಅವರ ವಂಶದ ಮೇಲಿನ ತೆರಿಗೆಯನ್ನು ಮನ್ನಾಗೊಳಿಸಿದ ಬಗೆಗೂ ಶಾಸನಗಳಲ್ಲಿ ಬಣ್ಣಿಸಲಾಗಿದೆ.

ಪಟ್ಟದಕಲ್ಲಿನಲ್ಲಿ ಕಂಡು ಬರುವ ಚಾಲುಕ್ಯ ವಾಸ್ತುಶಿಲ್ಪಗಳು ಬೆರಳೆಣಿಕೆಯವಾಗಿದ್ದರೂ ಒಂದೊಂದರಲ್ಲೂ ವಿಶೇಷ ವಾಸ್ತು ಪ್ರಯೋಗಗಳನ್ನು ಮಾಡಿದ ಉದಾಹರಣೆಗಳು ನಮಗೆ ಕಾಣಸಿಗುತ್ತವೆ. ಇಲ್ಲಿನ ವಾಸ್ತು ರಚನೆಗಳಲ್ಲಿ ಕಂಚಿಯ ಪಲ್ಲವರ ವಾಸ್ತುಕಲೆಯ ಪ್ರಭಾವವು ಮೂಡಿ ಬಂದದ್ದು ನಮಗೆ ಗೋಚರವಾಗುತ್ತದೆ. ಇಲ್ಲಿ ನಿರ್ಮಾಣಗೊಂಡ ಹೆಚ್ಚಿನ ರಾಚನಿಕ ದೇವಾಲಯಗಳಲ್ಲಿ ಕಂಡು ಬರುವ ವಾಸ್ತು ವೈವಿಧ್ಯಗಳು ಕಲಾಧ್ಯಯನ ಮಾಡ ಬಯಸುವವರಿಗೆ ಹಲವಾರು ವಿಷಯಗಳ ಪರಿಚಯ ಮಾಡಿಕೊಡುತ್ತವೆ. ಪಟ್ಟದಕಲ್ಲು ದೇವಾಲಯಗಳಲ್ಲಿಯ ತಲವಿನ್ಯಾಸಗಳು, ಅಧಿಷ್ಠಾನಗಳು, ಹೊರಗೋಡೆಗಳು, ಕಂಬಗಳು ಬಾಗಿಲುವಾಡ, ಛಾವಣಿ, ಶಿಖರ ಮುಂತಾದವುಗಳಲ್ಲಿಯ ವಿಶೇಷಗಳು, ಪ್ರಯೋಗಗಳು ವಾಸ್ತುಕಲೆಯ ಅಧ್ಯಯನ ಮಾಡಬಯಸುವವರಿಗೆ ಹಲವಾರು ಉದಾಹರಣೆಗಳನ್ನು ನೀಡುತ್ತವೆ. ಇಲ್ಲಿನ ದೇವಾಲಯಗಳಲ್ಲಿ ಕಾಣಬರುವ ವಿವಿಧ ಶೈಲಿಯ ಶಿಖರ ವಿನ್ಯಾಸಗಳಿಂದಾಗಿ ಇದು ಒಂದು ಪ್ರಯೋಗ ಕ್ಷೇತ್ರದಂತೆ ಗೋಚರಿಸುತ್ತದೆ. ಪಟ್ಟದಕಲ್ಲು ದೇವಾಲಯಗಳಲ್ಲಿ ಕಂಡು ಬರುವ ದ್ರಾವಿಡ ವಿಮಾನ ಶೈಲಿ, ರೇಖಾ ನಾಗರ ಪ್ರಾಸಾದ ಶೈಲಿ ರಚನೆಯ ವೈವಿಧ್ಯತೆ ನೋಡಬಹುದಾಗಿದೆ.

ಪಟ್ಟದಕಲ್ಲು ಚಾಲುಕ್ಯರ ಕಾಲದ ಸುಂದರ ದೇವಾಲಯಗಳ ಸಂಕೀರ್ಣದಂತೆ ಕಾಣುತ್ತದೆ. ಇಲ್ಲಿ ವಾಸ್ತುಕಲೆ ಹಾಗೂ ಶಿಲ್ಪಕಲೆಯ ವೈಭವಗಳು ಒಂದಕ್ಕೊಂದು ಪೂರಕವಾಗಿ ಅರಳಿಕೊಂಡಿವೆ. ಇಲ್ಲಿ ಕಟ್ಟಲ್ಪಟ್ಟ ಎಂಟೂ ಕಲಾರಚನೆಗಳಲ್ಲಿ ವೈವಿಧ್ಯತೆಗಳಿದ್ದು ಒಂದೊಂದು ಭಿನ್ನತೆಯಿಂದ ಕೂಡಿವೆ. ಇವೆಲ್ಲವೂ ಶಿವಾಲಯಗಳೆಂಬುದನ್ನು ನಾವು ಯಾವತ್ತೂ ಮರೆಯುವಂತಿಲ್ಲ. ವಾಸ್ತುಶಿಲ್ಪಿಗಳು ನಡೆಸಿದ ವೈವಿಧ್ಯ ಶಿಲ್ಪ ಪ್ರಯೋಗಗಳು ನಮ್ಮ ಗಮನವನ್ನೆಲ್ಲ ಸೆಳೆದು ಬಿಡುತ್ತವೆ.

**ಪಟ್ಟದಕಲ್ಲಿನ ರಾಚನಿಕ ದೇವಾಲಯಗಳು:**

ಬಾದಾಮಿ ಚಾಲುಕ್ಯ ಅರಸರ ರಾಜಧಾನಿಯಾಗಿ ಮೆರೆದಿದ್ದ ಸುಂದರ ಶಿಲ್ಪಗಳ ಕೇಂದ್ರಸ್ಥಾನವಾದ ಪಟ್ಟದಕಲ್ಲು ಬಾದಾಮಿಯಿಂದ ಈಶಾನ್ಯಕ್ಕೆ 22 ಕಿ.ಮೀ. ಅಂತರದಲ್ಲಿರುವ ಪುಟ್ಟಗ್ರಾಮ. ಉತ್ತರಾಭಿ ಮುಖವಾಗಿ ಹರಿಯುವ ಮಲಪ್ರಭೆಯ ಎಡದಂಡೆಯಲ್ಲಿ ನೆಲೆಸಿದೆ. ಪ್ರಕೃತಿ ರಮಣೀಯ ಚೆಲುವು ನೋಡಸಿಗುತ್ತದೆ. ಈ ಪುಣ್ಯ ನೆಲದಲ್ಲಿ ವಿವಿಧ ವಾಸ್ತುಶಿಲ್ಪ ರಚನೆಯ ಉತ್ಕೃಷ್ಟ ದೇವಾಲಯಗಳು ಕಲಾ ಪ್ರೇಮಿಗಳಿಗೆ ರಸದೂಟ ನೀಡುತ್ತವೆ. ಚಾಲುಕ್ಯ ಅರಸರ ಔದಾರ್ಯ, ಶಿಲ್ಪಿಗಳ ಕೌಶಲ್ಯವು ಇಲ್ಲಿ ಸಾಕಾರಗೊಂಡ ಕಾರಣದಿಂದ ಪಟ್ಟದಕಲ್ಲು ವಾಸ್ತುಶಿಲ್ಪಗಳು ವಿಶ್ವ ಪರಂಪರೆಯ ಮೇರು ಕಲಾಕೃತಿಗಳೆಂದು ಹೊಗಳಲ್ಪಟ್ಟವು. ಪಟ್ಟದಕಲ್ಲಿನ ಈ ದೇವಾಲಯಗಳನ್ನು ಯುನೆಸ್ಕೋ(UNESCO)ದ ವಿಶ್ವ ಪರಂಪರಾ ಸಮಿತಿ ಇವೆಲ್ಲ ಜಾಗತಿಕ ಸೊತ್ತು ಎಂದು ಘೋಷಿಸಿದೆ. (ಡಾ. ಶೀಲಾಕಾಂತ ಪತ್ತಾರ ಪಟ್ಟದಕಲ್ಲು ದರ್ಶನ ಪು.1) ಪಟ್ಟದಕಲ್ಲಿನ ಈ ಹಿರಿಮೆಗೆ ಕಾರಣೀಭೂತರಾದ ಚಾಲುಕ್ಯ ಅರಸರು ಇತಿಹಾಸದ ಪುಟಗಳಲ್ಲಿ ಸದಾಕಾಲ ಉಳಿಯುವ ಹಾಗೆ ಮಾಡಿದವರು ಈ ಸ್ಮಾರಕಗಳನ್ನು ರೂಪಿಸಿದ ವಾಸ್ತುಶಿಲ್ಪಗಳು ಹಾಗೂ ಸ್ಥಪತಿಗಳು. ತಮ್ಮ ಅಮೋಘ ಕಲೆಯನ್ನು ಈ ದೇವಾಲಯಗಳಲ್ಲಿ ಅಭಿವ್ಯಕ್ತಿಪಡಿಸಿದ ಕಾರಣದಿಂದ ಇಂದಿಗೂ ಪಟ್ಟದಕಲ್ಲು ವಾಸ್ತುಶಿಲ್ಪಗಳು ತನ್ನ ಔನತ್ಯದಿಂದ ವಿಶ್ವದ ಕಲಾರಸಿಕರ ಗಮನ ಸೆಳೆಯುತ್ತಿವೆ.

ಐತಿಹಾಸಿಕ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವಾಗ ಈ ಭಾಗವು ಹಿಂದೆ ಮೌರ್ಯ ರಾಜ್ಯಕ್ಕೆ ಸೇರಿತ್ತೆಂದೂ ನಂತರ ಶಾತವಾಹನರ ಆಳ್ವಿಕೆಗೆ ಒಳಗಾಗಿತ್ತೆಂದೂ ಐಹೊಳೆ, ಪಟ್ಟದಕಲ್ಲು ಸುತ್ತ ಮುತ್ತಲ ಪ್ರದೇಶದಲ್ಲಿ ಉಪಲಬ್ಧವಾದ ಕೆಲವು ಉತ್ಖನನದ ಅವಶೇಷಗಳು ತಿಳಿಸಿಕೊಡುತ್ತವೆ. ಚಾಲುಕ್ಯ ಪೂರ್ವಕಾಲದ ಕೆಲವು ಇಟ್ಟಿಗೆ ರಚನೆಗಳ ಶೋಧಗಳು ಇದಕ್ಕೆ ಪುಷ್ಟಿನೀಡುವುದರಿಂದ ಐಹೊಳೆ ಹಾಗೂ ಪಟ್ಟದಕಲ್ಲುಗಳೆರಡೂ ಬೆಳೆದ ನಗರಗಳಾಗಿದ್ದುವನ್ನು ಸೂಚಿಸುತ್ತವೆಯೆಂದು ಇತಿಹಾಸ ತಜ್ಞರು ಅಭಿಪ್ರಾಯ ಪಡುತ್ತಾರೆ. ಕ್ರಿ.ಶ. ಎರಡನೆಯ ಶತಮಾನದಲ್ಲಿ ಇಲ್ಲಿಗೆ ಭೇಟಿ ನೀಡಿದ್ದ ಗ್ರೀಕ ಭೂಗೋಳ ತಜ್ಞ ಟಾಲೆಮಿಯು ತನ್ನ ಪ್ರವಾಸ ಕೃತಿಯಲ್ಲಿ ದಕ್ಷಿಣ ಏಶಿಯದ ವಾಣಿಜ್ಯ ಕೇಂದ್ರಗಳಾಗಿ ಐಹೊಳೆ, ಪಟ್ಟದಕಲ್ಲುಗಳನ್ನು ಉಲ್ಲೇಖಿಸಿದ್ದಾನೆ.

ಚಾಲುಕ್ಯ ಅರಸರ ಪಟ್ಟಾಭಿಷೇಕ ನಡೆಸುತ್ತಿದ್ದ ಪಟ್ಟದಕಲ್ಲು ಧಾರ್ಮಿಕ ಶ್ರದ್ಧಾ ಕೇಂದ್ರವಾಗಿಯೂ ತುಂಬ ಪ್ರಸಿದ್ಧವಾಗಿತ್ತು. ಹಿಂದೆ ಶಾಸನಗಳಲ್ಲಿ ಕಿಸುವೊಳಲ್ ಎಂದು ಕರೆಯುಲ್ಪಟ್ಟ ಪಟ್ಟದಕಲ್ಲು ಕಿಸುಕಾಡು ಎಪ್ಪತ್ತರ ನಾಡಿಗೆ ಸೇರಿದ್ದ ಊರಾಗಿತ್ತೆಂಬುದಕ್ಕೆ, ಕಿಸುವೊಳಲುನಗರ ಚಾಲುಕ್ಯ ಪಟ್ಟ ಬಂಧೋತ್ಸವ ನಡೆಸಿದ ಪ್ರಾಮುಖ್ಯತೆ ಪಡೆದಿತ್ತೆಂಬ ಬಗೆಗೆ ಹಲವು ಶಾಸನಗಳು ನಮಗೆ ತಿಳಿಸಿಕೊಡುತ್ತವೆ. ಹಲವಾರು ಪುರಾಣೋಕ್ತ ಅರಸರೂ ನಂದ, ಗುಪ್ತ, ಮೌರ್ಯ ಅರಸರೂ ಈ ಪ್ರದೇಶದಲ್ಲಿ ಅಧಿಪತ್ಯ ಮಾಡಿದ ಕುರುಹುಗಳು ಇಲ್ಲಿನ ಅವಶೇಷಗಳಲ್ಲಿ ಕಂಡು ಬರುತ್ತವೆ. ಕನ್ನಡದ ನಮ್ಮ ಪ್ರಾಚೀನ ಗ್ರಂಥ ಕವಿರಾಜ ಮಾರ್ಗದಲ್ಲಿ ಕಿಸುವೊಳಲಿನ ಉಲ್ಲೇಖ ಬರುವುದರಿಂದ ಇದೊಂದು ಮಹತ್ವದ ನಗರಗಳಲ್ಲಿ ಒಂದಾಗಿತ್ತೆಂಬುದು ತಿಳಿದು ಬರುತ್ತದೆ.

**ಪಟ್ಟದಕಲ್ಲು ದೇವಾಲಯಗಳು:**

ಪಟ್ಟದಕಲ್ಲು ಪರಿಸರದಲ್ಲಿ ತಲೆ ಎತ್ತಿ ನಿಂತ ಶಿಲ್ಪ ಸ್ಮಾರಕಗಳು ಭಾರತೀಯ ವಾಸ್ತುಕಲೆ ಹಾಗೂ ಶಿಲ್ಪಕಲೆಯ ಅಪೂರ್ವ ಸಂಗಮವಾಗಿವೆ. ಶೈವ ಸಂಪ್ರದಾಯದಲ್ಲಿ ಮೂಡಿ ಬಂದ ಈ ದೇವ ಮಂದಿರಗಳೆಲ್ಲವೂ ಒಂದಕ್ಕಿಂತ ಒಂದು ಭಿನ್ನವಾಗಿವೆ. ದೇವಾಲಯಗಳ ಕಟ್ಟಡ ವಿನ್ಯಾಸ, ಗಾತ್ರ, ಶಿಲ್ಪ ವೈವಿಧ್ಯತೆಗಳಿಂದ ಇಡೀ ದೇವಾಲಯ ಸಮುಚ್ಚಯದಲ್ಲಿ ಕಲೆಯ ಕುಸುರು ಚೆಲ್ಲುವರೆದಿದೆ. ಶಿಲ್ಪಿಗಳ ಕಲ್ಪನಾಶಕ್ತಿಯ ಅನಾವರಣವಾಗಿದೆ. ಬಾದಾಮಿ ಚಾಲುಕ್ಯರ ವಾಸ್ತುಶಿಲ್ಪಗಳಲ್ಲಿಯೇ ಅತ್ಯಂತ ಪರಿಪೂರ್ಣ ವಾಸ್ತುಶಿಲ್ಪ ಪ್ರಯೋಗಗಳು ಪಟ್ಟದಕಲ್ಲಿನ ವಾಸ್ತುಶಿಲ್ಪಗಳಲ್ಲಿ ನಡೆದಿರುವುದು ನಮ್ಮ ಗಮನಕ್ಕೆ ಬರುತ್ತದೆ.



ಪಟ್ಟದಕಲ್ಲು ದೇವಾಲಯಗಳ ಸಮುಚ್ಚಯ

ಪಟ್ಟದಕಲ್ಲಿನಲ್ಲಿ ರಚನೆಗೊಂಡ ದೇವಾಲಯಗಳೆಲ್ಲವೂ ಸುಮಾರು 6 ರಿಂದ 8ನೇ ಶತಮಾನದವರೆಗೆ ರೂಪುಗೊಂಡ ವಾಸ್ತುಶಿಲ್ಪಗಳಾಗಿವೆ. ಇಲ್ಲಿ ಒಂದೇ ನೆಲೆಯಲ್ಲಿ ಎರಡು ಪ್ರಕಾರದ ದೇವಾಲಯಗಳ ನಿರ್ಮಾಣವು ನಡೆದಿರುವುದು ಕಂಡು ಬರುತ್ತದೆ. ಇಲ್ಲಿನ ಪರಿಸರದಲ್ಲಿ ಸ್ಥಪತಿಗಳು ಭಾರತೀಯ ವಾಸ್ತುಶಿಲ್ಪದ ಔತ್ತರೇಯ ವಾಸ್ತು ಲಕ್ಷಣಗಳೊಂದಿಗೆ ದ್ರಾವಿಡ ವಿಮಾನ ಶೈಲಿಯ ಅಳವಡಿಕೆ ಮಾಡಿ ಪ್ರಯೋಗ ನಡೆಸಿರುವ ಉದಾಹರಣೆಗಳಿವೆ. ದಾಕ್ಷಿಣಾತ್ಯ ವಾಸ್ತು ವಿಶೇಷಗಳನ್ನು ರೇಖಾನಾಗರ ಶಿಖರ ವಿನ್ಯಾಸದಲ್ಲಿ ರೂಪಿಸಿ ಕಟ್ಟಿದ ದೇವಾಲಯಗಳು ನಮ್ಮ ಹೃನ್ಮನಗಳನ್ನೇ ಸೂರೆಗೊಳಿಸುತ್ತವೆ. ಇಲ್ಲಿನ ದೇವಾಲಯಗಳ ಪ್ರಯೋಗಗಳಲ್ಲಿ ಸ್ಥಪತಿಗಳು ಹಾಗೂ ಶಿಲ್ಪಿಗಳು ತೋರಿದ ಕಲಾ ಜಾಣ್ಮೆ ಹಾಗೂ ಕೌಶಲ್ಯಗಳು ಇಂದಿಗೂ ವಿಶ್ವದ ಕಲಾರಸಿಕರನ್ನು ಆಕರ್ಷಿಸುವಂತಿವೆ. ಪಟ್ಟದಕಲ್ಲಿನಲ್ಲಿ ಕಾಣಬರುವ ಈ ಪ್ರಾಯೋಗಿಕ ದೇವಾಲಯಗಳಲ್ಲಿ ವಿಶೇಷ ಮಹತ್ವ ಪಡೆದ ವಾಸ್ತುಶಿಲ್ಪಗಳೆಂದರೆ ವಿರೂಪಾಕ್ಷ ದೇವಾಲಯ ಹಾಗೂ ಮಲ್ಲಿಕಾರ್ಜುನ ದೇವಾಲಯಗಳು. ಇತರ ದೇವಾಲಯಗಳಾದ ಕಾಡಸಿದ್ಧೇಶ್ವರ, ಜಂಬುಲಿಂಗ, ಚಂದ್ರಶೇಖರ, ಗಳಗನಾಥ, ಸಂಗಮೇಶ್ವರ, ಇವಲ್ಲದೇ ಈ ದೇವಾಲಯ ಸಮುಚ್ಚಯದಲ್ಲಿ ಚಿಕ್ಕ ಚಿಕ್ಕ ದೇವಾಲಯಗಳೂ ಸಹ ನೋಡಲು ಸಿಕ್ಕುತ್ತವೆ. ಕಾಶಿವಿಶ್ವನಾಥ ದೇವಾಲಯವೂ ಪ್ರೇಕ್ಷಣೀಯವಾಗಿದ್ದು ಇನ್ನೊಂದು ದೇವಾಲಯ ಪಾಪನಾಥ ವಾಸ್ತುಶಿಲ್ಪವೂ ವಿರೂಪಾಕ್ಷ ದೇವಾಲಯದಿಂದ ಸ್ವಲ್ಪ ದೂರದಲ್ಲಿ ಮಲಪ್ರಭೆಯ ದಡದಲ್ಲಿ ನಿರ್ಮಾಣಗೊಂಡಿದೆ. ಇದೂ ಸಹ ಕೆಲವು ವಾಸ್ತು ವಿಶೇಷತೆಗಳಿಂದಾಗಿ ತುಂಬ ಮಹತ್ವ ಪಡೆದದ್ದಾಗಿದೆ.

ಪಟ್ಟದಕಲ್ಲಿನ ದೇವಾಲಯ ಸಮುಚ್ಚಯವನ್ನು ಹೊರತು ಪಡಿಸಿ ಸುಮಾರು ಅರ್ಧ ಕಿ.ಮೀ. ಅಂತರದಲ್ಲಿ ನೆಲೆಗೊಂಡಿರುವ ಜೈನ ದೇವಾಲಯವಿದೆ. ಇದನ್ನು ಸೂಳಿಗುಡಿ, ಜೈನ ನಾರಾಯಣ ದೇವಾಲಯವೆಂದೂ ಕರೆಯಲಾಗುತ್ತದೆ. ಇದು ಚಾಲುಕ್ಯ ಅರಸರ ಕಾಲದ ದೇವಾಲಯವಾಗಿರದೇ ರಾಷ್ಟ್ರಕೂಟರ ಕಾಲದ ವಾಸ್ತುಶಿಲ್ಪವೆಂಬುದು ಇತಿಹಾಸ ತಜ್ಞರ ಅಭಿಪ್ರಾಯವಾಗಿದೆ. ಜಿನಾಲಯವೆಂದೂ ಕರೆಯಲ್ಪಡುವ ಈ ದೇವಾಲಯದ ವಾಸ್ತುಕಲಾ ಲಕ್ಷಣಗಳು ವಿಶೇಷತೆ ಪಡೆದವುಗಳಾಗಿವೆ.

**ವಿರೂಪಾಕ್ಷ ದೇವಾಲಯ:**

ಪಟ್ಟದಕಲ್ಲು ದೇವಾಲಯಗಳಲ್ಲಿಯೇ ಅತ್ಯಂತ ಪ್ರೇಕ್ಷಣೀಯ ಹಾಗೂ ಮಹತ್ವದ ದೇವಾಲಯವೆಂದರೆ ವಿರೂಪಾಕ್ಷ ದೇವಾಲಯ. ಇದನ್ನು ಲೋಕೇಶ್ವರ ದೇವಾಲಯವೆಂತಲೂ ಕರೆಯಲಾಗುತ್ತಿದೆ. ಇಮ್ಮಡಿ ವಿಕ್ರಮಾದಿತ್ಯನ ಮಡದಿ ಲೋಕ ಮಹಾದೇವಿ ಈ ದೇವಾಲಯವನ್ನು ನಿರ್ಮಾಣ ಮಾಡಿದ್ದ ಚಾರಿತ್ರಿಕ ಅಂಶವಿದೆ. ಉತ್ತರ ಭಾರತದ ವಾಸ್ತುವಿನ್ಯಾಸದ ಶೈಲಿ ಈ ವಾಸ್ತುಶಿಲ್ಪದಲ್ಲಿ ಬೆರೆತುಕೊಂಡಿದೆ. ಇದು ಸಾಂಧಾರ ಶೈಲಿಯ ದೇವಾಲಯವಾಗಿದ್ದು



ವಿರೂಪಾಕ್ಷ ದೇವಾಲಯದ ಮುನ್ನೋಟ

ಗರ್ಭಗೃಹ, ಅಂತರಾಳ, ಪ್ರದಕ್ಷಿಣಾ ಪಥ, ಪೂರ್ವ ಹಾಗೂ ದಕ್ಷಿಣ, ಉತ್ತರಗಳಲ್ಲಿ ಮುಖಮಂಟಪ, ವಿಶಾಲ ಗೂಢಮಂಟಪಗಳ ಕಲ್ಪಕ ಶಕ್ತಿ ಅಭಿವ್ಯಕ್ತಗೊಂಡಿರುವುದನ್ನು ನಾವು ಕಾಣ-ಬಹುದಾಗಿದೆ. ಇದು ಚಾಲುಕ್ಯ ಅರಸರು ನಿರ್ಮಿಸಿದ ದೇವಾಲಯಗಳಲ್ಲಿ ಸರ್ವೋತ್ಕೃಷ್ಟ-ವಾದ ವಾಸ್ತುಶಿಲ್ಪವೆಂಬ ಹೆಗ್ಗಳಿಕೆ ಪಡೆದಿದೆ. ಚಾಲುಕ್ಯ ದೊರೆ ಇಮ್ಮಡಿ ವಿಕ್ರಮಾದಿತ್ಯನು ಪಲ್ಲವರ ರಾಜಧಾನಿ ಕಂಚಿ ನಗರವನ್ನು ಮೂರು ಸಾರೆ ಗೆದ್ದುದರ ಸಂಸ್ಮರಣೆಗಾಗಿ ಆತನ ರಾಣಿ ಲೋಕ ಮಹಾದೇವಿಯು ಕ್ರಿ.ಶ. 740ರಲ್ಲಿ ಈ ದೇವಾಲಯ ಕಟ್ಟಿಸಿದ ಬಗ್ಗೆ ಶಾಸನವು ಮಾಹಿತಿಯನ್ನೊದಗಿಸಿ ಕೊಡುತ್ತದೆ. ಶಾಸನದಲ್ಲಿ ಲೋಕೇಶ್ವರ ದೇವಾಲಯವೆಂದು ಉಲ್ಲೇಖಗೊಂಡ ಈ ವಿರೂಪಾಕ್ಷ ದೇವಾಲಯುವು ಕಂಚಿಯು ರಾಜಸಿಂಹೇಶ್ವರ ವಾಸ್ತುಶಿಲ್ಪ ಮಾದರಿಯಲ್ಲಿ ರಚನೆಗೊಂಡಿದೆ.



ವಿರೂಪಾಕ್ಷ ದೇವಾಲಯದ ಊರ್ಧ್ವನೋಟ



ವಿರೂಪಾಕ್ಷ ದೇವಾಲಯದ ತಲವಿನ್ಯಾಸ

ವಿರೂಪಾಕ್ಷ ದೇವಾಲಯದ ತಲವಿನ್ಯಾಸ ರೂಪುಗೊಂಡಿದ್ದು ಮಲಪಹಾರಿ ನದಿಯ ತಟದಲ್ಲಿ, ಸುಂದರ ಪರಿಸರದಲ್ಲಿಯ ಈ ದೇವಾಲಯದ ಕ್ಷೇತ್ರ ಪೂರ್ವ-ಪಶ್ಚಿಮ 224 ಅಡಿ, ದಕ್ಷಿಣೋತ್ತರ 105 ಅಡಿಗಳಿದ್ದು ಇದರಲ್ಲಿ ಪ್ರತ್ಯೇಕವಾದ ನಂದಿ ಮಂಟಪ, ಮುಖ ಮಂಟಪ, ವಿಸ್ತ್ರತವಾದ ಮಹಾ ಮಂಟಪ ಹಾಗೂ ಗರ್ಭಗುಡಿಗಳನ್ನು ಸಂಯೋಜಿಸಲಾಗಿದೆ. ವಾಸ್ತು ಶಿಲ್ಪದ ಎಲ್ಲ ಪ್ರಯೋಗಗಳು ಇಲ್ಲಿ ದಟ್ಟವಾಗಿ ಪ್ರಯೋಗಿಸಲ್ಪಟ್ಟಿವೆ. ಸಾಂಧಾರ ಶೈಲಿಯ ಈ ದೇವಾಲಯದ ಗರ್ಭಗೃಹದ ಸುತ್ತಲಿನಲ್ಲಿ ಸುಮಾರು ನಾಲ್ಕಡಿ ಅಗಲಳತೆಯ ಪ್ರದಕ್ಷಿಣಾಪಥವಿದೆ. ಈಗಲೂ ಪೂಜೆಗೊಳ್ಳುತ್ತಿರುವ ಗರ್ಭಗೃಹದ ಶಿವಲಿಂಗವು ಆಕರ್ಷಕವಾಗಿದೆ.

ವಿರೂಪಾಕ್ಷ ದೇವಾಲಯಕ್ಕೆ ಲೋಕನಾಥ ದೇವಾಲಯವೆಂದೂ ಇನ್ನೊಂದು ಹೆಸರಿದೆ. ಮುಖ್ಯ ದ್ವಾರವನ್ನು ಪೂರ್ವ ಭಾಗದಲ್ಲಿಯೂ ಇನ್ನೊಂದು ಪ್ರವೇಶದ್ವಾರವನ್ನು ಪಶ್ಚಿಮ ದಿಕ್ಕಿನಲ್ಲಿ ರೂಪಿಸಲಾಗಿದೆ. ಪರಿಪೂರ್ಣ ವಾಸ್ತುವಿನ್ಯಾಸದಲ್ಲಿ ರಚನೆಗೊಂಡಿರುವ ಪ್ರವೇಶದ್ವಾರದ (ಪ್ರತೋಳಿ) ಕಲ್ಪನೆ ಆಕರ್ಷಕವಾದ ನಂದಿ ಮಂಟಪ, ವಿಶಾಲತೆಯಿಂದೊಡಗೂಡಿದ ಮಂಟಪಗಳು ಕಲಾ ವೈಖರಿಯನ್ನು ಮರೆಸುವ ಸುಂದರ ಶಿಲ್ಪಗಳು ಶಿಲ್ಪಿಯ ಕೈಕುಸುರಿನ ಜಾಣ್ಮೆ, ಆಕರ್ಷಣೀಯವಾದ ಶಿಖರವಿನ್ಯಾಸ ರಚನೆ ಇಡೀ ದೇವಾಲಯದ ಒಂದೊಂದು ಭಾಗದಲ್ಲಿ ಅನಾವರಣಗೊಂಡ ವಾಸ್ತು ವಿಶೇಷಗಳಿಂದಾಗಿ ಇದೊಂದು ಮಾದರಿ ದೇವಾಲಯದಂತಿದೆ.

**ದೇವಾಲಯ ವಾಸ್ತು ವಿಶೇಷತೆಗಳು:**

ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ ಪ್ರವೇಶ ದ್ವಾರವು ಉತ್ತರದಾಯಿನಿಯಾಗಿ ಸಾಗಿದ ಮಲಪ್ರಭೆಯ ದಡದಲ್ಲಿ ಪೂರ್ವಾಭಿಮುಖವಾಗಿದೆ. ಪಟ್ಟದಕಲ್ಲಿನಲ್ಲಿ ರಚನೆಗೊಂಡಿರುವ ಎಲ್ಲ ದೇಗುಲಗಳೂ ಪೂರ್ವಾಭಿಮುಖವಾಗಿ ರಚನೆಗೊಂಡಿರುವುದೊಂದು ವಿಶೇಷ. ಈ ದೇವಾಲಯ ಪ್ರವೇಶಕ್ಕೆ ರೂಪಿಸಿದ ಮಹಾದ್ವಾರದಲ್ಲಿರುವ ಬಲಬದಿಯ ಕಂಬದಲ್ಲಿಯ ಶಾಸನದಲ್ಲಿ ಈ ದೇವಾಲಯದ ರೂವಾರಿಯ ಬಣ್ಣನೆಯ ಬಗೆಗೆ ವಿವರಣೆಯಿದೆ. 'ಪೆರ್ಜೆರೆಪು' ಗೌರವವನ್ನು ಮೂರು ಸಲ ಪಡೆದುಕೊಂಡ ಸೂತ್ರಧಾರಿ ಶಿಲ್ಪಿ ಸರ್ವಸಿದ್ಧಿಆಚಾರಿಯ ಕುರಿತ ಶಾಸನ ಇಲ್ಲಿ ಕಾಣಸಿಗುತ್ತದೆ.

**ನಂದಿ ಮಂಟಪ:**

ವಿರೂಪಾಕ್ಷ ದೇವಾಲಯದ ಪೂರ್ವ ಮಹಾದ್ವಾರದ ನಂತರ ನಮಗೆ ಕಾಣಸಿಗುವುದು ಸುಂದರವಾದ ನಂದಿ ಮಂಟಪ ಹಾಗೂ ಸುತ್ತಲಿನ ಎತ್ತರದ ಗೋಡೆಯಲ್ಲಿ ಕಾಣಬರುವ ಪರಿವಾರ ದೇವತೆಗಳ ಕೋಷ್ಠಗಳು, ಪಿರ್ಯಾಮಿಡ್ ಆಕಾರದ ಶಿಖರ ದೃಶ್ಯಗಳುಂಟು. ಇಲ್ಲಿ ನಿರ್ಮಿತಗೊಂಡ ನಂದಿ ಮಂಟಪವು ಸುಮಾರು 5 ಅಡಿ ಎತ್ತರದ ಅಧಿಷ್ಠಾನದ ಮೇಲಿದೆ. ಚಚ್ಚೌಕಾಕಾರದಲ್ಲಿದೆ. ಈ ಮಂಟಪದ ಅಧಿಷ್ಠಾನವು ಉಪಾನ ಭಾಗವನ್ನು ಹೊಂದಿದೆಯಲ್ಲದೇ ಅದರ ಮೇಲೆ ಆನೆ, ಸಿಂಹಗಳನ್ನು ಸಂಯೋಜಿಸಲಾಗಿದೆ. ನಂದಿ ಮಂಟಪದ ಮಾಡಗಳಲ್ಲಿ ಸುಂದರ ಹಾಗೂ ಆಕರ್ಷಕವಾದ ಲಲನೆಯರ ಶಿಲ್ಪಗಳಿವೆ. ಮಂಟಪದ ಕಂಬಗಳಲ್ಲಿ ಕೆಲವು ಮಿಥುನ ಶಿಲ್ಪಗಳು ನಮ್ಮನ್ನು ಆಕರ್ಷಿಸುತ್ತವೆ. ನಂದಿ ಮಂಟಪದ ಮಧ್ಯದ ನಾಲ್ಕು ಕಂಬಗಳು ಮೇಲ್ ಛತ್ತಿಗೆ ಆಧಾರವಾಗಿವೆ. ಈ ಮಂಟಪದ ಮೇಲ್ಛಾವಣಿಯು ಚಪ್ಪಟೆಯಾಕಾರದ್ದಾಗಿದೆ. ಇದರ ಮೇಲಿನ ವಿನ್ಯಾಸ ಗುಪ್ತರ ವಾಸ್ತು ರಚನೆಯನ್ನು ನೆನಪಿಸುವಂತೆ ಮಾಡುವುದೆಂದು ಡಾ. ಶೀಲಾಕಾಂತ ಪತ್ತಾರ ಹೇಳುತ್ತಾರೆ. (ಪಟ್ಟದಕಲ್ಲು ದರ್ಶನ ಪುಟ–33) ನಂದಿ ಮಂಟಪದ ಮಧ್ಯ ಭಾಗದಲ್ಲಿ ಕಪ್ಪು ಶಿಲೆಯಲ್ಲಿ ನಿರ್ಮಿತಗೊಂಡ ಐದೂವರೆ ಅಡಿ ಎತ್ತರ ಒಂಭತ್ತು ಅಡಿ ಉದ್ದಳತೆಯನ್ನು ಹೊಂದಿದ ನಂದಿ ವಿಗ್ರಹವು ಆಕರ್ಷಣೀಯವಾಗಿದೆ. ಪಶ್ಚಿಮಾಭಿಮುಖವಾಗಿರುವ ಈ ಶಿಲ್ಪವು ವಿರೂಪಾಕ್ಷ ದೇವಾಲಯದ ಗರ್ಭಗೃಹದಲ್ಲಿ ಪ್ರತಿಷ್ಠಾಪನೆಗೊಂಡ ಶಿವಲಿಂಗವನ್ನೇ ನೋಡುತ್ತಿರುವಂತೆ ಭಾಸವಾಗುತ್ತದೆ.



ನಂದಿ ಮಂಟಪ

**ವಿರೂಪಾಕ್ಷ ದೇವಾಲಯದ ಪ್ರವೇಶದ್ವಾರ :**

ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ ಪರಿಸರದಲ್ಲಿರುವ ನಂದಿ ಮಂಟಪದ ಅಧಿಷ್ಠಾನದಷ್ಟೇ ಎತ್ತರದಲ್ಲಿ ರೂಪಿತಗೊಂಡ ವಿರೂಪಾಕ್ಷ ದೇವಾಲಯದ ವಾಸ್ತುಶಿಲ್ಪಕ್ಕೆ ಮೂರು ದಿಕ್ಕಿನಲ್ಲಿಯೂ ಪ್ರವೇಶ ದ್ವಾರಗಳನ್ನು ಕಲ್ಪಿಸಲಾಗಿದೆ. ನಂದಿ ಮಂಟಪಕ್ಕೆದುರಾಗಿರುವ ಪ್ರವೇಶ ದ್ವಾರವನ್ನು ಪೂರ್ವಕ್ಕೆ ರೂಪಿಸಿದ್ದರೆ ಇನ್ನುಳಿದ ಎರಡು ಪ್ರವೇಶದ್ವಾರಗಳು ದಕ್ಷಿಣ ಮತ್ತು ಉತ್ತರ ದಿಕ್ಕಿನಲ್ಲಿವೆ. ಈ ಮುಖ ಮಂಟಪದಲ್ಲಿ ನಮ್ಮ

ಗಮನ ಸೆಳೆಯುವ ದ್ವಾರಪಾಲಕರು, ಮಿಥುನ ಶಿಲ್ಪಗಳು, ಶಂಖನಿಧಿ, ಪದ್ಮನಿಧಿ, ದೇವತೆಗಳ ಶಿಲ್ಪಗಳು, ಶಾಸನಗಳು ನೋಡ ಬರುವ ಕಲಾರಸಿಕರಿಗೆ ವಿನೂತನ ಅನುಭವಗಳನ್ನು ನೀಡುತ್ತವೆ.

**ವಿಶಾಲ ಸಭಾ ಮಂಟಪ:**

ಎತ್ತರದ ಅಧಿಷ್ಠಾನದ ಮೇಲೆ ರಚನೆಗೊಂಡಿರುವ ವಿರೂಪಾಕ್ಷ ದೇವಾಲಯದ ತಲವಿನ್ಯಾಸವು ವಿಶಾಲತೆಯಿಂದೊಡಗೂಡಿದೆ. ಅಧಿಷ್ಠಾನವು ಭೂಪಾತಳಿಯಿಂದ ಐದು ಅಡಿ ಎತ್ತರವಾಗಿದೆ. ಚೌಕಾಕಾರದ ವಿಶಾಲ ಸಭಾ ಮಂಟಪವನ್ನು ಗೋಡೆಯೊಳಗಿನ 16 ಕಂಭಗಳೊಂದಿಗೆ, ಮತ್ತೇ 18 ಕಂಭಗಳ ಮೇಲೆ ಛತ್ತು ರೂಪಿಸಲಾಗಿದೆ. ಇದನ್ನು ಮೇಲ್ಗಂಡವೆಂತಲೂ ಕರೆಯಲಾಗುತ್ತಿದ್ದು, ಈ ಸಭಾಮಂಟಪಕ್ಕೆ ಗಾಳಿ, ಬೆಳಕುಂಟಾಗಲು ಜಾಲಂಧರಗಳಿವೆ. ಸಭಾಮಂಟಪದ ಒಂದೊಂದು ಕಂಬಗಳೂ ಪೌರಾಣಿಕ ಪ್ರಸಂಗದ ಕಥೆ ಹೇಳುತ್ತವೆ. ಪ್ರಧಾನ ಗರ್ಭಗೃಹದ ಸುತ್ತಲೂ ಪ್ರದಕ್ಷಿಣಾಪಥವಿದೆ. ಈ ದೇವಾಲಯವು ಇಂದಿಗೂ ಪೂಜೆಗೊಳ್ಳುವ ದೇವಾಲಯವಾಗಿದ್ದು ಗರ್ಭಗೃಹದಲ್ಲಿ ಶಿವಲಿಂಗವಿದೆ. ಅದರ ಲಿಂಗಪೀಠವು ಮೂರು ಅಡಿ ಎತ್ತರವಾಗಿದ್ದರೆ, ಅದರಲ್ಲಿ ಸಂಯೋಜಿಸಲ್ಪಟ್ಟ ಲಿಂಗವು ಎರಡು ಅಡಿ ಎತ್ತರವಾಗಿದೆ. ಕಪ್ಪು ಶಿಲೆಯಲ್ಲಿ ನುಣುಪಾಗಿ ಕೆತ್ತನೆಗೊಂಡಿರುವ ಈ ಲಿಂಗವು ಬಹಳ ಆಕರ್ಷಣೀಯವಾಗಿದೆ. ಐದುವರೆ ಅಡಿ ಚಚ್ಚೌಕಾಕಾರದ ಪಾಣಿಪೀಠ ಒಪ್ಪುವಂತಿದೆ.

ವಿರೂಪಾಕ್ಷ ದೇವಾಲಯದ ಗರ್ಭಗೃಹದ ಬಾಗಿಲವಾಡದ ಮೇಲೆ ನಮಗೆ ಕಲಾತ್ಮಕವಾದ ಮಕರ ತೋರಣ ಕಾಣಸಿಗುತ್ತದೆ. ಬಾಗಿಲವಾಡದ ಎಡಬಲಗಳಲ್ಲಿ ದ್ವಾರಪಾಲಕರ ವಿಗ್ರಹಗಳುಂಟು. ಗರ್ಭಗೃಹದ ಪ್ರವೇಶ ಮಾಡಬೇಕಾದಲ್ಲಿ ಎರಡು ಪಾವಟಿಕೆಗಳನ್ನೇರಿಯೇ ನಾವು ಹೋಗಬೇಕು. ಇಲ್ಲಿಯೇ ಅಂತರಾಳವನ್ನು ಶಿಲ್ಪಿಗಳು ಸಂಯೋಜಿಸಿದ್ದಾರೆ. ಅಂತರಾಳ ಮತ್ತು ಗರ್ಭಗೃಹವನ್ನು ಪ್ರತ್ಯೇಕಿಸುವಂತೆ ಭತ್ತಿನಲ್ಲಿ ದೈತ್ಯಾಕಾರದಲ್ಲಿರುವ ತೊಲೆಯಿದೆ. ಈ ಗರ್ಭಗೃಹದಲ್ಲಿ ಮುಖ್ಯ ದೇವರ ವಿಗ್ರಹ ಬಿಟ್ಟರೆ ಮತ್ತೆ ಯಾವುದೇ ಶಿಲ್ಪಾಲಂಕಾರ ನಮಗೆ ಕಾಣಸಿಗುವುದಿಲ್ಲವಾದರೂ ಈ ವಿರೂಪಾಕ್ಷ ದೇವಾಲಯದ ಗರ್ಭಗೃಹವು ಅನೇಕ ಶಿಲ್ಪ ಕೌಶಲ್ಯಗಳಿಂದೊಡಗೂಡಿದೆ. ಈ ಗರ್ಭಗೃಹದ ಎಡಬಲಗಳಲ್ಲಿ ಮತ್ತೆರಡು ಚಿಕ್ಕ ಗರ್ಭಗೃಹಗಳನ್ನು ರೂಪಿಸಲಾಗಿದೆ. ಎಡಭಾಗದ ಚಿಕ್ಕ ಗರ್ಭಗೃಹದಲ್ಲಿ ಮಹಿಷಾಸುರಮರ್ದಿನಿ ಮೂರ್ತಿಯು ಪ್ರತಿಷ್ಠಾಪಿಸಲ್ಪಟ್ಟಿದೆ. ಅದಕ್ಕೆದುರಾಗಿರುವ ಇನ್ನೊಂದು ಬಲಭಾಗದ ಚಿಕ್ಕ ಗರ್ಭಗೃಹದಲ್ಲಿ ಯಾವುದೇ ವಿಗ್ರಹವಿಲ್ಲ. ಈ ಗರ್ಭಗೃಹಗಳನ್ನು ಬಳಸಿಕೊಂಡೇ ನಾವು ಪ್ರಧಾನ ಗರ್ಭಗೃಹವನ್ನು ಸುತ್ತು ಹಾಕಲು ಪ್ರದಕ್ಷಿಣಾ ಪಥವನ್ನು ವಾಸ್ತುಶಿಲ್ಪಿಗಳು ಇಲ್ಲಿ ರೂಪಿಸಿದ್ದಾರೆ.



ವಿರೂಪಾಕ್ಷ ದೇವಾಲಯದ ಪ್ರವೇಶದ್ವಾರ

ಬೃಹತ್ ಪ್ರಮಾಣದ ವಿಶಾಲವಾದ ಸಭಾಮಂಟಪದ ವಿರೂಪಾಕ್ಷ ದೇವಾಲಯವನ್ನು ನೋಡುವುದೇ ಒಂದು ಸೊಗಸು. 50’–8” X 45’-10” ಅಳತೆಯ ಈ ಮಂಟಪದಲ್ಲಿ ಸಂಯೋಜಿಸಿದ

ಒಂದೊಂದು ಕಂಭಗಳೂ ಕಲಾತ್ಮಕವಾಗಿ ರೂಪುಗೊಂಡಿವೆ. ಈ ಸಭಾಭವನದ ಒಂದೊಂದು ಕಂಭಗಳಲ್ಲಿಯೂ ವಿಶೇಷವಾದ ಕಥಾನಕಗಳಿದ್ದು ಕಲಾತ್ಮಕವಾಗಿ ಶಿಲ್ಪಿಗಳು ತಮ್ಮ ಕೌಶಲ್ಯವನ್ನು ಅಭಿವ್ಯಕ್ತಗೊಳಿಸಿದ್ದಾರೆ. ಇಲ್ಲಿನ 18 ಕಂಭಗಳಲ್ಲಿಯೂ ವೈವಿಧ್ಯ ಕಲಾತ್ಮಕ ಕೆತ್ತನೆ ಕಾರ್ಯ ನೋಡುವವರನ್ನು ಮುದಗೊಳಿಸುತ್ತದೆ. ಈ ದೇವಾಲಯದ ಸುತ್ತಲಿನ ಹೊರ ಗೋಡೆಯಲ್ಲಿ ಕಾಣಸಿಗುವ ಒಂದೊಂದು ಶಿಲ್ಪಗಳು ಸುಂದರವಾಗಿ ರೂಪುಗೊಂಡಿವೆ. ಪಟ್ಟದಕಲ್ಲಿನ ಪರಿಸರದಲ್ಲಿಯ ಒಂದೊಂದು ವಾಸ್ತುಶಿಲ್ಪಗಳು ಚಾಲುಕ್ಯ ಶಿಲ್ಪಕಲೆಯು ಔನತ್ಯವನ್ನು ಸಾರುವಂತೆ ನಿರ್ಮಾಣಗೊಂಡಿವೆ. ಶಿಲ್ಪಾಲಂಕಾರದ ಪರಿಪೂರ್ಣತೆಯನ್ನಿಲ್ಲಿ ಕಲಾರಸಿಕರು ಕಾಣಬಹುದು. ಈ ದೇವಾಲಯದಲ್ಲಿಯ ಪೂರ್ವ ಮುಖಮಂಟಪದಂತೆ ದಕ್ಷಿಣ ಹಾಗೂ ಉತ್ತರ ಮುಖಮಂಟಪ-ಗಳೂ ಎತ್ತರದ ಪಾವಟಿಗೆಗಳನ್ನು ಹೊಂದಿದ್ದು ಅಲ್ಲಿ ಕೆಲವು ಪೌರಾಣಿಕ ಸನ್ನಿವೇಶಗಳನ್ನಾಧರಿಸಿದ ವಿಗ್ರಹಗಳು, ದ್ವಾರಪಾಲಕರ ಶಿಲ್ಪಗಳು ಕಣ್ಣಿಗೆಕಟ್ಟುವಂತಿವೆ.



ಕಂಬಗಳ ಕಲಾಕೌಶಲ್ಯ



ಹೊರಗೋಡೆಗಳಲ್ಲಿ ಚಾಲುಕ್ಯ ಶಿಲ್ಪಿಗಳು ತಮ್ಮ ಅಪ್ರತಿಮ ಕಲಾ ವೈಖರಿಯನ್ನು ಸೂರೆಗೊಳಿಸಿದ್ದಾರೆ. ಗೂಡುಗಳಲ್ಲಿ ಸಂಯೋಜಿಸಿದ ಒಂದೊಂದೂ ವಿಗ್ರಹಗಳನ್ನು ನೋಡಿದಷ್ಟೂ ಖುಷಿ ಪಡಿಸುತ್ತವೆ. ಈ ದೇವಾಲಯದ ಸುತ್ತಲೂ ಕಾಣಬರುವ ಶಿವ, ನಟರಾಜ, ಲಿಂಗೋದ್ಭವಶಿವ, ಲಕುಲೀಶರ ಮೂರ್ತಿಗಳು, ರಸಿಕ ದಂಪತಿಗಳ, ಹಾಗೂ ರಾಮಾಯಣಕ್ಕೆ ಸಂಬಂಧಿಸಿದ ಶಿಲ್ಪಗಳು, ದಶಾವತಾರಕ್ಕೆ ಸಂಬಂಧಿಸಿದ ವಿಗ್ರಹಗಳು ಬಹಳ ಕಲಾತ್ಮಕವಾಗಿವೆ.

ಈ ವಿರೂಪಾಕ್ಷ ದೇವಾಲಯ (ಲೋಕೇಶ್ವರ) ಕ್ರಿ.ಶ. 740ರಲ್ಲಿ ನಿರ್ಮಾಣಗೊಂಡ ಅಪ್ರತಿಮ ದೇವಾಲಯವೆಂದು ಇತಿಹಾಸ ತಜ್ಞರು ಅಭಿಪ್ರಾಯ ಪಡುತ್ತಾರೆ. ಇಮ್ಮಡಿ ವಿಕ್ರಮಾದಿತ್ಯನ ಹಿರಿಯ ಪಟ್ಟದರಸಿಯಾದ ಲೋಕಮಹಾದೇವಿ ಕಟ್ಟಿಸಿದ ಈ ದೇವಾಲಯವು ಎರಡು ಮಹಾದ್ವಾರಗಳು, ವಿಶಾಲವಾದ ಪ್ರಾಕಾರ, ಪರಿವಾರ ದೇವತೆಗಳನ್ನು, ಸಾಂಧಾರ ಶೈಲಿಯಲ್ಲಿ ಅಮರ ವಾಸ್ತುಶಿಲ್ಪವೆಂಬಂತೆ ರೂಪಿಸಿದ್ದು ನಮಗೆ ಕಾಣುತ್ತದೆ. ಈ ದೇವಾಲಯಕ್ಕೆ ಸಂಯೋಜಿಸಿದ ದ್ರಾವಿಡ ವಿಮಾನ ಶೈಲಿಯ ಶಿಖರ ವಿನ್ಯಾಸವು ಇನ್ನಷ್ಟು ಕಲಾತ್ಮಕವಾಗಿ ರೂಪುಗೊಂಡಿರುವುದು, ಶಿಖರಕ್ಕೆ ಶುಕನಾಶಿಯು ರೇಖಾನಾಗರ ಶೈಲಿಯಲ್ಲಿ ಕಲ್ಪಿತಗೊಂಡು ದ್ರಾವಿಡ ವಿಮಾನಕ್ಕೆ ಜೋಡಿಸಿದ ವಿಶಿಷ್ಟವಾದ ಪ್ರಯೋಗವು ಚಾಲುಕ್ಯ ವಾಸ್ತುಶಿಲ್ಪಿಗಳ ಈ ದೇವಾಲಯದಲ್ಲಿ ಮಾತ್ರ ನಮಗೆ ಕಾಣಸಿಗುತ್ತದೆ.

ಪಟ್ಟದಕಲ್ಲಿನಲ್ಲಿನ ವಿರೂಪಾಕ್ಷ ದೇವಾಲಯ ಚಾಲುಕ್ಯರ ಸರ್ವಶ್ರೇಷ್ಠ ವಾಸ್ತುಶಿಲ್ಪವೆಂದೇ ಹೇಳಬಹುದು. ಇಲ್ಲಿ ಪರಿಣಿತ ಶಿಲ್ಪಿಗಳು ಸಂಯೋಜಿಸಿದ ವಿವಿಧ ಶಿಲ್ಪಗಳು, ವಾಸ್ತುಶಿಲ್ಪ ತಂತ್ರಗಾರಿಕೆಯು,

ವಾಸ್ತು ಅಂಗಗಳು ಇನ್ನಾವುದೇ ದೇವಾಲಯಗಳಲ್ಲಿ ಕಾಣುವುದು ದುರ್ಲಭ. ಈ ಅಪ್ರತಿಮ ವಾಸ್ತು ನಿರ್ಮಾಣಗೈದ ಸರ್ವಸಿದ್ಧಿ ಆಚಾರಿ, ಗುಂಡ ಅನಿವಾರಿತಾಚಾರಿಯರ ಗುಣಗಾನ ಮಾಡಿದ ಶಾಸನಗಳ ಪ್ರೌಢಿಮೆ ಒಂದೆಡೆಗಿದ್ದರೆ ಅದಕ್ಕೆ ಮಿಗಿಲಾದ ಪ್ರಶಂಸನಾ ಪೂರ್ಣ ಸುಂದರ ವಿಗ್ರಹಗಳು ಇನ್ನೊಂದೆಡೆಯಲ್ಲಿ ನಮ್ಮನ್ನು ಆಕರ್ಷಿಸುತ್ತವೆ. ಇಂಥ ಸುಂದರ ಶಿಲ್ಪಗಳು ಅಲ್ಲಲ್ಲಿ ಶಿಥಿಲವಾಗಿರುವುದು ಬೇಸರವನ್ನುಂಟು ಮಾಡುತ್ತವೆ. ಒಟ್ಟಾರೆ ಈ ಸುಂದರ ದೇವಾಲಯದ ಬಹುಪಾಲು ಕಲಾಕೃತಿಗಳು ನಮ್ಮನ್ನು ಯಾವುದೋ ಒಂದು ಭ್ರಮಾಲೋಕಕ್ಕೆ ಕರೆಯೊಯ್ಯುತ್ತವೆಯೆಂಬ ಮಾತು ಸುಳ್ಳಲ್ಲ.

**ವಿರೂಪಾಕ್ಷ ದೇವಾಲಯದ ಅಪ್ರತಿಮ ಶಿಲ್ಪಗಳು:**

ವಿರೂಪಾಕ್ಷ ದೇವಾಲಯದ ಕಂಬಗಳಲ್ಲಿ ಅರಳಿಕೊಂಡಿರುವ ವೈವಿಧ್ಯಮಯವಾದ ಶಿಲ್ಪಗಳು ಸುಂದರವಾದ ರೀತಿಯಲ್ಲಿ ಕೆತ್ತಲ್ಪಟ್ಟಿವೆ. ಇಲ್ಲಿನ ಹದಿನೆಂಟು ಕಂಬಗಳಲ್ಲಿ ಅಪ್ರತಿಮ ಕಲಾಕೃತಿಗಳನ್ನು ನೋಡಲು ಸಾಧ್ಯವಿದೆ.



ಹೊರಗೋಡೆಯ ಕಲಾವೈಭವ

ನಾವು ಗರ್ಭಗೃಹದ ಎದುರಿನ 1ನೇ ಕಂಭದಿಂದ ನೋಡಲು ಆರಂಭಿಸಿದರೆ ಆಶ್ರಮದ ವಾತಾವರಣದಲ್ಲಿಯ ಮುನಿ ಹಾಗೂ ಶಿಷ್ಯವೃಂದ, ಅದರ ಕೆಳಗಿನ ಪಟ್ಟಿಯಲ್ಲಿ ಮರದ ನೆರಳಿನಲ್ಲಿ ವಿಶ್ರಾಂತಿ ಪಡೆಯುವ ಸ್ತ್ರೀ ಶಿಲ್ಪ, ಹಾಗೆಯೇ ಕೆಳಕ್ಕೆ ದೃಷ್ಟಿ ಹರಿಸಿದರೆ ಇಂಧ್ರ ತಿಲೋತ್ತಮೆಯರು, ಅದರ ಕೆಳಗಿರುವ ಅರ್ಧವರ್ತುಳಾಕಾರದಲ್ಲಿ ಆನೆಯು ಕುದುರೆಯನ್ನು ತುಳಿಯುತ್ತಿರುವ ದೃಶ್ಯ ಮೂಡಿ ಬಂದಿದೆ. ಹೀಗೆಯೇ ವಿವಿಧ ಕಂಭಗಳಲ್ಲಿಯ ಸಮುದ್ರ ಮಂಥನ, ಕಮಲದ ಮೇಲಿರುವ ಶಿವ, ವಾದ್ಯ ನುಡಿಸುತ್ತಿರುವ ಸಂಗೀತಗಾರರು, ಮಹಾಭಾರತ ಪ್ರಸಂಗದ ಕಿರಾತಾರ್ಜುನ ಪ್ರಸಂಗದ ಶಿಲ್ಪ ರಾಮಾಯಣದಲ್ಲಿ ಬರುವ ಲಂಕಾಧಿಪತಿ, ಹನುಮಂತನ ಶಿಲ್ಪ ಇಬ್ಬರು ಮಹಿಳೆಯರನ್ನು ಹೊತ್ತೊಯ್ಯುತ್ತಿರುವ ಪುರುಷರು, ಟಗರಿನ ಕಾಳಗ, ಮಿಥುನ ಶಿಲ್ಪಗಳು, ಶರಪಂಜರದ ಮೇಲೆ ಮಲಗಿದ ಭೀಷ್ಮ, ವೈಶಂಪಾಯನ ಸರೋವರದಲ್ಲಿಯ ದುರ್ಯೋಧನ ಹಾಗೂ ಗಧಾಯುದ್ಧದಲ್ಲಿಯ ಭೀಮ-ದುರ್ಯೋಧನರ ಚಿತ್ರ, ಸೀತಾಪಹರಣ, ಮಾರ್ಕಂಡೇಯ ಭಗೀರಥ-ಗಂಗಾ ನದಿಯನ್ನು ಭೂಲೋಕಕ್ಕೆ ತಂದ ದೃಶ್ಯ, ಸಂಗೀತಲೋಲ ಶಿವ ಪಾರ್ವತಿಯರು, ಗಿರಿಜಾಕಲ್ಯಾಣ ಸನ್ನಿವೇಶ, ರಸಿಕ ದಂಪತಿಗಳು, ದಕ್ಷಬ್ರಹ್ಮನ ಯಜ್ಞಪ್ರಸಂಗ ದೇವಿಯು ಸಿಂಹಾರೂಢಳಾದ ಪ್ರಸಂಗ, ಕೃಷ್ಣನು ಗೋವರ್ಧನ ಗಿರಿಯನ್ನು ಕಿರು ಬೆರಳಿನಿಂದ ಎತ್ತಿ ಹಿಡಿದಿರುವ ಹಲವಾರು ಭಾಗವತ ಸನ್ನಿವೇಶಗಳನ್ನು ಪರಿಚಯಿಸುವ ಒಂದೊಂದು ಶಿಲ್ಪಗಳು ಆಕರ್ಷಕವಾಗಿ ಇಲ್ಲಿನ ಕಂಭಗಳಲ್ಲಿ ಅಲಂಕೃತಗೊಂಡಿವೆ.

ಈ ಹದಿನೆಂಟು ಕಂಭಗಳ ಜತೆಯಲ್ಲಿ ಮತ್ತು ಹದಿನಾರು ಅರ್ಧ ಕಂಭಗಳಲ್ಲಿ ಸಭಾಮಂಟಪವು ಗೋಡೆಗಳ ಆಧಾರದಲ್ಲಿ ನಿಂತು ಕೊಂಡಿದ್ದು ಈ ಅರ್ಧಕಂಭಗಳಲ್ಲಿ ಮಧ್ಯಮ ಗಾತ್ರದಲ್ಲಿರುವ ರಸಿಕ ದಂಪತಿಗಳು, ಅಂದಿನ ಸಮಕಾಲೀನ ಜೀವನದ ಹಲವಾರು ಸನ್ನಿವೇಶಗಳ ಶಿಲ್ಪಗಳು ಕಾಣಸಿಗುತ್ತವೆ. ಅಂದಿನ ಕಾಲದಲ್ಲಿ ಉಪಯೋಗಿಸುತ್ತಿದ್ದ ಆಭರಣಗಳು, ಕೇಶ ವಿನ್ಯಾಸದ ಕ್ರಮಗಳನ್ನು ಅಲ್ಲಿನ ಶಿಲ್ಪಗಳು ಪರಿಚಯಿಸುತ್ತವೆ.

ದೇವಾಲಯದ ಹೊರ ಗೋಡೆಗಳಲ್ಲಿ ಕೆತ್ತಿ ಸಂಯೋಜನೆಗೊಳಿಸಿರುವ ಸುಂದರವಾದ ನರಸಿಂಹ, ನಟರಾಜ, ಗಜೇಂದ್ರ ಮೋಕ್ಷ, ಲಿಂಗೋದ್ಭವ ಶಿವ, ಲಕುಲೀಶ ಮೊದಲಾದವರ ಶೈವ ಮೂರ್ತಿಗಳು ಆಕರ್ಷಣೀಯವಾಗಿ ರೂಪುಗೊಂಡಿವೆ. ರಾಮ ಲಕ್ಷ್ಮಣ ಸೀತೆ, ಮಾರೀಚರರೊಂದಿಗಿನ ದೃಶ್ಯ ಲಕ್ಷ್ಮಣ ಶೂರ್ಪಣಖಿ ಸಂದರ್ಭದ ವಿಗ್ರಹಗಳು ಕಾಣಸಿಗುತ್ತವೆ. ಈ ದೇವಾಲಯದ ಹೊರಗೋಡೆಗೆ ಒಂದು ಆಕರ್ಷಕವಾದ ಹಿರಿಮೆಯನ್ನು ಕಲ್ಪಿಸಿರುವ ಈ ಒಂದೊಂದು ಶಿಲ್ಪಗಳಲ್ಲೂ ಶಿಲ್ಪಿಯ ಕೈಚಳಕದ ಪರಿಚಯ ನಮಗಾಗುತ್ತದೆ. ಪಟ್ಟದಕಲ್ಲಿನ ಈ ಅಪೂರ್ವ ವಾಸ್ತುಶಿಲ್ಪವು ಉತ್ಕೃಷ್ಟ ಮಟ್ಟದ ಕಲಾ ಶ್ರೀಮಂತಿಕೆಯನ್ನು ಸಾರುತ್ತವೆ.

**ಮಲ್ಲಿಕಾರ್ಜುನ ದೇವಾಲಯ:**

ಪಟ್ಟದಕಲ್ಲಿನಲ್ಲಿ ನಿರ್ಮಾಣಗೊಂಡಿರುವ ಈ ದೇವಾಲಯು ವಿರೂಪಾಕ್ಷ ದೇವಾಲಯದಂತೆಯೇ ವಿಶಾಲವಾದದ್ದಾಗಿದೆ. ಅಕ್ಕ ಲೋಕಮಹಾದೇವಿಯು ವಿರೂಪಾಕ್ಷ ದೇವಾಲಯವನ್ನು ಕಟ್ಟಿಸಿದಂತೆ ತಂಗಿ ತ್ರೈಲೋಕ್ಯ ಮಹಾದೇವಿ ಕಟ್ಟಿಸಿದ ವಾಸ್ತುಶಿಲ್ಪ ಮಲ್ಲಿಕಾರ್ಜುನ ದೇವಾಲಯ. ಇವೆರಡೂ ಚಾಲುಕ್ಯ ಅರಸರು ನಿರ್ಮಿಸಿದ ದೇವಾಲಯಗಳಲ್ಲಿಯೇ ಅಗ್ರಸ್ಥಾನ ಪಡೆದಂಥವು. ಈ ದೇವಾಲಯದ ನಿರ್ಮಾಣವು ಕ್ರಿ.ಶ. 740ರಲ್ಲಿಯಾಗಿದ್ದು ವಿಸ್ತಾರದಲ್ಲಿ ಈ ಮಲ್ಲಿಕಾರ್ಜುನ ದೇವಾಲಯ ಚಿಕ್ಕದೆಂದು ಕಾಣುತ್ತದೆ. (84' x 56') ಈ ಎರಡೂ ವಾಸ್ತುಶಿಲ್ಪಗಳಲ್ಲಿಯ ಅರೆಕಂಭಗಳು, ಕಂಭಗಳು ಜಾಲಂಧರಗಳು, ಹೊರಗೋಡೆಗಳು ಒಂದೇ ರೀತಿಯಲ್ಲಿರುವುದು ನಮ್ಮ ಗಮನಕ್ಕೆ ಬರುತ್ತವೆ. ಈ ದೇವಾಲಯುದಲ್ಲೂ ಮಹಾಭಾರತ, ರಾಮಾಯಣ, ಭಾಗವತಕ್ಕೆ ಸಂಬಂಧಿತ ಶಿಲ್ಪ ಪ್ರಯೋಗಗಳಿದ್ದು, ಕೆಲವೆಡೆಯಲ್ಲಿ ಪುನ: ಮೂಡಿ ಬಂದಂತೆ ಕಾಣುತ್ತವೆ. ವಿರೂಪಾಕ್ಷ ದೇವಾಲಯ ನಿರ್ಮಿಸಿದ ಶಿಲ್ಪ ಸ್ಥಪತಿಗಳೇ ಈ ದೇವಾಲಯದ ಸೂತ್ರಧಾರಿಗಳೇ ಇರಬಹುದೆಂಬ ತರ್ಕ ನಮ್ಮ ಶಿಲ್ಪ ಶಾಸ್ತ್ರಜ್ಞರದು.



ಮಲ್ಲಿಕಾರ್ಜುನ ದೇವಾಲಯದ ಊರ್ಧ್ವನೋಟ



ಮಲ್ಲಿಕಾರ್ಜುನ ದೇವಾಲಯದ ತಲವಿನ್ಯಾಸ


ಮಲ್ಲಿಕಾರ್ಜುನ ದೇವಾಲಯ

ಮಲ್ಲಿಕಾರ್ಜುನ ದೇವಾಲಯವೂ ವಿಶಾಲವಾಗಿದ್ದು, ಇದಕ್ಕೂ 3 ಮುಖಮಂಟಪಗಳು, ವಿಸ್ತ್ರತವಾದ ಸಭಾಮಂಟಪ, ಅಂತರಾಳವನ್ನು ಹೊಂದಿದ್ದು ಗರ್ಭಗೃಹ. ಅದರ ಸುತ್ತಲೂ ಪ್ರದಕ್ಷಿಣಾಪಥ, ಎರಡು ಚಿಕ್ಕ ಗಾತ್ರದ ಗರ್ಭಗೃಹಗಳನ್ನು ಹೊಂದಿದೆ. ವಿರೂಪಾಕ್ಷ ದೇವಾಲಯದ ಎದುರಿಗಿರುವಂತೆ ನಂದಿ ಮಂಟಪವು ಐದಡಿ ಎತ್ತರದ ಅಧಿಷ್ಠಾನದ ಮೇಲೆ ಕಟ್ಟಲ್ಪಟ್ಟಿದೆ. ಇದು ಮಲ್ಲಿಕಾರ್ಜುನ ದೇವಾಲಯದ ಎದುರಿನಲ್ಲಿ ಹತ್ತುಅಡಿ ಅಂತರದಲ್ಲಿ ಪ್ರತ್ಯೇಕವಾಗಿದೆ. ಈ ನಂದಿ ಮಂಟಪ ಅಪೂರ್ಣವಾಗಿದ್ದು ಕಂಡು ಬರುತ್ತದೆ. ಈ ಮಂಟಪದಲ್ಲಿ ಹಸಿರು ಕಲ್ಲಿನಲ್ಲಿ ಕೆತ್ತಿದ ನಂದಿ ವಿಗ್ರಹದ ಅವಶೇಷಗಳಿವೆ.

ಮಲ್ಲಿಕಾರ್ಜುನ ದೇವಾಲಯದ ಪೂರ್ವದ ಮುಖಮಂಟಪವು ಕಕ್ಷಾಸನದಿಂದ ಕೂಡಿದ್ದು ಗೋಡೆಗೆ ಹೊಂದಿಕೊಂಡಿರುವ ಎರಡು ಅರೆಕಂಭಗಳಲ್ಲಿಯೂ ದ್ವಾರಪಾಲಕರ ವಿಗ್ರಹಗಳಿವೆ, ಶಿಥಿಲಗೊಂಡ ಶಿಲ್ಪಗಳು ಕಾಣಸಿಗುತ್ತವೆ. ಎರಡು ಕಂಭಗಳು ಈ ಪೂರ್ವ ಮುಖ ಮಂಟಪದ ಛಾವಣಿಯನ್ನು ಹೊತ್ತು ನಿಂತಿವೆ.

ಈ ದೇವಾಲಯದ ಸಭಾಮಂಟಪದಲ್ಲಿಯೂ ಸಹ ಹದಿನೆಂಟು ಕಂಭಗಳಿವೆ. ಎಲ್ಲ ಕಂಬಗಳಲ್ಲಿಯೂ ಮಹಾಕಾವ್ಯ, ಪುರಾಣ, ಭಾಗವತದ ಹಿನ್ನೆಲೆಯ ಕಥಾನಕಗಳನ್ನು ಹೊಂದಿದ ಶಿಲ್ಪಗಳು ರೂಪುಗೊಂಡಿರುವುದನ್ನು ಕಾಣಬಹುದು. ಗೋಡೆಗಳಲ್ಲಿ ಸಂಯೋಜನೆ ಮಾಡಿರುವ ಜಾಲಂಧರಗಳು ದೇವಾಲಯದಲ್ಲಿ ಗಾಳಿ–ಬೆಳಕನ್ನು ತಂದಿವೆ. ಸಭಾಮಂಟಪವನ್ನು ಮಧ್ಯಾಂಕಣದ ಮೇಲ್ಗಂಡು ಹೊತ್ತು ನಿಂತಿದ್ದು, ಎಡಬಲಗಳಲ್ಲಿ ಅಂಕಣದ ಛತ್ತು ಇಳೀಜಾರಾಗಿದೆ. ಗರ್ಭಗೃಹಕ್ಕೆ ಹೊಂದಿಕೊಂಡ ಮೇಲ್ ಛತ್ತಿನಲ್ಲಿ ಗಜಲಕ್ಷ್ಮೀಯ ವಿಗ್ರಹವಿದೆ. ಎಡಬಲಗಳಲ್ಲಿ ಆನೆಯನ್ನು ಚಿತ್ರಿಸಲಾಗಿದೆ. ವಿದ್ಯಾಧರರೊಂದಿಗಿನ ವರ್ತುಲವಾದ ಕೆತ್ತನೆ ಬಹಳ ಸುಂದರವಾಗಿ ಕಾಣಸಿಗುತ್ತದೆ.

**ವಾಸ್ತು ವಿಶೇಷಗಳು:**

ಮಲ್ಲಿಕಾರ್ಜುನ ದೇವಾಲಯದ ವಿಶಾಲ ಸಭಾ ಮಂಟಪದಲ್ಲಿಯ ಹದಿನೆಂಟು ಕಂಭಗಳಲ್ಲಿಯೂ ರಾಮಾಯಣ, ಮಹಾಭಾರತ ಹಾಗೂ ಪಂಚತಂತ್ರಕ್ಕೆ ಸಂಬಂಧಿಸಿದ ಶಿಲ್ಪಗಳನ್ನು ಹೊಂದಿದ್ದು ಇವೆಲ್ಲವೂ

ವಿರೂಪಾಕ್ಷ ದೇವಾಲಯದಲ್ಲಿನ ಕಂಭಗಳಲ್ಲಿಯ ಶಿಲ್ಪಗಳನ್ನು ನೆನಪಿಗೆ ತರುತ್ತವೆ. ಕಂಭಗಳ ನಾಲ್ಕೂ ಮಗ್ಗಲಿನಲ್ಲಿ ಅಭಿವ್ಯಕ್ತಪಡಿಸಿದ ಶಿಲ್ಪಿಗಳ ಕಲ್ಪಕ ಶಕ್ತಿಯ ಪರಿಚಯ ನಮಗಾಗುತ್ತದೆ. ಇಲ್ಲಿನ ಮಹಾಮಂಟಪವು 47 ಅಡಿ ಉದ್ದವಾಗಿ , 39 ಅಡಿ 4 ಇಂಚು ಅಗಲಳತೆಯಲ್ಲಿದ್ದು ಇಲ್ಲಿನ ಕಂಭಗಳ ಮೇಲ್ಭಾಗದಲ್ಲಿ ಆನೆಗಳು ತೊಲೆಗಳನ್ನು ಎತ್ತಿ ಹಿಡಿದಂತೆ ಸಂಯೋಜಿಸಲಾಗಿದೆ. ತೊಲೆಗಳ ಕೆಳಭಾಗದಲ್ಲಿ ಗಂಧರ್ವ ದಂಪತಿಗಳು, ಛತ್ತಿನಲ್ಲಿರುವ ಗಜಲಕ್ಷ್ಮೀ, ನಂದಿ ಸಮೇತ ಶಿವ ಪಾರ್ವತಿಯರ ಶಿಲ್ಪಗಳು ಆಕರ್ಷಕವಾಗಿವೆ.

**ಕಂಭಗಳಲ್ಲಿಯ ಶಿಲ್ಪ ವಿಶೇಷಗಳು :**

ಮಲ್ಲಿಕಾರ್ಜುನ ದೇವಾಲಯದ ವಿಶಾಲ ಮಂಟಪದಲ್ಲಿರುವ ಹದಿನೆಂಟು ಕಂಭಗಳಲ್ಲಿ ಕಾಣಸಿಗುವ ಕೆಲವು ಆಕರ್ಷಣೀಯ ಶಿಲ್ಪಗಳ ಬಗೆಗೆ ಇಲ್ಲಿ ತಿಳಿಸಲೇಬೇಕು. ಈ ದೇವಾಲಯದ ಕಂಭಗಳಲ್ಲಿ ರಾಮಾಯಣ, ಮಹಾಭಾರತ ಪ್ರಸಂಗಗಳ ಕಥಾ ಚಿತ್ರಣಗಳೊಂದಿಗೆ ಪಂಚತಂತ್ರ ಕಥೆಯ ರಸಮಯ ಸನ್ನಿವೇಶಗಳನ್ನು ಇಲ್ಲಿ ಸುಂದರವಾಗಿ ಕೆತ್ತರಿಸಲಾಗಿದೆ. ಅಂದಿನ ಸಮಕಾಲೀನ ಬದುಕಿನ ಸಮಗ್ರ ಚಿತ್ರಣವನ್ನು ಸಹ ಶಿಲ್ಪಿಗಳು ಅಲ್ಲಲ್ಲಿ ತಮ್ಮ ಕಲ್ಪಕಶಕ್ತಿಯಿಂದ ಅಭಿವ್ಯಕ್ತಪಡಿಸಿದ್ದು ನಮ್ಮ ಗಮನಕ್ಕೆ ಬರುತ್ತದೆ. ಪಂಚತಂತ್ರದ ನೀತಿ ಕತೆಗಳು ಕಂಭಗಳಲ್ಲಿ ಚಿತ್ರಿತಗೊಂಡಿದ್ದು ಮತ್ತೆ ಮತ್ತೆ ನೋಡುವಂಥವು. ಹಿರಣ್ಯಕಶ್ಯಪನ ಸಂಹರಿಸುವ ದೃಶ್ಯ, ಗಣಶಿಲ್ಪಗಳು, ದಂಪತಿಗಳು, ಶಿವಪಾರ್ವತಿಯರು, ಗೋವರ್ಧನ ಗಿರಿಧಾರಿಯ ಶಿಲ್ಪ, ಕಾಲೀ ಮರ್ಧನ, ಸಂಗೀತಮೇಳ, ಮಂಗ ಮೊಸಳೆಯ ಚಿತ್ರ, ಹಾವು ಮುಂಗಸಿಯ ಕಥಾ ಚಿತ್ರಣ, ಪಾಂಡುರಾಜನ ಕಥಾ ಪ್ರಸಂಗ, ನರ್ತನದಲ್ಲಿ ತೊಡಗಿದ ರಸಿಕಜೋಡಿ, ಅಶೋಕವನದ ಸೀತೆ, ಕಿರಾತಾರ್ಜುನ ಸಂದರ್ಭದ ಶಿಲ್ಪ, ರಾಮ ಲಕ್ಷ್ಮಣನ ಸೀತೆಯರು ಆನೆಯೊಂದಿಗಿನ ಮಾವುತ ಅಶ್ವಾರೋಹಿಯ ಶಿಲ್ಪಗಳು ಕಂಭಗಳಲ್ಲಿ ಕೆತ್ತಲ್ಪಟ್ಟಿದ್ದು, ಅವು ಒಂದೊಂದು ಕುತೂಹಲಕಾರಿ ಕಥೆಯನ್ನೇ ತಿಳಿಸಿಕೊಡುತ್ತವೆ.

ಈ ಮಲ್ಲಿಕಾರ್ಜುನ ದೇವಾಲಯದ ಸಭಾ ಮಂಟಪದ ಒಳಗಿನ ಗೋಡೆಯ ಅರ್ಧಕಂಭಗಳಲ್ಲಿ ಹನ್ನೆರಡು ಮಿಥುನ ಶಿಲ್ಪಗಳು ಮೂರ್ತಗೊಂಡಿವೆ. ಅಂದಿನ ಬದುಕಿನ ವಿಶೇಷತೆಗಳನ್ನು ಪರಿಚಯಿಸುವ ಈ ರಸಿಕ ದಂಪತಿಗಳ ಶಿಲ್ಪಗಳಲ್ಲಿ ಕೇಶಾಲಂಕಾರ, ಆಭರಣಗಳ ಬಳಕೆಗೊಂಡಿರುವ ದೃಶ್ಯ ಕಾಣಸಿಗುತ್ತದೆ. ಈ ಸಭಾ ಮಂಟಪಕ್ಕೆ ಸಂಯೋಜಿಸಲಾದ ದಕ್ಷಿಣದ ಮುಖ ಮಂಟಪ ಹಾಗೂ ಉತ್ತರದ ಮುಖ ಮಂಟಪದಲ್ಲಿ ದ್ರಾವಿಡ ವಿಮಾನ ಶೈಲಿಯಲ್ಲಿ ಶಿಖರ ಮಾದರಿ ದ್ವಾರಪಾಲಕರು, ಕಕ್ಷಾಸನ, ಹಲವು ಶಿಲ್ಪಗಳು ನೋಡುವವರ ಗಮನವನ್ನು ಸೆಳೆಯುತ್ತವೆ.

**ಮುಖ್ಯ ಗರ್ಭಗೃಹ :**

ಮಲ್ಲಿಕಾರ್ಜುನ ದೇವಾಲಯದ ಪ್ರಧಾನ ಗರ್ಭಗೃಹವು ಅಂತರಾಳವನ್ನು ಒಳಗೊಂಡಿದ್ದು ಇವೆರಡನ್ನು ಎರಡು ಅರ್ಧ ಕಂಭಗಳು ಬೇರ್ಪಡಿಸಿವೆ. ಚೌಕಾಕಾರದ ಗರ್ಭಗೃಹದ ಬಾಗಿಲು ಚೌಕಟ್ಟಿನ ಗರುಡ ವಿಗ್ರಹವು ತನ್ನ ಎರಡೂ ಕೈಗಳಿಂದ ನಾಗಗಳನ್ನು ತೂರಿ ಬಿಟ್ಟಿದ್ದಾನೆ. ಅದಕ್ಕೂ ಮೇಲಿನ ಸಣ್ಣ ಮಂಟಪದಲ್ಲಿ ಶಿವಪಾರ್ವತಿಯರ ವಿಗ್ರಹಗಳಿವೆ. ಈ ಚೌಕಟ್ಟಿನ ಕೆಳಭಾಗದಲ್ಲಿ ನರ್ತಿಸುವ ವಿಗ್ರಹಗಳು, ಎರಡು ಅಮೃತ ಕಲಶಗಳು ಕಾಣಸಿಗುತ್ತವೆ. ದ್ವಾರದ ಎರಡೂ ಕಡೆಯ ಅರ್ಧ ಕಂಭಗಳ ಮೇಲೆ ಒಬ್ಬೊಬ್ಬ ದ್ವಾರ ಪಾಲಕರ ಮೂರ್ತಿಗಳಿವೆ.

ಗರ್ಭಗುಡಿಯಲ್ಲಿ ನಾಲ್ಕು ಅಡಿಯ ಎತ್ತರದ ಯೋನಿಪೀಠವಿದ್ದು, ಅದರ ಮೇಲೆ ಎರಡು ಅಡಿ ಎತ್ತರದ ಲಿಂಗವುಂಟು. ಈ ಲಿಂಗದ ಮೇಲ್‌ಭಾವಣಿಯಲ್ಲಿ ಕಮಲದ ಕೆತ್ತನೆಯಿದೆ. ಗರ್ಭಗೃಹ ಮತ್ತು ಶುಕನಾಶಿಯನ್ನು ಎರಡು ಅರ್ಧ ಕಂಭಗಳು ಬೇರ್ಪಡಿಸಿವೆ. ಈ ಪ್ರಧಾನ ಗರ್ಭಗೃಹದ ಎಡ ಬಲ ಭಾಗಗಳಲ್ಲಿ ಮತ್ತೆರಡು ಚಿಕ್ಕ ಗರ್ಭಗೃಹಗಳನ್ನು ಸ್ಥಪತಿಗಳು ಇಲ್ಲಿ ರೂಪಿಸಿದ್ದಾರೆ. ಅಲ್ಲಿ ಈಗ ಯಾವುದೇ ಮೂರ್ತಿಗಳನ್ನು ಪ್ರತಿಷ್ಠಾಪಿಸಿದ್ದು ಕಾಣುವುದಿಲ್ಲ. ಈ ಮುಖ್ಯ ಗರ್ಭಗೃಹದ ಸುತ್ತಲೂ ಪ್ರದಕ್ಷಿಣಾ ಪಥವಿದ್ದು, ಈ ಗರ್ಭಗೃಹದ ಹೊರಗೋಡೆಗಳಲ್ಲಿ ದಕ್ಷಿಣ, ಪಶ್ಚಿಮ ಹಾಗೂ ಉತ್ತರದಲ್ಲಿ ಮಾಡಗಳಿದ್ದು ಅಲ್ಲಿ ಯಾವುದೇ ಮೂರ್ತಿಗಳಿಲ್ಲ. ಗರ್ಭಗೃಹಕ್ಕೆ ಬೆಳಕು ಇಲ್ಲದ ಕಾರಣ ಅಂತರಾಳದ ಭಿತ್ತಿನಲ್ಲಿ ಕೆತ್ತಿರುವ ವಿಗ್ರಹಗಳು ಬೇಗನೇ ಕಣ್ಣಿಗೆ ಬೀಳುವುದಿಲ್ಲ.

ವಿರೂಪಾಕ್ಷ ದೇವಾಲಯದಲ್ಲಿಯ ಸಭಾ ಮಂಟಪ ಹಾಗೆ ಇಲ್ಲಿಯೂ ವಿಶಾಲವಾಗಿದ್ದು ಒಂದೊಂದು ಕಂಬಗಳಲ್ಲೂ ವೈವಿಧ್ಯ ಕಲ್ಪನೆಯಲ್ಲಿ ಕೆತ್ತಿದ ದೃಶ್ಯಗಳು ಆಕರ್ಷಣೀಯವಾಗಿವೆ. ದೇವಾಲಯದ ಹೊರಗೋಡೆಗಳಲ್ಲಿಯೂ ಈ ಮಲ್ಲಿಕಾರ್ಜುನ ದೇವಾಲಯದಲ್ಲಿ ಕೆಲವು ಸುಂದರವಾದ ವಿಗ್ರಹಗಳು ನಮಗೆ ನೋಡಲು ಸಿಕ್ಕುತ್ತವೆ. ದಕ್ಷಿಣದ ಗೋಡೆಯಲ್ಲಿ ಕೆತ್ತಲ್ಪಟ್ಟ ಶಿವನ ವಿವಿಧ ವಿಗ್ರಹಗಳು, ಪಶ್ಚಿಮ ಗೋಡೆಯಲ್ಲಿರುವ ನಟರಾಜ, ಅರ್ಧನಾರೀಶ್ವರ ವಿಗ್ರಹ, ಉತ್ತರದ ಗೋಡೆಯಲ್ಲಿರುವ ಚತುರ್ಭುಜ ಶಿವ ಅಪೂರ್ಣವಾದ ಕೆಲವು ಶಿಲ್ಪಗಳು, ಶಿಲ್ಪರಹಿತ ಮಾಡಗಳು ನಮ್ಮ ಗಮನಕ್ಕೆ ಬರುತ್ತವೆ.

ದ್ರಾವಿಡ ವಿಮಾನ ಶೈಲಿಯ ಶಿಖರ ವಿನ್ಯಾಸದಿಂದ ಅಲಂಕೃತಗೊಂಡ ಪಟ್ಟದಕಲ್ಲಿನ ಮಲ್ಲಿಕಾರ್ಜುನ ದೇವಾಲಯ ದ್ರಾವಿಡ ಶೈಲಿಯಲ್ಲಿ ರೂಪಿತಗೊಂಡಿದ್ದರೂ ಶಿಖರ ವಿನ್ಯಾಸದಲ್ಲಿ ಔತ್ತರೇಯ ವಾಸ್ತುಶಿಲ್ಪದ ಕೆಲವು ಅಂಶಗಳನ್ನು ಪ್ರಯೋಗಿಸಿದ್ದು ಕಾಣ ಸಿಗುತ್ತವೆ. ಅಲ್ಲಿ ನಟರಾಜನ ವಿಗ್ರಹವಿದ್ದು, ವೃತ್ತಾಕಾರದ ಸ್ತೂಪಿ ರಚಿಸಿರುವುದೊಂದು ವಿಶೇಷ. ಇದು ವೇಸರ ವಾಸ್ತುಶಿಲ್ಪ ಶೈಲಿಯ ಲಕ್ಷಣವೂ ಆಗಿದೆ ಎಂದು ಕೆಲವು ಶಿಲ್ಪ ಶಾಸ್ತ್ರಜ್ಞರು ಅಭಿಪ್ರಾಯ ಪಡುತ್ತಾರೆ. ಹಲವು ವೈವಿಧ್ಯ ಶಿಲ್ಪಗಳ ಸಂಗಮವಾಗಿರುವ ಈ ಮಲ್ಲಿಕಾರ್ಜುನ ದೇವಾಲಯವು ಪಟ್ಟದಕಲ್ಲಿನ ದೇವಾಲಯಗಳಲ್ಲಿಯೇ ಸುಂದರ ವಿನ್ಯಾಸದಲ್ಲಿ ನಿರ್ಮಿಸಿದ ವಾಸ್ತುಶಿಲ್ಪವೆಂಬುದನ್ನು ನಾವು ಯಾವತ್ತೂ ಮರೆಯುವಂತಿಲ್ಲ.

**ಸಂಗಮೇಶ್ವರ ದೇವಾಲಯ :**

ಪಟ್ಟದಕಲ್ಲಿನ ವಾಸ್ತು ಶಿಲ್ಪಗಳಲ್ಲಿ ಇನ್ನೊಂದು ಪ್ರಮುಖವಾದಂಥ ದೇವಾಲಯವೆಂದರೆ ಸಂಗಮೇಶ್ವರ ದೇವಾಲಯ. ಇದಕ್ಕೆ ವಿಜಯೇಶ್ವರ ದೇವಾಲಯವೆಂದೂ ಶಾಸನಗಳಲ್ಲಿ ಹೆಸರಿಸಲಾಗಿದೆ. ಈ ದೇವಾಲಯದ ರಚನೆಯ ಕಾಲ (696–733) ವಿಜಯಾದಿತ್ಯನ ಆಡಳಿತಾವಧಿಯದೆಂದು ಡಾ. ಶೀಲಾಕಾಂತ ಪತ್ತಾರ ಅಭಿಪ್ರಾಯ ಪಡುತ್ತಾರೆ. (ಪಟ್ಟದಕಲ್ಲು ದರ್ಶನ ಪುಟ–24) ಈ ದೇವಾಲಯದಲ್ಲಿ ಕಂಡು ಬರುವ ಶಿಲ್ಪಗಳು, ರಚನಾ ಕಾರ್ಯಗಳು, ಅಪೂರ್ಣವಾಗಿರುವುದು ನಮ್ಮ ಗಮನಕ್ಕೆ ಬರುತ್ತದೆ.

ಸಂಗಮೇಶ್ವರ ದೇವಾಲಯದ ತಲವಿನ್ಯಾಸವು ವಿಶಾಲವಾಗಿದ್ದು ಇದರಲ್ಲಿ ಕೆಲವು ವಿಶೇಷತೆಗಳನ್ನು ನಾವು ಕಾಣುತ್ತೇವೆ. ಈ ದೇವಾಲಯವು ಸಾಂಧಾರ ಪದ್ಧತಿಯದಾಗಿದ್ದು ಗರ್ಭಗೃಹ ಚಚ್ಚೌಕಾಕಾರದ್ದಾಗಿದೆ. ಇದರ ಎಡಬಲಗಳಲ್ಲಿ ಚಿಕ್ಕ ಗಾತ್ರದ ಗರ್ಭಗೃಹಗಳೂ ನಡುವೆ ನಾಲ್ಕು ಕಂಬಗಳ 5 ಸಾಲುಗಳು ಅಲ್ಲಿ ಬರುತ್ತವೆ. ಈ ಕಂಬಗಳೊಂದಿಗೆ ಕಾಣಸಿಗುವ ಸಭಾ ಮಂಟಪವು ಈ ದೇವಾಲಯದಲ್ಲಿ ರಚನೆಗೊಂಡಿದೆ. ದೇವಾಲಯದ ಕೆಲವು ಭಾಗವು ಅಪೂರ್ಣಗೊಂಡಿರುವುದು ನಮ್ಮ ಗಮನಕ್ಕೆ ಬರುತ್ತದೆ. ಇಲ್ಲಿಯ



ಸಂಗಮೇಶ್ವರ ದೇವಾಲಯದ ಹೊರನೋಟ.

ತಲವಿನ್ಯಾಸ ಪ್ರಯೋಗ ವಿಸ್ತಾರಗೊಂಡಿದ್ದನ್ನು ನಾವು ವಿರೂಪಾಕ್ಷ ದೇವಾಲಯದಲ್ಲಿ ಕಾಣುತ್ತೇವೆ. ಈ ದೇವಾಲಯ ಪ್ರವೇಶಕ್ಕೆ ದಕ್ಷಿಣ ಹಾಗೂ ಉತ್ತರ ದಿಕ್ಕಿನಲ್ಲಿ ಮೆಟ್ಟಿಲುಗಳನ್ನೇರಿ ಸಭಾಮಂಟಪ ಪ್ರವೇಶ ಮಾಡುವ ವ್ಯವಸ್ಥೆಯನ್ನಿಲ್ಲಿ ಗಮನಿಸುತ್ತೇವೆ. ಪೂರ್ವಭಾಗದ ಕೆಲವು ಭಾಗವು ಈಗ ಪೂರ್ತಿಯಾಗಿ ಉಳಿದಿಲ್ಲವಾದ್ದರಿಂದ ಅಲ್ಲಿ ಏನನ್ನೂ ನೋಡಲು ಆಗುವುದಿಲ್ಲ. ಈ ದೇವಾಲಯದ ಅಧಿಷ್ಠಾನವು ಉಪಾನ, ತ್ರಿಪಟ್ಟ, ಕುಮುದ ಹಾಗೂ ಲತಾಲಂಕಾರಗಳನ್ನು ಹೊಂದಿದ್ದು ಉತ್ತರ ಮುಖ ಮಂಟಪದ ಅಧಿಷ್ಠಾನದಲ್ಲಿ ಆನೆ ಸಿಂಹಗಳ ಸಾಲನ್ನು ನೋಡಲು ಸಾಧ್ಯವಿದೆ. ಈ ದೇವಾಲಯದ ಒಂದೊಂದು ಕಂಬಗಳಲ್ಲಿ ಕೆಲವು ಶಾಸನಗಳನ್ನು ಹೊಂದಿದ್ದು ಅವುಗಳಿಂದ ದೇವಾಲಯದ ನಿರ್ಮಾಣ ಕುರಿತಂತೆ ಕೆಲವು ವಿಷಯಗಳು ನಮಗೆ ದೊರೆಯುತ್ತವೆ.



ಸಂಗಮೇಶ್ವರ ದೇವಾಲಯದ ಊರ್ಧ್ವನೋಟ.

ಸಂಗಮೇಶ್ವರ ದೇವಾಲಯದ ಸಭಾಮಂಟಪದ ದಕ್ಷಿಣ ಭಾಗದಲ್ಲಿ ವಿಶಾಲವಾದ ಶಾಸನ ಹೊಂದಿದ ಶಿಲಾ ಫಲಕವೊಂದು ನಮ್ಮ ಗಮನ ಸೆಳೆಯುತ್ತದೆ. ಮುಖ್ಯ ಗರ್ಭಗೃಹದಲ್ಲಿರುವ ಶಿವಲಿಂಗವು ಕಪ್ಪು ಶಿಲೆಯಿಂದ ರೂಪಿತಗೊಂಡಿದ್ದು, ಈ ಗರ್ಭಗೃಹದ ಬಾಗಿಲ ಚೌಕಟ್ಟಿನಲ್ಲಿ ಗಂಗಾ ಯಮುನೆಯರ ಶಿಲ್ಪಗಳು ದ್ವಾರದ ಎಡ ಬಲ ಭಾಗಗಳಲ್ಲಿ ದ್ವಾರಪಾಲಕರ ವಿಗ್ರಹಗಳು ಮನಸೆಳೆಯುತ್ತವೆ. ಗರ್ಭಗೃಹದ ಛತ್ತಿನ ಮೇಲೆ ನಮಗೆ



ಸಂಗಮೇಶ್ವರ ದೇವಾಲಯದ ತಲವಿನ್ಯಾಸ

ಯಾವುದೇ ಶಿಲ್ಪಗಳಿಲ್ಲದಿದ್ದರೂ ತೊಲೆಗಳಲ್ಲಿ ಕೆಲವು ಕಮಲಗಳ ಕೆತ್ತನೆ ಕಂಡು ಬರುತ್ತದೆ. ವಾಸ್ತು ನಿರ್ಮಾಣದ ದೃಷ್ಟಿಯಿಂದ ಅಪೂರ್ಣವಾಗಿರುವ ಈ ದೇವಾಲಯದ ಹತ್ತಿರ ನಡೆಸಿದ ಉತ್ಖನನ ಕಾರ್ಯದಲ್ಲಿ ಈ ದೇವಾಲಯದ ತಳಪಾಯದಲ್ಲಿ ಇಟ್ಟಿಗೆಯ ಗೋಡೆಯಿರುವುದು ಸಹ ಸಂಶೋಧಕರ ಗಮನ ಸೆಳೆದಿದೆ.

ಸಂಗಮೇಶ್ವರ ದೇವಾಲಯದ ರಚನೆಯನ್ನು ನಾವು ಪರಿಶೀಲಿಸಿದಾಗ ಇದರ ಶಿಖರವಿನ್ಯಾಸವು ಬಾದಾಮಿಯ ಬೆಟ್ಟದ ಮೇಲಿನ ಶಿವಾಲಯದ ಶಿಖರವನ್ನು ಹೋಲುತ್ತದೆ. ನಾಗರಶೈಲಿಯಲ್ಲಿ ರೂಪಿಸಿದ ಚಚ್ಚೌಕಾಕಾರದ ಸ್ತೂಪಿಯು ಆಕರ್ಷಕವಾಗಿ ರೂಪುಗೊಂಡಿದೆ. ದೇವಾಲಯದ ಹೊರಗೋಡೆಗಳ ಮೇಲೆ ವಿಷ್ಣು, ವರಾಹ, ಗಜಾಸುರ ವಿಗ್ರಹಗಳಿವೆ. ಭೃಂಗಿಸಹಿತ ಶಿವ, ನಂದಿಯೊಂದಿಗಿನ ಶಿವನ ಮೂರ್ತಿಗಳನ್ನು ಕೆತ್ತಿ ಸಂಯೋಜಿಸಲಾಗಿದ್ದು ಇವು ಅಪೂರ್ಣವಾಗಿರುವುದು ನಮ್ಮ ಗಮನಕ್ಕೆ ಬರುತ್ತದೆ.

ಈ ದೇವಾಲಯ ಕೆಲವು ಭಾಗವು ಅಪೂರ್ಣವಾಗಿದ್ದರೂ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯು ದೇವಾಲಯವನ್ನು ಪುನಶ್ಚೇತನ ಪಡಿಸಿದ್ದು ಈ ದೇವಾಲಯದ ವಿನ್ಯಾಸ ಹಾಗೂ ಪ್ರಯೋಗಗಳು ಒಂದು ವಿಶೇಷತೆಯನ್ನು ಪಡೆದುಕೊಂಡಿವೆ.

**ಶಾಸನ ಶಿಲಾಸ್ತಂಭ:**

ಸಂಗಮೇಶ್ವರ ದೇವಾಲಯದ ದಕ್ಷಿಣಕ್ಕೆ ಸ್ವಲ್ಪ ದೂರದಲ್ಲಿ ಕಟ್ಟೆಯೊಂದರ ಮೇಲೆ ಒಂದು ಶಿಲಾಸ್ತಂಭವಿದ್ದು ಇದರ ಮೇಲೆ ನಾಗರಲಿಪಿ ಹಾಗೂ ಕನ್ನಡ ಲಿಪಿಗಳಲ್ಲಿ ಪ್ರತ್ಯೇಕವಾಗಿ ಕೆತ್ತಲ್ಪಟ್ಟ ಶಾಸನವಿದ್ದು ಇದು ಕ್ರಿ.ಶ. 754ರ ಕಾಲದ ಶಾಸನ. ಇದನ್ನು ತ್ರಿಶೂಲ ಮುದ್ರಾಂಕಿತ ಸ್ತಂಭ ಶಾಸನವೆಂದು ಗುರುತಿಸಲಾಗಿದೆ.

**ಗಳಗನಾಥ ದೇವಾಲಯ :**

ಪಟ್ಟದಕಲ್ಲಿನ ದೇವಾಲಯಗಳಲ್ಲಿ ಶಿಖರ ವಿನ್ಯಾಸದ ಆಕರ್ಷಣೆಯಿಂದ ಪ್ರವಾಸಿಗರ ಗಮನವನ್ನು ಸೆಳೆಯುವ ದೇವಾಲಯವೇ ಗಳಗನಾಥ ಗುಡಿ. ಇದು ಈಗ ಕೆಲವು ಅವಶೇಷಗಳಿರುವ ದೇಗುಲ. ಎತ್ತರವಾದ ಅಧಿಷ್ಠಾನವಿರುವ ಗಳಗನಾಥ ದೇವಾಲಯದ ತಲ ವಿನ್ಯಾಸದಲ್ಲಿ ಮುಖಮಂಟಪ, ಎರಡು ಅರ್ಧ ಮಂಟಪ, ವಿಶಾಲವಾದ ಸಭಾಮಂಟಪ, ಗರ್ಭಗೃಹ, ಅಂತರಾಳ ಹಾಗೂ ಪ್ರದಕ್ಷಿಣಾ–ಪಥಗಳು ಇದ್ದ ಬಗೆಗೆ ಕೆಲವು ಲಕ್ಷಣಗಳು ನಮಗೆ ಕಾಣಸಿಗುತ್ತವೆ. ಪೂರ್ವ ಮುಖಮಂಟಪ, ಉತ್ತರದ ಮಂಟಪ ಹಾಗೂ ಸಭಾಮಂಟಪಗಳು ನಶಿಸಿಹೋಗಿವೆ. ದಕ್ಷಿಣದ ಅರ್ಧಮಂಟಪ ಮಾತ್ರ ಕಾಣಸಿಗುತ್ತದೆ.





**ಗಳಗನಾಥ ದೇವಾಲಯ ಹಾಗೂ ತಲ ವಿನ್ಯಾಸ**

ಈ ದೇವಾಲಯದ ದಕ್ಷಿಣ ಅರ್ಧಮಂಟಪದಲ್ಲಿ ಕಾಣಸಿಗುವ ಶಿವನ ವಿಗ್ರಹ ಕಲಾಪೂರ್ಣವಾಗಿದೆ. ಅಷ್ಟ ಭುಜಗಳ ಶಿವನ ರುದ್ರ ಗಾಂಭೀರ್ಯ ನೋಟ ಶಿಲ್ಪಿಯ ಕಲಾಕೌಶಲ್ಯ ಪರಿಣಾಮಕಾರಿಯಾಗಿ ಅಲ್ಲಿ ಅಭಿವ್ಯಕ್ತಗೊಂಡಿದೆ. ಸುಂದರ ಮುಖವು ಶಿಥಿಲಗೊಂಡಿದೆ. ಈ ಶಿವನ ಶಿಲ್ಪದ ಎಡಬಲಗಳಲ್ಲಿ ಜಾಲಂಧ್ರಗಳು ಕಾಣಸಿಗುತ್ತವೆ. ಇದರಿಂದ ದೇವಾಲಯದ ಗರ್ಭಗೃಹದ ಸುತ್ತಲಿನ ಪ್ರದಕ್ಷಿಣಾಪಥಕ್ಕೆ ಗಾಳಿ ಬೆಳಕಿನ ಅನುಕೂಲವಾಗಿದೆ. ಈ ಅರ್ಧಮಂಟಪದ ಕೆಳಗಿರುವ ಅಧಿಷ್ಠಾನದ ಭಾಗದಲ್ಲಿ ಕೆಲವು ಶಿಲ್ಪಗಳನ್ನು ಕೆತ್ತಲಾಗಿದೆ. ಅವುಗಳು ಪಂಚತಂತ್ರದ ಕಥೆಗಳನ್ನು ನೆನಪಿಗೆ ತರುತ್ತವೆ.

ಗರ್ಭಗೃಹದ ಮೇಲೆ ರೇಖಾನಾಗರ ಶೈಲಿಯ ಶಿಖರವಿನ್ಯಾಸವು ತುಂಬಾ ಸುಂದರವಾಗಿ ರೂಪುಗೊಂಡಿದೆ. ಶಿಖರದ ಅಂಚಿನಲ್ಲಿಯ ಅಮಲಕವು ಅದರ ಮೇಲಿನ ಕಲಶವು ಕುಂದಣವನ್ನಿಟ್ಟಂತೆ ಕಾಣುತ್ತದೆ. ಈ ಶಿಖರದ ನಾಲ್ಕೂ ಮೂಲೆಗಳಲ್ಲಿಯ ಅಮಲಕಗಳ ಜೋಡಣೆಯಿಂದ ಮೇಲೆ ಹೋದಂತೆ ಬಿಲ್ಲಿನಂತೆ ಬಾಗುತ್ತ ಶಿಖರಕ್ಕೆ ಆಕರ್ಷಣೆ ತಂದ ಶಿಲ್ಪಿಗಳ ಕೌಶಲ್ಯ ಮೆಚ್ಚುವಂತಿದೆ. ಈ ದೇವಾಲಯದ ಶುಕನಾಶವು ಭಗ್ನಹೊಂದಿದ್ದು ಪ್ರದಕ್ಷಿಣಾ ಪಥದ ಮೇಲೆ ಇಳಿಜಾರಾಗಿರುವ ಕಲ್ಲುಗಳನ್ನು ಹೊಂದಿಸಿದ್ದು ನಮ್ಮ ಗಮನಕ್ಕೆ ಬರುತ್ತದೆ.

ಗರ್ಭಗೃಹದ ಬಾಗಿಲಮೇಲೆ ನಾಲ್ಕು ಶಾಖೆಗಳಿದ್ದು ಲಲಾಟ ಬಿಂಬದಲ್ಲಿ ಶಿವನು ನೃತ್ಯ ಲೋಲನಾಗಿದ್ದಾನೆ. ಪಕ್ಕದಲ್ಲಿನ ಸಂಗೀತಗಾರರ ಮೇಳ, ಹೊಸ್ತಿಲ ಪಕ್ಕದಲ್ಲಿ ಗಂಗಾ ಯಮುನೆಯರ ಶಿಲ್ಪಗಳು ಶಿಥಿಲಗೊಂಡ ಸ್ಥಿತಿಯಲ್ಲಿ ಕಾಣಸಿಗುತ್ತವೆ. ಗರ್ಭಗೃಹವು ಚೌಕಾಕಾರದ್ದಾಗಿದ್ದು ನಡುವೆ ಹಸಿರು ಮಿಶ್ರಿತ ಶಿವಲಿಂಗವು ನಯವಾಗಿ ನಿರ್ಮಾಣಗೊಂಡಿದೆ. ಇಲ್ಲಿ ಸ್ಥಾಪನೆ ಮಾಡಿದ ಲಿಂಗವು ವಿಶೇಷತೆ ಹೊಂದಿದ್ದಾಗಿದೆ. ಈ ದೇವಾಲಯದ ಮುಂದಿನ ಭಾಗವು ಭಗ್ನಗೊಂಡಿದ್ದರೂ ಗರ್ಭಗೃಹಾದಿಯಾಗಿ ರಚನೆಗೊಂಡ ಶಿಖರ ವಿನ್ಯಾಸವು ಪರಿಪೂರ್ಣವಾದ ರೀತಿಯಲ್ಲಿ ರೂಪುಗೊಂಡಿಲ್ಲದ್ದು ನಮ್ಮ ಗಮನಕ್ಕೆ ಬರುತ್ತದೆ. ಇದು ವಿನಯಾದಿತ್ಯನ ಕಾಲದ ವಾಸ್ತು ರಚನೆಯಾಗಿರಬಹುದೆಂಬ ಊಹೆ ಕೆಲವು ಇತಿಹಾಸ ಸಂಶೋಧಕರದಾಗಿದೆ.

**ಶಿಲ್ಪ ವಿಶೇಷಗಳು:**

ಗಳಗನಾಥ ದೇವಾಲಯದಲ್ಲಿ ಕಾಣಸಿಗುವ ವಾಸ್ತು ವಿಶೇಷ ಲಕ್ಷಣಗಳಲ್ಲಿ "ಸಾಂಧಾರ ರೇಖಾ ಪ್ರಾಸಾದಗಳು, ಗರ್ಭಗೃಹದ ಅಧಿಷ್ಠಾನದಲ್ಲಿ ಕಾಣುವ ಕಲಶ ಮಡಿಕೆ, ರಥಭಾಗದ ಅಧಿಷ್ಠಾನದಲ್ಲಿರುವ ತುಲಾಪೀಠ ವಿನ್ಯಾಸ ಸರಳ ಅಲಂಕಾರರಹಿತ ಜಂಘಾ ಶಿಖರದ ಮನಮೋಹಕ ಬಾಗು ರೇಖೆ, ಚೌಕ ದಿಂಬಿನಂತೆ ಚಪ್ಪಟೆಯಾಗಿ ಕಾಣುವ ಕರ್ಣಾಮಲಕಗಳು, ಲತಾಭಾಗದಲ್ಲಿ ಗವಾಕ್ಷ ಅಲಂಕಾರದ ಕ್ರಮ, ಸ್ಫುಟವಾಗಿ, ಸುಂದರವಾಗಿ ಕಾಣುವ ಅಮಲಶಿಲಾ ಮತ್ತು ಕಲಶ ಘನದ್ವಾರದ ಮಂಟಪದಲ್ಲಿರುವ ಘಟಪಲ್ಲವ ಅಲಂಕೃತ ಚೌಕ ಕಂಬಗಳು, ಸಂಹಾರ ಮೂರ್ತಿ ಶಿವನ ವಿಗ್ರಹಗಳು ಗರ್ಭಗೃಹದ ಟಿ ಆಕಾರದ ದ್ವಾರಬಂಧ ಮುಂತಾದವು ನೋಡುಗರ ಮೇಲೆ ಭಾರಿ ಪ್ರಭಾವವನ್ನು ಬೀರುವುದಲ್ಲದೇ ಸೂತ್ರಧಾರಿಯು ರೇಖಾ ಪ್ರಾಸಾದದ ಒಳಹೊರಗೂ ವಿವರಗಳ ಸ್ಪಷ್ಟ ಪರಿಕಲ್ಪನೆ ಹೊಂದಿರುವುದನ್ನು ಪ್ರಕಟಿಸುತ್ತವೆ" ಎಂಬ ಪ್ರೊ. ಶ್ರೀನಿವಾಸ ಪಾಡಿಗಾರರ ಮಾತುಗಳು ಅರ್ಥಪೂರ್ಣವೆನಿಸುತ್ತವೆ. (ಬಾದಾಮಿ ಚಾಲುಕ್ಯರ ಶಾಸನಗಳು, ವಾಸ್ತು ಮತ್ತು ಶಿಲ್ಪಕಲೆ ಪ್ರೊ. ಶ್ರೀನಿವಾಸ ಪಾಡಿಗಾರ ಪು. 46) ಇದು ಸುಮಾರು ಕ್ರಿ.ಶ. 720–33ರ ಅವಧಿಯಲ್ಲಿ ನಿರ್ಮಾಣಗೊಂಡ ರಚನೆಯಾಗಿರಬಹುದೆಂಬುದು ಸಂಶೋಧಕರ ಅನಿಸಿಕೆ.

**ಪಾಪನಾಥ ದೇವಾಲಯ :**

ಮಲಪ್ರಭಾ ನದಿಯ ತಟದಲ್ಲಿ, ವಿರೂಪಾಕ್ಷ ದೇವಾಲಯದ ಮಹಾದ್ವಾರದಿಂದ ದಕ್ಷಿಣದತ್ತ ಸ್ವಲ್ಪ ಅಂತರದಲ್ಲಿ ಕಾಣುವುದೇ ಪಾಪನಾಥ ದೇವಾಲಯ. ಎತ್ತರದ ಅಧಿಷ್ಠಾನದ ಮೇಲೆ ಕಟ್ಟಲ್ಪಟ್ಟ ದೇವಾಲಯವು ಕಲಾತ್ಮಕ ದೃಷ್ಟಿಯಿಂದ ಬಹು ಉನ್ನತ ಮಟ್ಟದ ದೇವಾಲಯ. ಪೂರ್ವಾಭಿಮುಖವಾಗಿರುವ ಈ ದೇವಾಲಯದ ಮುಖಮಂಟಪ ತಲುಪಲು ಹತ್ತಾರು ಸೋಪಾನಗಳನ್ನೇರಿಯೇ ಹೋಗಬೇಕು. ಈ ದೇವಾಲಯವು ಎರಡು ಸಭಾಮಂಟಪಗಳಿಂದ ಕೂಡಿದೆ. ಈ ವಾಸ್ತುಶಿಲ್ಪದಲ್ಲಿ ಮುಖಮಂಟಪ, ದೊಡ್ಡ ಮಂಟಪ ಹಾಗೂ ಸಣ್ಣ ಮಂಟಪ, ಗರ್ಭಗೃಹ, ಪ್ರದಕ್ಷಿಣಾ ಪಥಗಳಿವೆ. ಉತ್ತರ ಹಾಗೂ ದಕ್ಷಿಣದ ಹೊರಗೋಡೆಗಳಲ್ಲಿ ಎರಡು ಅರ್ಧ ಮಂಟಪಗಳು ಇವೆ. ದೇವಾಲಯದ ಪಶ್ಚಿಮ ಭಾಗದ ಹೊರಗೋಡೆಯಲ್ಲೂ ಒಂದು ಮಂಟಪವಿದೆ. ಕಲಾಪೂರ್ಣ ಶಿಲ್ಪಗಳಿಂದ ಕೂಡಿದ್ದರೂ ಕೆಲವು ಭಗ್ನಗೊಂಡಿವೆ. ಪಕ್ಕದ ಜಾಲಂಧ್ರಗಳು, ದೇವಾಲಯದ ಒಳಗೆ ಗಾಳಿ ಬೆಳಕನ್ನು ನೀಡುತ್ತಿವೆ.

ಈ ದೇವಾಲಯದ ವಾಸ್ತುರಚನೆಯ ಆಧಾರದಲ್ಲಿ ಇದೊಂದು ಶಿವದೇವಾಲಯವಾಗಿದ್ದು ದೊಡ್ಡ ದೇವಾಲಯಗಳನ್ನು ನಿರ್ಮಿಸುವ ಸಂಪ್ರದಾಯವನ್ನು ಚಾಲುಕ್ಯ ಸ್ಥಪತಿಗಳು ಇದರ ವಿಸ್ತರಣೆಯನ್ನು ಕೈಕೊಂಡಿರುವ ಅಭಿಪ್ರಾಯವನ್ನು ಸಂಶೋಧಕ ಡಾ. ಶೀಲಾಕಾಂತ ಅಭಿಪ್ರಾಯ ಪಡುತ್ತಾರೆ. (ಡಾ. ಶೀಲಾಕಾಂತ ಪತ್ತಾರ-ಪಟ್ಟದಕಲ್ಲು ದರ್ಶನ-ಪುಟ-81) ಪಾಪನಾಥ ದೇವಾಲಯದಲ್ಲಿನ ಶಾಸನವೊಂದರಲ್ಲಿ ಪ್ರಖ್ಯಾತ ಸ್ಥಪತಿ ಸರ್ವಸಿದ್ಧಿ ಆಚಾರಿಯ ಶಿಷ್ಯ ರೇವಡಿ ಓವಜನು ಗುಡಿಯ ಬಲಭಾಗವನ್ನು ರೂಪಿಸಿದ ವಿಷಯ ತಿಳಿಯುತ್ತದೆ.



ಪಾಪನಾಥ ದೇವಾಲಯದ ಹೊರನೋಟ

ಪಾಪನಾಥ ದೇವಾಲಯದ ಮುಖಮಂಟಪದ ಅಧಿಷ್ಠಾನವು ಪ್ರಾಣಿ ಶಿಲ್ಪಗಳಿಂದೊಡಗೂಡಿದ್ದು ಎರಡು ಬಿಡಿಕಂಬಗಳ ಜತೆಗೆ ಗೋಡೆಯೊಳಗಿನ ಎರಡು ಅರ್ಧ ಕಂಬಗಳು ಮುಖ-ಮಂಟಪದ ಛತ್ತನ್ನು ಹೊತ್ತು ನಿಂತಿವೆ. ಇಲ್ಲಿನ ಕೆಲವು ಆಕರ್ಷಕವಾದ ಶಿಲ್ಪಗಳು ಮನಸೆಳೆಯುತ್ತವೆ. ಈ ದೇವಾಲಯದ ಪ್ರವೇಶದ ಬಾಗಿಲುವಾಡವು ಕಲಾತ್ಮಕವಾದ ಸೂಕ್ಷ್ಮ ಕೆತ್ತನೆಗಳಿಂದ ಕೂಡಿದೆ. ಇಲ್ಲಿ ಲಲಾಟ ಬಿಂಬದಲ್ಲಿ ರೂಪಿಸಿದ ಗಜಲಕ್ಷ್ಮೀ ವಿಗ್ರಹ, ಅವಳನ್ನು ಅಲಂಕರಿಸಲ್ಪಟ್ಟ ಮಕರ



ಪಾಪನಾಥ ದೇವಾಲಯದ ತಲವಿನ್ಯಾಸ

ತೋರಣ ಕೆತ್ತನೆ ಆಕರ್ಷಣೀಯವಾಗಿ ಕಾಣುತ್ತದೆ. ಈ ಬಾಗಿಲವಾಡನ್ನು ದಾಟಿದಲ್ಲಿ ಹದಿನಾರು ಬೃಹತ್ ಕಂಭಗಳಿಂದೊಡಗೂಡಿದ ದೊಡ್ಡ ಸಭಾ ಮಂಟಪವಿದೆ. ಇಲ್ಲಿರುವ 'ನಂದಿ' ವಿಗ್ರಹದಿಂದಾಗಿ ಇದನ್ನು ನಂದಿ ಮಂಟಪವೆಂತಲೂ ಕರೆಯಲಾಗುತ್ತದೆ. ಮೇಲೆ ಛತ್ತಿನ ಕಲ್ಲುಗಳಿವೆ. ನಸುಗೆಂಪು ಬಣ್ಣದ ನಂದಿಯ ವಿಗ್ರಹವು ನಯವಾಗಿ ಹಾಗೂ ಮೋಹಕವಾಗಿ ಕೆತ್ತಿ ಇಡಲ್ಪಟ್ಟಿದೆ. ಇಲ್ಲಿನ ಒಂದೊಂದು ಕಂಭವೂ ಕಲಾವೈಖರಿಯಿಂದ ಕೂಡಿದೆ.

**ಪಾಪನಾಥ ದೇವಾಲಯದ ವಾಸ್ತು ವಿಶೇಷ :**

ಪಾಪನಾಥ ದೇವಾಲಯದ ನಂದಿ ಮಂಟಪದಲ್ಲಿನ ಒಂದೊಂದು ಕಂಭದಲ್ಲಿಯೂ ಅಂದಿನ ಸಾಮಾಜಿಕ ಜೀವನದ ಚಿತ್ರಣವನ್ನು ಶಿಲ್ಪಿಗಳು ತಮ್ಮ ಕಲ್ಪಕಶಕ್ತಿಯಿಂದ ಅಭಿವ್ಯಕ್ತ ಪಡಿಸಿದ್ದಾರೆ. ದಂಪತಿಗಳ ಸರಸ ಸನ್ನಿವೇಶಗಳನ್ನು ಮಿಥುನ ಶಿಲ್ಪಗಳನ್ನು, ವೀರಾವೇಶ, ಸಂಗೀತಲೋಲರನ್ನು ಒಂದೊಂದೂ ಕಂಭಗಳಲ್ಲಿ ಕಂಡರಿಸಿದ್ದಾರೆ. ಶಿಲ್ಪಿಗಳು ಈ ನಂದಿ ಮಂಟಪದ ಛತ್ತಿನಲ್ಲಿರುವ ಅಂಕಣಗಳಲ್ಲಿ ಕಮಲದ ಕೆತ್ತನೆ, ಅನಂತನ ಮೇಲೆ ಮಲಗಿರುವ ವಿಷ್ಣು, ಸುತ್ತಲೂ ಅಷ್ಟದಿಕ್ಪಾಲಕರ ಉಬ್ಬು ಶಿಲ್ಪಗಳಿವೆ. ನಾಗರಾಜನ ವಿಗ್ರಹ ಕೊನೆಯ ಅಂಕಣದಲ್ಲಿ ಗಜಲಕ್ಷ್ಮೀ ಗಂಧರ್ವರ ಅಲಂಕೃತ ಶಿಲ್ಪಗಳಿವೆ.

ಈ ವಾಸ್ತುಶಿಲ್ಪದ ಇನ್ನೊಂದು ಭಾಗವಾದ ಚಿಕ್ಕ ಸಭಾಮಂಟಪವು ನಾಲ್ಕು ಕಂಭಗಳೊಂದಿಗೆ ನಿರ್ಮಿಸಿದ ಮೇಲ್ ಛತ್ತು ಹೊಂದಿರುವ ಪ್ರಾಕಾರವಾಗಿದ್ದು ಇದರ ಮೇಲ್ಗಂಡು ಎರಡು ಅಂಕಣಗಳಿಂದ ಕೂಡಿದೆ. ಗರ್ಭಗುಡಿಗೆ ಹೊಂದಿಕೊಂಡ ಅಂಕಣದಲ್ಲಿ ನಾಗರಾಜನ ಸುಂದರ ಶಿಲ್ಪವಿದ್ದರೆ ಪೂರ್ವಭಾಗದ ಅಂಕಣದಲ್ಲಿ ಚತುರ್ಭುಜ ನಟರಾಜನ ಶಿಲ್ಪವಿದೆ.

ಪಾಪನಾಥ ದೇವಾಲಯದ ಗರ್ಭಗೃಹದ ಲಲಾಟ ಬಿಂಬದಲ್ಲಿ ಗಜಲಕ್ಷ್ಮೀಯ ವಿಗ್ರಹವಿದ್ದು ಎಡಬಲದ ಪಟ್ಟಿಕೆ (ಯಾಳಿ)ಗಳಲ್ಲಿ ಸುಂದರವಾದ ಕೆತ್ತನೆಗಳಿವೆ. ಬಾಗಿಲದ ಎರಡೂ ಬದಿಗಳಲ್ಲಿ ದ್ವಾರಪಾಲಕರ ಶಿಲ್ಪಗಳಿದ್ದು ನಾಟ್ಯಭಂಗಿ ಹಾಗೂ ಮೋಹಕ ನೋಟ ನೋಡುವವರನ್ನು ಆಕರ್ಷಿಸುತ್ತವೆ. ಚೌಕಾಕಾರದ ಗರ್ಭಗೃಹದ ಸುತ್ತಲೂ ಪ್ರದಕ್ಷಿಣಾ ಪಥವನ್ನು ರೂಪಿಸಿದ್ದು ತುಂಬಾ ಚಿಕ್ಕದಾಗಿದೆ. ಗರ್ಭಗೃಹದ ಹೊರ ಗೋಡೆಗಳಲ್ಲಿ ದಕ್ಷಿಣ, ಪಶ್ಚಿಮ ಹಾಗೂ ಉತ್ತರದಲ್ಲಿ ದೇವಕೋಷ್ಠಗಳಿವೆ. ಈ ಮಾಡಗಳಲ್ಲಿ ಶಿವ, ಸೂರ್ಯ ಹಾಗೂ ವಿಷ್ಣುವಿನ ವಿಗ್ರಹಗಳಿವೆ. ವಾಸ್ತು ಶಿಲ್ಪದ ದೃಷ್ಟಿಯಿಂದ ಈ ದೇವಾಲಯದ ಗರ್ಭಗೃಹದ ಶುಕನಾಶಿಯಲ್ಲಿ ಅಪೂರ್ಣತೆಯಿರುವುದು ಕಂಡು ಬರುತ್ತದೆ.

ಪಟ್ಟದಕಲ್ಲಿನ ಮೋಹಕ ದೇವಾಲಯಗಳಲ್ಲಿ ಪಟ್ಟಿಗೆ ಸೇರಿಸುವ ಈ ದೇವಾಲಯದ ಹೊರಗೋಡೆಗಳನ್ನು ಅಲಂಕರಿಸಿದ ಶಿಲ್ಪಗಳಂತೂ ತುಂಬಾ ಆಕರ್ಷಣೀಯವಾಗಿವೆ. ರಾಮಾಯಣದ ಹಲವಾರು ಸನ್ನಿವೇಶಗಳನ್ನು ನೆನಪಿಗೆ ತರುವ ಶಿಲ್ಪಗಳನ್ನು ಅಲ್ಲಿ ಕಾಣಬಹುದು. ಅರ್ಜುನನ ತಪಸ್ಸು, ಶಬರನ ರೂಪದಲ್ಲಿರುವ ಶಿವ ಹಾಗೂ ಪಾರ್ವತಿ, ಹರಿಹರ, ರತಿ ಮನ್ಮಥರು ಮಹಿಷಾಸುರ ಮರ್ದಿನಿ, ಗಜೇಂದ್ರ ಮೋಕ್ಷ, ತ್ರಿವಿಕ್ರಮ, ವಿಷ್ಣು, ಗಣಪತಿ ನರಸಿಂಹ, ಹಿರಣ್ಯ ಕಶ್ಯಪರ ಕದನ, ನಟರಾಜ, ಇಂದ್ರ, ಬ್ರಹ್ಮದೇವ, ಹತ್ತು ತಲೆಯ ರಾವಣ, ವಿಶ್ವಾಮಿತ್ರ – ವಶಿಷ್ಠರು, ಯಮರಾಜ, ಕುಂಬಕರ್ಣ – ಇಂದ್ರಜಿತರನ್ನು ಮುತ್ತಿದ ವಾನರಸೇನೆ ಈ ಮುಂತಾದ ಶಿಲ್ಪಗಳನ್ನು ಕೆತ್ತಿ ಹೊರಗೋಡೆಯಲ್ಲಿ ಕಲ್ಪಿಸಿದ ಮಾಡಗಳಲ್ಲಿ ಸಂಯೋಜಿಸಿದ ಶಿಲ್ಪಿಗಳು ಇಡೀ ದೇವಾಲಯದ ಸೌಂದರ್ಯವನ್ನು ಇಮ್ಮಡಿಗೊಳಿಸಿದ್ದಾರೆ.

**ವಾಸ್ತು ವಿಶೇಷಗಳು :**

ಪಟ್ಟದಕಲ್ಲಿನ ಪಾಪನಾಥ ದೇವಾಲಯದ ನಿರ್ಮಾಣವು ಹಂತ ಹಂತದಲ್ಲಿ ನಡೆದ ಲಕ್ಷಣಗಳು ಈ ದೇವಾಲಯದಲ್ಲಿವೆ ಎಂದು ಸಂಶೋಧಕರು ಅಭಿಪ್ರಾಯ ಪಡುತ್ತಾರೆ. ಈ ದೇವಾಲಯದ ಕಾಲನಿರ್ಣಯದ ಬಗೆಗೆ ಸಂಶೋಧಕರಲ್ಲಿ ಭಿನ್ನಾಭಿಪ್ರಾಯಗಳಿವೆ. ಕ್ರಿ.ಶ. 650ರಿಂದ 740ರ ಅವಧಿಯಲ್ಲಿ ಈ ವಾಸ್ತು ಶಿಲ್ಪದ ರಚನೆಯಾಗಿರಬಹುದೆಂಬುದಾಗಿ ತಿಳಿಯುತ್ತದೆ. ಈ ದೇವಾಲಯದಲ್ಲಿ ಮೊದಲಿಗೆ ಗರ್ಭಗೃಹ, ಅಂತರಾಳಗಳನ್ನು ಕಟ್ಟಿದ ನಂತರ ಸಭಾಮಂಟಪ ಮತ್ತು ಮುಖ ಮಂಟಪಗಳನ್ನು, ಮೇಲಿನ ನಾಗರಶೈಲಿಯ ಶಿಖರವಿನ್ಯಾಸ ಮಾಡಿರಬಹುದೆಂದು ಸಂಶೋಧಕರು ಊಹಿಸುತ್ತಾರೆ. ಈ ದೇವಾಲಯದಲ್ಲಿ ದ್ರಾವಿಡ ಮತ್ತು ನಾಗರಶೈಲಿಯ ಮಿಶ್ರಣವಾದ ಬಗ್ಗೆ ತೋರುತ್ತದೆ. ಗರ್ಭಗೃಹ ಚೌಕಾಕಾರವಾಗಿದೆ. ಅದರ ಹೊರಗೋಡೆಗಳಲ್ಲಿ 3 ದಿಕ್ಕಿನಲ್ಲೂ ಅರ್ಧ ಮಂಟಪಗಳನ್ನು ನಿರ್ಮಿಸಿರುವುದೊಂದು ವಿಶೇಷ. ದಕ್ಷಿಣ, ಉತ್ತರ ಹಾಗೂ ಪಶ್ಚಿಮದಲ್ಲಿರುವ ಈ ಅರ್ಧಮಂಟಪಗಳು ಕೆಲವು ಆಕರ್ಷಕ ಶಿಲ್ಪಗಳಿಂದ ಕೂಡಿದ್ದರೂ ಅಲ್ಲಲ್ಲಿ ಭಿನ್ನಗೊಂಡಿವೆ. ಈ ಅರ್ಧಮಂಟಪದ ಪ್ರಧಾನ ಶಿಲ್ಪಗಳು ಆಕರ್ಷಕವಾಗಿಯೂ, ಕಲಾತ್ಮಕವಾಗಿಯೂ ರೂಪುಗೊಂಡಿವೆ. ಈ ಮೂರೂ ಅರ್ಧಮಂಟಪಗಳಲ್ಲಿಯ ನಟರಾಜ, ಗಜಾಸುರಾಂತಕ, ಮಹಾನಟನ ಶಿಲ್ಪಗಳು ಪ್ರೇಕ್ಷಣೀಯವಾಗಿವೆ. ಈ ದೇವಾಲಯದ ತಲವಿನ್ಯಾಸದಲ್ಲಿ ಶಿಖರ ವಿನ್ಯಾಸ ಕ್ರಮದಲ್ಲಿ ಕೆಲವು ವ್ಯತ್ಯಾಸಗಳಿರುವುದರಿಂದ ಈ ದೇವಾಲಯದ ರಚನೆಯಲ್ಲಿಯೂ ಒಂದೇ ಕ್ರಮವಿಲ್ಲದ ಕಾರಣದಿಂದ ಈ ದೇವಾಲಯದ ನಿರ್ಮಾಣದಲ್ಲಿ ಹಂತಗಳಿವೆ.

ಚಾಲುಕ್ಯ ದೇವಾಲಯಗಳ ನಿರ್ಮಾಣದಲ್ಲಿ ವಾಸ್ತು ಮಂಡಲದ ಆಧಾರದಲ್ಲಿ ವಾಸ್ತು ಶಿಲ್ಪಗಳ ರಚನೆ ಮಾಡಿದ ದೃಷ್ಟಾಂತಗಳು ನಮಗೆ ಹೇರಳವಾಗಿ ಕಾಣ ಸಿಗುತ್ತವೆ. ಈ ದೇವಾಲಯದಲ್ಲೂ ವಾಸ್ತು ಮಂಡಲ ಪದವಿನ್ಯಾಸಕ್ಕೆ ಅನುಗುಣವಾಗಿ ಗರ್ಭಗೃಹ, ಪ್ರದಕ್ಷಿಣಾ ಪಥ, ಸಭಾ ಮಂಟಪ, ಮುಖ ಮಂಟಪ ಈ ಮೊದಲಾದ ವಾಸ್ತು ಲಕ್ಷಣಗಳಿದ್ದು ಊರ್ಧ್ವ ಮುಖ ರಚನೆಯಲ್ಲೂ ಎಲ್ಲ ಲಕ್ಷಣಗಳಿರುವುದನ್ನು ಚಾಲುಕ್ಯ ವಾಸ್ತು ಶಿಲ್ಪಗಳಲ್ಲಿ ನಾವು ಗಮನಿಸಬಹುದಾಗಿದೆ.

ವಾಸ್ತು ವಿನ್ಯಾಸದ ದೃಷ್ಟಿಯಿಂದ ಪಟ್ಟದಕಲ್ಲಿನ ಪಾಪನಾಥ ದೇವಾಲಯವು ಮಹತ್ವದ ವಾಸ್ತುಶಿಲ್ಪವೆಂಬುದಾಗಿ ಗುರುತಿಸಲ್ಪಟ್ಟಿದೆ. ದೇವಾಲಯದ ಮಂಟಪದಲ್ಲಿನ ಒಂದೊಂದೂ ಕಂಭಗಳಲ್ಲಿ ಕಂಡು ಬರುವ ಕಲಾತ್ಮಕ ಕೆತ್ತನೆಗಳು, ಭಿತ್ತಿನಲ್ಲಿ ಕಂಗೊಳಿಸುವ ಶಿಲ್ಪ ವೈಖರಿಗಳು, ಹೊರಗೋಡೆಯ ಮೂರು ದಿಕ್ಕುಗಳಲ್ಲಿ ಕಾಣಸಿಗುವ ವಾಸ್ತುಶಿಲ್ಪಗಳ ಕಲಾ ಪ್ರಯೋಗಗಳು, ದೇವಾಲಯದ ರೇಖಾನಾಗರ ಶೈಲಿಯ ಶಿಖರ ವಿನ್ಯಾಸಗಳು ಈ ದೇಗುಲಕ್ಕೆ ಹೆಚ್ಚಿನ ಗೌರವವನ್ನು ನೀಡಿವೆ. ರಾಮಾಯಣ, ಮಹಾಭಾರತದ ಕಥಾ ಪ್ರಯೋಗಗಳನ್ನು ನೆನಪಿಗೆ ತರುವ ಹಲವಾರು ಶಿಲ್ಪಗಳಂತೂ ನೋಡುವವರ ಹೃನ್ಮನಗಳನ್ನೇ ಆಕರ್ಷಿಸುತ್ತವೆ.

ಪಟ್ಟದಕಲ್ಲು ಬಾದಾಮಿ ಚಾಲುಕ್ಯರ ಕಾಲದಲ್ಲಿ ರಚನೆಗೈದ ಸುಂದರವಾಸ್ತು ಶಿಲ್ಪಗಳ ಪ್ರಯೋಗಶಾಲೆ. ಇಲ್ಲಿ ಹಿಂದೂಧರ್ಮದ ಪ್ರಮುಖ ಪಂಥಗಳಾದ ಶೈವ ಹಾಗೂ ವೈಷ್ಣವ ಶಾಖೆಗಳ ಮಧುರ ಸಮ್ಮಿಲನಕ್ಕೆ ಸೂಕ್ತ ಉದಾಹರಣೆಗಳು ಕಾಣಸಿಗುತ್ತವೆ. ರಾಮಾಯಣ, ಮಹಾಭಾರತ, ಭಾಗವತ ಹಾಗೂ ಇತರ ಪುರಾಣ ಗ್ರಂಥಗಳಲ್ಲಿನ ಸನ್ನಿವೇಶಗಳನ್ನು ಪಟ್ಟದಕಲ್ಲಿನ ವಾಸ್ತುಶಿಲ್ಪಗಳಲ್ಲಿ ಪ್ರಯೋಗಿಸಿದ ಶಿಲ್ಪಿಗಳು ತಮ್ಮ ಕಲಾ ಕೌಶಲ್ಯಗಳಿಂದ ಕಲಾರಸಿಕರ ಹೃನ್ಮನಗಳನ್ನು ಗೆಲ್ಲುತ್ತಾರೆ. ಪಟ್ಟದಕಲ್ಲಿನಲ್ಲಿ ನಿರ್ಮಿಸಲ್ಪಟ್ಟ ಒಂದೊಂದೂ

ದೇವಾಲಯವೂ ಕಲೆಯ ಗುಚ್ಛಗಳೇ ಆಗಿವೆ. ನಾಡಿನ ಸಾಂಸ್ಕೃತಿಕ ಹಿರಿಮೆಯನ್ನು ಎತ್ತರಕ್ಕೇರಿಸಿದ ಪಟ್ಟದಕಲ್ಲಿನ ಈ ಅಮರ ಸ್ಮಾರಕಗಳು ಮತ್ತೆ ಮತ್ತೆ ನೋಡುವಂಥ ಅನುಪಮ ಸೌಂದರ್ಯದ ಕಲೆಯ ಬೀಡಾಗಿವೆ ಎಂಬ ಮಾತು ಅರ್ಥಪೂರ್ಣವಾದದ್ದಾಗಿದೆ.




1. ಗುಹಾಲಯಗಳು 1 ರಿಂದ 4
2. ಜುಮ್ಮಾ ಮಸೀದೆ
3. ಎಲ್ಲಮ್ಮ ದೇವಾಲಯ
4. ವಿರೂಪಾಕ್ಷ ದೇವಾಲಯ
5. ಜಂಬುಲಿಂಗ ದೇವಾಲಯ
6. ಪುರಾತತ್ವ ಇಲಾಖೆ
7. ಉತ್ತರ ಭೂತನಾಥ ದೇವಾಲಯ ಗುಚ್ಛ
8. ಭೂತನಾಥ ದೇವಾಲಯ
9. ಪಂಚಲಿಂಗ ಪಡಿ
10. ತೆರೆದ ಮಂಟಪ
11. ಕೆಳಗಿನ ಶಿವಾಲಯ
12. ವೀಕ್ಷಣಾ ವೃತ್ತ
13. ಟಿಪ್ಪು ಟ್ರೇಜರಿ
14. ಮೇಲಿನ ಶಿವಾಲಯ
15. ದರ್ಗಾ
16. ಮಾಲೆಗಿತ್ತಿ ಶಿವಾಲಯ
17. ಅರಳೀತೀರ್ಥ

# 7. ಚಾಲುಕ್ಯ ದೇವಾಲಯಗಳ ವಿಮಾನ ಶೈಲಿಗಳು

ಐಹೊಳೆ, ಪಟ್ಟದಕಲ್ಲು, ಮಹಾಕೂಟ ಹಾಗೂ ಬಾದಾಮಿಯಲ್ಲಿನ ಚಾಲುಕ್ಯ ವಾಸ್ತು ನಿರ್ಮಾಣದಲ್ಲಿನ ಹಲವಾರು ಪ್ರಯೋಗಗಳಲ್ಲಿ ಕಾಣಸಿಗುವ ವಿಮಾನ ಶೈಲಿಗಳು ವಿನೂತನ ಅನುಭವ ನೀಡುವಂಥವು. ನಮ್ಮ ಪ್ರಾಚೀನ ಕರ್ನಾಟಕದಲ್ಲಿ ಕಂಡು ಬರುವ ಔತ್ತರೇಯ ಸಂಪ್ರದಾಯಗಳನ್ನು ಎರಡು ಹಂತಗಳಲ್ಲಿ ಗುರುತಿಸುವ ಬಗೆಗೆ ಶ್ರೀ ಎಂ.ಎನ್.ಪ್ರಭಾಕರ ಅವರು ತಮ್ಮ "ದೇವಾಲಯ ವಾಸ್ತು" ಕೃತಿಯಲ್ಲಿ ಶಾಸನಗಳ ಆಧಾರದಲ್ಲಿನ ಕೆಲವು ವಿಚಾರಗಳ ಪ್ರಸ್ತಾವನೆ ಮಾಡಿದ್ದು ಅವರ ಮಾತುಗಳಲ್ಲಿಯೇ ಹೇಳುವುದದಾರೆ ಬಳ್ಳಾರಿ ಜಿಲ್ಲೆಯ ಹೊಳಲು ಶಾಸನವು ಹನ್ನೆರಡನೆಯ ಶತಮಾನದ್ದೆನಿಸಿದರೂ ಮೊದಲನೆಯ ಹಂತದ ದೇವಾಲಯಗಳು ಬಾದಾಮಿ ಚಾಲುಕ್ಯರ ಕಾಲಕ್ಕೆ ಸಂಬಂಧಿಸಿದ್ದು, ಈ ದೇವಾಲಯಗಳನ್ನು ಕ್ರಿ.ಶ. ಏಳನೆಯ ಶತಮಾನದ ಆರಂಭದಿಂದ ಒಂಭತ್ತನೆಯ ಶತಮಾನದವರೆಗೆ ಗುರುತಿಸಬಹುದು. ಈ ಕಾಲದಲ್ಲಿ ಕಳಿಂಗ ಶೈಲಿಯೊಂದೇ ಔತ್ತರೇಯ ಸಂಪ್ರದಾಯದ ಪ್ರತಿನಿಧಿಯಾಗಿತ್ತು. ಉಳಿದ ದೇವಾಲಯಗಳೂ ದಾಕ್ಷಿಣಾತ್ಯ ಶೈಲಿಗಳಲ್ಲಿ ರಚನೆಗೊಂಡಿವೆ. ಈ ದೇವಾಲಯಗಳು ಐಹೊಳೆ, ಬಾದಾಮಿ ಪಟ್ಟದಕಲ್ಲು, ಮಹಾಕೂಟಗಳಲ್ಲಿ ಒಟ್ಟಿಗೆ ಪ್ರದರ್ಶನಗೊಂಡಿವೆ. ಈ ದೇವಾಲಯಗಳನ್ನು ಸಂಪ್ರದಾಯ ಶೈಲಿ ರೀತ್ಯಾ ಪ್ರಾತಿನಿಧಿಕವಾಗಿ ಈ ಕೆಳಗಿನಂತೆ ಗುರುತಿಸಲಾಗಿದೆ.

| ಸಂಪ್ರದಾಯ | ಶೈಲಿ | ದೇವಾಲಯ | ಸ್ಥಳ |
|---|---|---|---|
| ಔತ್ತರೇಯ | ಕಳಿಂಗ | ತಾರಾ ಬಸಪ್ಪನ ಗುಡಿ | ಐಹೊಳೆ |
| | | ಹುಚ್ಚಿಮಲ್ಲಿ ಗುಡಿ | ಐಹೊಳೆ |
| | | ಹುಚ್ಚಪ್ಪಯ್ಯನ ಗುಡಿ | ಐಹೊಳೆ |
| | | ಸಂಗಮೇಶ್ವರ ದೇವಾಲಯ | ಮಹಾಕೂಟ |
| | | ಗಳಗನಾಥ ದೇವಾಲಯ | ಪಟ್ಟದಕಲ್ಲು |
| | | ಪಾಪನಾಥ ದೇವಾಲಯ | ಪಟ್ಟದಕಲ್ಲು |
| ದಾಕ್ಷಿಣಾತ್ಯ | ನಾಗರ | ಭೂತನಾಥ ದೇವಾಲಯ | ಬಾದಾಮಿ |
| | | ಮೇಲಿನ ಶಿವಾಲಯ | ಬಾದಾಮಿ |
| | | ವಿಜಯೇಶ್ವರ ದೇವಾಲಯ | ಪಟ್ಟದಕಲ್ಲು |
| | ದ್ರಾವಿಡ | ಮಹಾಕೂಟೇಶ್ವರ ದೇವಾಲಯ | ಮಹಾಕೂಟ |
| | | ಮಲ್ಲಿಕಾರ್ಜುನ ದೇವಾಲಯ | ಮಹಾಕೂಟ |
| | | ಮಾಲೆಗಿತ್ತಿ ದೇವಾಲಯ | ಬಾದಾಮಿ |
| | ವೇಸರ | ಮಲ್ಲಿಕಾರ್ಜುನ ದೇವಾಲಯ | ಪಟ್ಟದಕಲ್ಲು |
| | | | ("ದೇವಾಲಯ ವಾಸ್ತು" ಲೇ.ಎಂ.ಎನ್.ಪ್ರಭಾಕರ, ಪು.– 139–140) |

## ಔತ್ತರೇಯ ಕಳಿಂಗಶೈಲಿಯ ಶಿಖರ ವಿನ್ಯಾಸಗಳು:



ತಾರಾಬಸಪ್ಪ ದೇವಾಲಯ (ಐಹೊಳೆ)



ಹುಚ್ಚಿಮಲ್ಲಿ ದೇವಾಲಯ (ಐಹೊಳೆ)



ಹುಚ್ಚಪ್ಪಯ್ಯ ದೇವಾಲಯ (ಐಹೊಳೆ)



ಪಾಪನಾಥ ದೇವಾಲಯ (ಪಟ್ಟದಕಲ್ಲು)



ಸಂಗಮೇಶ್ವರ ದೇವಾಲಯ (ಮಹಾಕೂಟ)



ಗಳಗನಾಥ ದೇವಾಲಯ (ಪಟ್ಟದಕಲ್ಲು)

## ದಾಕ್ಷಿಣಾತ್ಯ ನಾಗರ ಶೈಲಿಯ ಶಿಖರ ವಿನ್ಯಾಸಗಳು:



ಉತ್ತರ ಭೂತನಾಥ ದೇವಾಲಯ (ಬಾದಾಮಿ)



ಮೇಲಿನ ಶಿವಾಲಯ (ಬಾದಾಮಿ)



ಸಂಗಮೇಶ್ವರ ದೇವಾಲಯ (ಪಟ್ಟದಕಲ್ಲು)

## ದ್ರಾವಿಡ ವಿಮಾನ ಶೈಲಿಯ ಶಿಖರ ವಿನ್ಯಾಸಗಳು:



ಮಹಾಕೂಟೇಶ್ವರ ದೇವಾಲಯ (ಮಹಾಕೂಟ)



ಮಲ್ಲಿಕಾರ್ಜುನ ದೇವಾಲಯ (ಮಹಾಕೂಟ)



ಮಾಲೆಗಿತ್ತಿ ದೇವಾಲಯ (ಬಾದಾಮಿ)

## ವೇಸರ ಶಿಖರ ವಿನ್ಯಾಸದ ದೇವಾಲಯಗಳು:



ಮಲ್ಲಿಕಾರ್ಜುನ ದೇವಾಲಯ (ಪಟ್ಟದಕಲ್ಲು)



ದುರ್ಗಾ ದೇವಾಲಯ (ಐಹೊಳೆ)

ಹೀಗೆ ವಿವಿಧ ವಾಸ್ತು ಪ್ರಯೋಗ, ವಿಮಾನ ಶೈಲಿಯ ನಿರ್ಮಾಣ ಕಾರ್ಯದಲ್ಲಿ ಚಾಲುಕ್ಯ ಶಿಲ್ಪಿಗಳು ತಮ್ಮ ಕಲಾಜಾಣ್ಮೆಯನ್ನು ಮೆರೆಸಿ ಮೇರುಮಟ್ಟದಲ್ಲಿ ವಾಸ್ತುಶಿಲ್ಪಗಳನ್ನು ನಿರ್ಮಿಸಿದ್ದು ನಮ್ಮ ಗಮನಕ್ಕೆ ಬರುತ್ತದೆ. ಐಹೊಳೆಯ ಪರಿಸರದಲ್ಲಿ ಕಾಣಸಿಗುವ ವೇಸರ ಶೈಲಿಯ 'ದುರ್ಗಾದೇವಾಲಯ' ಅಪರೂಪದ್ದಾದ ವಾಸ್ತುಶಿಲ್ಪ. ಇಂಥ ದೇವಾಲಯಗಳಲ್ಲಿ ಕಲಾ ಪ್ರಯೋಗಗಳನ್ನು ನಾವು ಕಣ್ಣಾರೆ ಕಂಡು ಅಲ್ಲಿನ ಕಲಾ ವೈಭವವನ್ನು ಸವಿಯಬೇಕಷ್ಟೇ !

# ಸಮಾರೋಪ

ಪ್ರಸ್ತುತ ಚಾಲುಕ್ಯ ವಾಸ್ತುಶಿಲ್ಪಗಳ ತಲವಿನ್ಯಾಸ ಕುರಿತ ಈ ಗ್ರಂಥದಲ್ಲಿ ಚಾಲುಕ್ಯ ದೇವಾಲಯಗಳ ಉಗಮ, ವಿಕಾಸದ ವಿಷಯ ವಿವರಣೆ ಕೊಡುತ್ತ ಆಯಾ ಕಾಲ ಹಾಗೂ ಸಂದರ್ಭದಲ್ಲಿ ಶಾಸ್ತ್ರಾಧಾರಗಳ ಆಧಾರದಲ್ಲಿ ಆಗಿರುವ ಪರಿಷ್ಕರಣೆಗಳ ಸ್ಥೂಲ ವಿಚಾರಗಳ ಬಗೆಗೂ ತಿಳಿಸಿಕೊಡುವ ಪ್ರಯತ್ನವನ್ನಿಲ್ಲಿ ಮಾಡಲಾಗಿದೆ. ಐಹೊಳೆ, ಬಾದಾಮಿ, ಪಟ್ಟದಕಲ್ಲುಗಳಲ್ಲದೇ ಮಹಾಕೂಟದಲ್ಲಿರುವ ಕೆಲವು ವಾಸ್ತುಶಿಲ್ಪಗಳನ್ನು ಪ್ರಯೋಗ ರೂಪವಾಗಿ ಈ ಗ್ರಂಥದಲ್ಲಿ ದೇವಾಲಯಗಳು ಬೆಳೆದು ಬಂದ ಹಾದಿಯನ್ನು ಕೆಲವು ಮೂಲ ಶಿಲ್ಪಶಾಸ್ತ್ರ ಗ್ರಂಥಗಳಲ್ಲಿನ ಅಂಶಗಳಿಗೆ ಅನುಸಾರವಾಗಿ ವಿಶ್ಲೇಷಿಸುತ್ತ ಹಲವಾರು ಪ್ರಯೋಗಗಳನ್ನು ತೌಲನಿಕವಾಗಿ ವಿವರಿಸಿ ತಿಳಿಸುವ ಪ್ರಯತ್ನ ಮಾಡಲಾಗಿದೆ. ಚಾಲುಕ್ಯರ ವಂಶಾವಳಿ, ಸಾಂಸ್ಕೃತಿಕ ವೈಭವದೊಂದಿಗೆ ಆರಂಭಗೊಳ್ಳುವ ಈ ಸಂಪ್ರಬಂಧವು ಚಾಲುಕ್ಯ ವಾಸ್ತುಶಿಲ್ಪಗಳು ಪ್ರಾರಂಭದಿಂದ ಅಂತಿಮ ಘಟ್ಟದವರೆಗಿನ ಬೆಳವಣಿಗೆಯ ಬಗೆಗೆ ಸಮಗ್ರ ವಿಷಯ ಪ್ರಸ್ತಾವನೆ ಇಲ್ಲಿ ಮೂಡಿ ಬಂದಿದೆ. ಚಾಲುಕ್ಯ ದೇವಾಲಯಗಳ ನಿರ್ಮಾಣ ಪೂರ್ವದಲ್ಲಿ ದೇವಾಲಯ ವಾಸ್ತುಶಿಲ್ಪಕ್ಕೆ ಸಂಬಂಧಿತವಾದ ವಾಸ್ತು ಮಂಡಲ, ದೇವಾಲಯಕ್ಕೆ ನಿವೇಶನ ಆಯ್ಕೆ, ದೇವಾಲಯ ತಂತ್ರ, ದೇವಾಲಯ ಮಂಡಲ, ವರ್ಗೀಕರಣ, ಪ್ರಮುಖ ಭಾಗಗಳ ಬಗೆಗೆ ಕಿರುಪರಿಚಯವನ್ನು ಸಹ ಈ ಕೃತಿಯಲ್ಲಿ ಅಳವಡಿಸಲು ಸಾಧ್ಯವಾಗಿದೆ. ವಾಸ್ತು ನಿರ್ಮಾಣದಲ್ಲಿ ಪ್ರಮುಖವಾದ ರಚನಾಕ್ರಮಗಳ ಕುರಿತು ವಿಶ್ಲೇಷಣೆ ನೀಡುವುದರೊಂದಿಗೆ ಇಲ್ಲಿ ದೇವಾಲಯ ವಾಸ್ತು ಶಿಲ್ಪಗಳ ಪ್ರಯೋಗಗಳನ್ನು ಸ್ವಲ್ಪದರಲ್ಲಿ ವಿವರಿಸಲಾಗಿದೆ.

ದೇವಾಲಯ ರಚನಾಪೂರ್ವದಲ್ಲಿ ಪ್ರಮುಖವಾದ ಈ ಎಲ್ಲ ವಿಷಯಗಳ ಬಗೆಗಿನ ವಾಸ್ತುಶಾಸ್ತ್ರದ ಸಂಗತಿಗಳನ್ನು ಈ ಸಂದರ್ಭದಲ್ಲಿ ವಿಶದೀಕರಿಸುತ್ತ, ನಂತರದಲ್ಲಿ ಚಾಲುಕ್ಯ ದೇವಾಲಯಗಳ ನಿರ್ಮಾಣದ ಬಗೆಗೆ ಸ್ಥೂಲವಾದ ಪರಿಚಯಕ್ಕೆ ಪ್ರಯತ್ನಿಸಲಾಗಿದೆ. ಈ ದೇವಾಲಯ ರಚನೆಯಲ್ಲಿನ ವಾಸ್ತು ಪ್ರಯೋಗಗಳಲ್ಲಿ ಪ್ರಮುಖವಾದದ್ದು ತಲವಿನ್ಯಾಸ ಭಾಗ. ಯಾವುದೇ ವಾಸ್ತು ಶಿಲ್ಪಕ್ಕೆ ಶಾಸ್ತ್ರಬದ್ಧವಾದ ವಾಸ್ತು ಲಕ್ಷಣಗಳು ಬೇಕೇ ಬೇಕು. ದೇವಾಲಯಗಳ ಪ್ರಾರಂಭ ಕಾಲದಿಂದಲೂ ಪ್ರಯೋಗಗೊಂಡ ವಿವಿಧ ವಾಸ್ತುಪ್ರಯೋಗಗಳು ಚಾಲುಕ್ಯ ದೇವಾಲಯಗಳಲ್ಲಿ ಪಡೆದುಕೊಂಡ ಸ್ಥಿತಿಗತಿಗಳನ್ನು ಆಧಾರ ಸಹಿತವಾಗಿ ಪ್ರಸ್ತುತ ಗ್ರಂಥದಲ್ಲಿ ವಿವರಿಸುವಲ್ಲಿ ಸಾಧ್ಯವಾಗಿದೆ. ಕೆಲವು ವಾಸ್ತು ವಿದ್ವಾಂಸರ ಕೃತಿಗಳ ವಿಚಾರಗಳನ್ನು ಸಹ ಪೂರಕವೆಂಬಂತೆ ಉಲ್ಲೇಖಿಸಲಾಗಿದೆ.

ದೇವಾಲಯ ನಿರ್ಮಾಣದಲ್ಲಿ ವಾಸ್ತು ಪ್ರಯೋಗಗಳು ಪ್ರಮುಖವಾದವು. ಚಾಲುಕ್ಯ ಸ್ಥಪತಿಗಳು ತಮ್ಮ ವಾಸ್ತು ಶಿಲ್ಪ ರಚನಾ ಕ್ರಮದಲ್ಲಿ ಅಳವಡಿಸಿರುವ ಮುಖ್ಯ ಭಾಗಗಳು, ಶಿಲ್ಪ ಶಾಸ್ತ್ರಕ್ಕನುಸಾರವಾಗಿ ಮುಂದುವರೆಸಿಕೊಳ್ಳುತ್ತ ಹೊಸ ಹೊಸ ಪ್ರಯೋಗಗಳನ್ನು ಬಳಸಿ ವಿನೂತನ ದೇವಾಲಯಗಳ ರಚನೆಗೈದಿರುವ ಹಲವು ದೃಷ್ಟಾಂತಗಳೂ ನಮಗೆ ಈ ಗ್ರಂಥದಲ್ಲಿ ಕಾಣಸಿಗುತ್ತವೆ. ಐಹೊಳೆ, ಬಾದಾಮಿ,

ಪಟ್ಟದಕಲ್ಲು ಹಾಗೂ ಮಹಾಕೂಟಗಳಲ್ಲಿರುವ ಕೆಲವೇ ಆಯ್ದ ವಾಸ್ತುಶಿಲ್ಪಗಳನ್ನು ಮಾತ್ರ ಈ ಗ್ರಂಥದಲ್ಲಿ ಪ್ರಯೋಗಾತ್ಮಕವಾಗಿ ಬಳಸಿಕೊಳ್ಳಲಾಗಿದೆ. ಗುಪ್ತರ ಕಾಲದಿಂದ ಉಗಮಗೊಂಡ ಈ ವಾಸ್ತುಶಿಲ್ಪ ಪ್ರಯೋಗ ಕಾರ್ಯಗಳು ಚಾಲುಕ್ಯ ವಾಸ್ತುಶಿಲ್ಪಿಗಳ ಕಾರ್ಯ ಕೌಶಲ್ಯದಲ್ಲಿನ ಸ್ವರೂಪದ ಚಿತ್ರಣ ಇಲ್ಲಿ ಕಾಣಸಿಗುತ್ತದೆ.

ಚಾಲುಕ್ಯರ ಒಂದೊಂದೂ ವಾಸ್ತುಶಿಲ್ಪಗಳು ಮಾದರಿ ಎಂಬಂತೆ ನಮ್ಮ ಕಲಾಭ್ಯಾಸಿಗಳಿಗೆ ಕಾಣಸಿಗುತ್ತವೆ. 'ದೇವಾಲಯಗಳ ತೂಗುವ ತೊಟ್ಟಿಲು' ಎಂಬ ಹೆಗ್ಗಳಿಕೆ ಪಡೆದುಕೊಂಡ ಐಹೊಳೆಯ ಗುಹಾಲಯ, ರಾಚನಿಕ ದೇವಾಲಯಗಳಲ್ಲಿ ಪ್ರಯೋಗಿಸಲ್ಪಟ್ಟಿರುವ ವಾಸ್ತು ಪ್ರಯೋಗ ಒಂದು ರೀತಿಯದಾಗಿದ್ದರೆ ಬಾದಾಮಿಯ ಮೇಣ ಬಸದಿ ಹಾಗೂ ಅಲ್ಲಿನ ರಾಚನಿಕ ದೇವಾಲಯಗಳಲ್ಲಿ ನಡೆಸಿದ ವಾಸ್ತು ಪ್ರಯೋಗಗಳು ವಿಭಿನ್ನವಾಗಿ ನಮಗೆ ತೋರುತ್ತವೆ. ಹಾಗೆಯೇ ಮಹಾಕೂಟದ ಕೆಲವೇ ವಾಸ್ತುಶಿಲ್ಪಗಳಲ್ಲಿ ಇನ್ನೊಂದು ಬಗೆಯ ವಿನ್ಯಾಸವಿದ್ದರೆ ಪಟ್ಟದಕಲ್ಲಿನ ವಾಸ್ತುಶಿಲ್ಪ ನಿರ್ಮಾಣದಲ್ಲಿ ಪರಿಪೂರ್ಣ ವಾಸ್ತುಶಿಲ್ಪ ಪ್ರಯೋಗಗಳನ್ನು ಅಳವಡಿಸಿದ ದೃಷ್ಟಾಂತಗಳು ನಮ್ಮೆಲ್ಲರ ಗಮನಕ್ಕೆ ಬರುತ್ತವೆ. ಇಲ್ಲಿನ ಒಂದೊಂದೂ ದೇವಾಲಯಗಳೂ ಸಹ ಕಲಾ ಪ್ರೇಮಿಗಳ ಮನಸ್ಸನ್ನು ಆಕರ್ಷಿಸುತ್ತವೆ.

ಐಹೊಳೆಯ ಪರಿಸರದಲ್ಲಿ ರಚನೆಗೊಂಡ ವಾಸ್ತುಶಿಲ್ಪಗಳಲ್ಲಿ ಪ್ರಾರಂಭದಿಂದ ವಿಕಾಸಗೊಂಡ ಪ್ರಯೋಗಗಳು, ಶೈಲಿಗಳು ಒಂದು ವಿನೂತನ ಅನುಭವವನ್ನುಂಟು ಮಾಡುತ್ತವೆ. ಐಹೊಳೆಯ ಗೌಡರ ದೇವಾಲಯ (ಮೂಲತ: ಭಗವತಿ ದೇವಾಲಯ) ವಾಸ್ತುಶಾಸ್ತ್ರ ಲಕ್ಷಣಗಳಲ್ಲಿ ರಚನೆಗೊಂಡ ದೃಷ್ಟಾಂತವನ್ನು ನೀಡಿದರೆ ಅಲ್ಲಿನ ಇನ್ನಿತರ ದೇವಾಲಯಗಳಾದ ಲಾಡಖಾನ್, ಕೊಂತಿ ದೇವಾಲಯ, ರಾವಳಫಡಿ ಗುಹಾಲಯ, ಜೈನ ಮೀನಬಸದಿ, ಬೌದ್ಧ ಚೈತ್ಯಾಲಯ, ಮೊದಲಾದವುಗಳಲ್ಲಿ ಕಾಣಸಿಗುವ ವಾಸ್ತು ಲಕ್ಷಣಗಳೇ ಭಿನ್ನತೆಯಿಂದ ಕೂಡಿವೆ. ಐಹೊಳೆಯ ರಾಚನಿಕ ದೇವಾಲಯಗಳಾದ ತಾರಾಬಸಪ್ಪ, ಹುಚ್ಚಿಮಲ್ಲಿ ದೇವಾಲಯ, ಹುಚ್ಚಪ್ಪಯ್ಯ ದೇವಾಲಯ, ಗಳಗನಾಥ ದೇವಾಲಯ, ಹುಚ್ಚಪ್ಪಯ್ಯ ಮಠ, ಚಿಕ್ಕಿ ದೇವಾಲಯ, ಮಲ್ಲಿಕಾರ್ಜುನ ದೇವಾಲಯ, ಮೇಗುತಿ ಜಿನಾಲಯ, ರಾಮಲಿಂಗ ದೇವಾಲಯ ಹಾಗೂ ದುರ್ಗಾ ದೇವಾಲಯಗಳಲ್ಲಿ ಪ್ರಯೋಗಿಸಲ್ಪಟ್ಟ ದೇವಾಲಯ ವಾಸ್ತು ಲಕ್ಷಣಗಳಂತೂ ಕಲಾಭ್ಯಾಸಿಗಳಿಗೆ ಹತ್ತು ಹಲವು ವಿಷಯಗಳ ಪರಿಚಯವನ್ನೊದಗಿಸಿ ಕೊಡುತ್ತವೆ.

ಶಿಲ್ಪಕಾಶಿಯೆಂಬ ಹೆಗ್ಗಳಿಕೆಯನ್ನು ಹೊಂದಿರುವ ಬಾದಾಮಿಯಲ್ಲಿ ನಿರ್ಮಾಣಗೊಂಡಿರುವ ವಿಶೇಷ ವಾಸ್ತುಶಿಲ್ಪಗಳಾದ ನಾಲ್ಕೂ ಗುಹಾಂತರ ದೇವಾಲಯಗಳು, ರಾಚನಿಕ ದೇವಾಲಯಗಳಾದ ಮಾಲೆಗಿತ್ತಿ ದೇವಾಲಯ, ಮೇಲಿನ ಶಿವಾಲಯ, ಜಂಬುಲಿಂಗ ದೇವಾಲಯ, ಭೂತನಾಥ ದೇವಾಲಯಗಳಲ್ಲಿನ ವಾಸ್ತು ಪ್ರಯೋಗಗಳು ಇನ್ನೊಂದು ಬಗೆಯ ಅನುಭವಗಳನ್ನು ನೀಡುತ್ತವೆ. ಹಾಗೆಯೇ ಮಹಾಕೂಟದ ವಾಸ್ತುಶಿಲ್ಪಗಳಲ್ಲಿ ಕಾಣಸಿಗುವ ಏಕಕೂಟ ದೇವಾಲಯಕ್ಕೆ ಉದಾಹರಣೆಯಾದ ಬಾಣಂತಿಗುಡಿಯಿಂದ ಮೊದಲುಗೊಂಡು ಮಲ್ಲಿಕಾರ್ಜುನ, ಸಂಗಮೇಶ್ವರ ಹಾಗೂ ಮಹಾಕೂಟೇಶ್ವರ ದೇವಾಲಯಗಳಲ್ಲಿನ ವಾಸ್ತುಶೈಲಿಯ ಪ್ರಯೋಗಗಳು ಕೆಲವು ವಿಶೇಷ ಅಂಶಗಳನ್ನೇ ಹೊಂದಿವೆ.

ವಾಸ್ತುಶಿಲ್ಪಗಳ ಪರಿಪೂರ್ಣತೆ ಪಡೆದುಕೊಂಡಿರುವ ಪಟ್ಟದಕಲ್ಲಿನಲ್ಲಿಯ ಒಂದೊಂದು ದೇವಾಲಯಗಳು ಕಲಾಭ್ಯಾಸಿಗಳಿಗೆ ಹೇರಳವಾದ ವಿಷಯ ಸಾಮಗ್ರಿಯನ್ನೊದಗಿಸಿ ಕೊಡುತ್ತವೆ. ಪಟ್ಟದಕಲ್ಲು ದೇವಾಲಯ ಸಮುಚ್ಚಯದಲ್ಲಿ ಕಾಣಸಿಗುವ ಪ್ರಮುಖವಾದ ವಿರೂಪಾಕ್ಷ ದೇವಾಲಯ, ಮಲ್ಲಿಕಾರ್ಜುನ ದೇವಾಲಯ, ಸಂಗಮೇಶ್ವರ ದೇವಾಲಯ, ಗಳಗನಾಥ ದೇವಾಲಯ, ಪಾಪನಾಥ ದೇವಾಲಯಗಳಲ್ಲಿ

ಶಿಲ್ಪಿಗಳು ಅಳವಡಿಸಿಕೊಂಡ ವಾಸ್ತು ಲಕ್ಷಣಗಳು ಹತ್ತು ಹಲವು ವಿಶೇಷತೆಗಳಿಂದ ಕೂಡಿವೆ. ಕಲಾರಸಿಕರಿಗೆ ವಿಶೇಷ ಅನುಭವ ನೀಡುತ್ತವೆ.

**ದೇವಾಲಯಗಳ ಉಗಮ ಮತ್ತು ಪ್ರಾಚೀನತೆ:**

ನಮ್ಮ ದೇಶದ ದೇವಾಲಯಗಳ ಹಿನ್ನೆಲೆಯ ಅಧ್ಯಯನದಲ್ಲಿ 'ಸ್ತೂಪಗಳು' – ಬೌದ್ಧ ಧರ್ಮೀಯರ ರಚನೆಗಳ ಮೂಲವೆಂಬುದಾಗಿ ತಿಳಿಯುತ್ತದೆ. ಇತರ ಯಾವುದೇ ವಾಸ್ತುಶಿಲ್ಪಗಳು ನಿರ್ಮಾಣಗೊಂಡ ಬಗ್ಗೆ ಉದಾಹರಣೆಗಳಿಲ್ಲ. ಕ್ರಿ.ಶ.ಪೂ. 1ನೇಯ ಶತಮಾನದಲ್ಲಿ ದೇವಾಲಯ ನಿರ್ಮಾಣಗೊಂಡ ಬಗೆಗೆ ಶಾಸನ ಹಾಗೂ ಪ್ರಾಚ್ಯ ವಸ್ತುಗಳ ಆಧಾರದಲ್ಲಿ ಹೇಳಲಾಗುತ್ತದೆ. ದೇವಾಲಯಗಳ ಪ್ರಾಚೀನತೆಯ ಬಗೆಗೆ ಅಧ್ಯಯನ ಮಾಡಿದ ಡಾ. ಡಿ.ಜಿ.ಕುಲಕರ್ಣಿಯವರು ತಮ್ಮ "ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು" ಗ್ರಂಥದಲ್ಲಿ ಈ ಕೆಲವು ಅಭಿಪ್ರಾಯಗಳನ್ನು ವಿವರಿಸಿದ್ದಾರೆ. "ಬಿಹಾರದ ರಾಜಗೀರ್, ರಾಜಸ್ಥಾನದ ನಗರಿಯಲ್ಲಿ ಕ್ರಿ.ಶ.ಪೂ. ನಾಲ್ಕರಿಂದ ಕ್ರಿ.ಪೂ. 3ನೇ ಶತಮಾನದವರೆಗಿನ ಇಟ್ಟಿಗೆಯ ದೇವಾಲಯಗಳು ಇದ್ದವೆಂದೂ ಮತ್ತು ಈ ದೇವಾಲಯಗಳು ಕಟ್ಟಿಗೆಯ ಪ್ರವೇಶದ್ವಾರವನ್ನು ಒಳಗೊಂಡಿದ್ದವೆಂದೂ ತಿಳಿದು ಬರುತ್ತದೆ. ಈ ದೇವಾಲಯಗಳು ಬಾಳಿಕೆ ಬಾರದ ವಸ್ತುಗಳನ್ನು ಉಪಯೋಗಿಸಿ (ಮರ, ಇಟ್ಟಿಗೆ) ಕಟ್ಟಿರುವುದರಿಂದ ಕ್ರಮೇಣ ನಾಶಹೊಂದಿದವು. ಮೌರ್ಯರ ಕಾಲದಲ್ಲಿ ಆರಂಭಗೊಂಡ ಗುಹಾಂತರ ದೇವಾಲಯಗಳು ಮುಂದೆ ಸಾವಿರ ವರ್ಷಗಳವರೆಗೂ ನಡೆದು ಬಂದವೆಂದೂ, ಭಾರತದ ತುಂಬ ವ್ಯಾಪಿಸಿದವು" ಎಂಬುದಾಗಿ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಅದೇ ರೀತಿ ಕರ್ನಾಟಕದಲ್ಲಿಯ ದೇವಾಲಯ ಪ್ರಾಚೀನತೆಯ ಬಗೆಗೆ ಸ್ಥೂಲವಾಗಿ ಅಧ್ಯಯನ ಮಾಡಿದ ಡಾ.ಡಿಜಿ.ಕುಲಕರ್ಣಿ ಇದೇ ಗ್ರಂಥದಲ್ಲಿ "ದೇವಾಲಯಗಳ ಪ್ರಾಚೀನತೆಯತ್ತ ಗಮನಹರಿಸಿದರೆ ಕ್ರಿ.ಶ.ದ ಆರಂಭದ ಶತಕದಲ್ಲಿ ಇಲ್ಲಿ ದೇವಾಲಯಗಳು ಇದ್ದವೆಂದು ಪ್ರಾಚ್ಯವಸ್ತು ಅವಶೇಷಗಳು ಮತ್ತು ಲಭ್ಯ ಶಾಸನಗಳ ಆಧಾರದಲ್ಲಿ ಸ್ಪಷ್ಟವಾಗಿ ಹೇಳಬಹುದು. ಗುಲ್ಬರ್ಗಾ ಜಿಲ್ಲೆಯ ಸನ್ನತಿಯು ಕ್ರಿ.ಶ. ಎರಡನೇ ಶತಮಾನದ ವೇಳೆಗೆ ಬೌದ್ಧರ ಬಹು ಮುಖ್ಯ ನೆಲೆಯಾಗಿತ್ತು. ಇಲ್ಲಿ ಸ್ತೂಪ ಮತ್ತು ಇಟ್ಟಿಗೆಯ ಕಟ್ಟಡಗಳ ಅವಶೇಷಗಳು ದೊರೆತಿವೆ. ಶಿಲ್ಪಾಲಂಕೃತ ಶಿಲಾಶಾಸನಗಳು, ಮೂರ್ತಿ, ಶಿಲ್ಪಾವಶೇಷಗಳು ಸಾಕಷ್ಟು ಸಂಖ್ಯೆಯಲ್ಲಿ ಲಭ್ಯವಾಗಿವೆ" ಎಂಬುದಾಗಿ ಉಲ್ಲೇಖಿಸಿದ್ದಾರೆ. ಹಾಗೆಯೇ ಕದಂಬರ ಶಾಸನ, ಶಾತವಾಹನರ ಪ್ರಾಚೀನ ದೇವಾಲಯ, ಗಂಗರ ಶಾಸನ, ಹಾಗೂ ದೇವಾಲಯಗಳ ಆಧಾರದಲ್ಲಿ ದೇವಾಲಯಗಳ ಉಗಮ ವಿಕಾಸದ ಕಥನವು ಸಾಕಷ್ಟು ಹಿನ್ನೆಲೆಯ ಪರಿಚಯ ಮಾಡಿಕೊಡುತ್ತದೆ.

ಕರ್ನಾಟಕವನ್ನಾಳಿದ ಅರಸು ಮನೆತನಗಳಲ್ಲಿ ಚಾಲುಕ್ಯ ದೊರೆಗಳು ಕ್ರಿ.ಶ. ಆರನೆಯ ಶತಮಾನದಿಂದ ಗುಹಾಲಯಗಳ ನಿರ್ಮಾಣದೊಂದಿಗೆ "ಚಾಲುಕ್ಯ ವಾಸ್ತುಶಿಲ್ಪ"ಕ್ಕೆ ನಾಂದಿ ಹಾಕಿ ಆ ಪರಿಸರದಲ್ಲಿ ನೂರಾರು ದೇವಾಲಯಗಳನ್ನು ರಚಿಸಿ ಹೊಸ ಅಧ್ಯಾಯವನ್ನು ಪ್ರಾರಂಭಿಸಿರುವುದೊಂದು ವಿಶೇಷ. ಇವರು ನಿರ್ಮಾಣಗೈದ ವಾಸ್ತುಶಿಲ್ಪಗಳ ಪ್ರಾಯೋಗಿಕ ಸ್ಥಳ 'ಐಹೊಳೆ' ಇಂದಿಗೂ ವೈವಿಧ್ಯ ದೇವಾಲಯಗಳಿಂದಾಗಿ "ಭಾರತೀಯ ದೇವಾಲಯ ವಾಸ್ತುಶಿಲ್ಪದ ತೊಟ್ಟಿಲು" ಎಂಬ ಹೆಗ್ಗಳಿಕೆಗೆ ಸಹ ಪಾತ್ರವಾಗಿದೆ. ಚಾಲುಕ್ಯರು ಗುಹಾಂತರ ದೇವಾಲಯ ಹಾಗೂ ರಾಚನಿಕ ದೇವಾಲಯಗಳಲ್ಲಿ ವೈವಿಧ್ಯ ಶಿಲ್ಪ ಶಾಸ್ತ್ರಗಳ ಬಳಕೆ ಮಾಡಿರುವುದರ ಕಾರಣ ಇದೊಂದು ವಾಸ್ತುಶಿಲ್ಪ ಪ್ರಯೋಗ ಶಾಲೆಯಂತೆಯೂ ಕಲಾಭ್ಯಾಸಿಗಳಿಗೆ ಹೆಚ್ಚಿನ ವಿಷಯ ಸಾಮಗ್ರಿಗಳನ್ನೊದಗಿಸುತ್ತದೆ.

**ದೇವಾಲಯ ವಾಸ್ತು ವಿಶೇಷತೆಗಳು :**

ಮಾನವ ತನಗಾಗಿ ಕಟ್ಟಿಕೊಂಡದ್ದನ್ನು ಮನೆ– 'ಗೃಹವಾಸ್ತುಶಿಲ್ಪ"ವೆಂದು ಕರೆದು ದೇವರಿಗಾಗಿ ಕಟ್ಟಿದ ಆಲಯವನ್ನು "ದೇವಾಲಯ ವಾಸ್ತುಶಿಲ್ಪ"ವೆಂದು ಹೆಸರಿಸಿದ್ದು ತಿಳಿದು ಬರುತ್ತದೆ. ದೇವಾಲಯಗಳ ರಚನೆಗೆ ಮೊದಲು ನಿವೇಶನ ಆಯ್ಕೆಯೂ ಪ್ರಮುಖ ಪಾತ್ರ ವಹಿಸುತ್ತದೆ. ಶಿಲ್ಪ ಶಾಸ್ತ್ರಗಳಲ್ಲಿ "ಭೂ ಪರೀಕ್ಷಾ" ಮಹತ್ವಪೂರ್ಣ ಅಧ್ಯಾಯ. ನಿವೇಶನ ಆಯ್ಕೆಯ ನಂತರದಲ್ಲಿ ಬಹುಮುಖ್ಯವಾದದ್ದು ದೇವಾಲಯದ ತಲನಕ್ಷೆ ಇದನ್ನೇ "ವಾಸ್ತುಪುರುಷ ಮಂಡಲ" ಎಂದು ಹೆಸರಿಸಲಾಗಿದೆ. ಭಾರತೀಯ ದೇವಾಲಯಗಳ ರಚನಾ ವಿನ್ಯಾಸದ ಮೂಲ ಸ್ವರೂಪ "ಚಚ್ಚೌಕಾಕೃತಿ"ಯಾಗಿದ್ದು, ಅದನ್ನೇ ತ್ರಿಕೋನ, ಷಟ್‌ಕೋನ, ಅಷ್ಟಕೋನ ವೃತ್ತವಾಗಿಯೂ ಪರಿವರ್ತಿಸಿಕೊಳ್ಳಬಹುದು. (ಡಾ. ಡಿ.ಜಿ.ಕುಲಕರ್ಣಿ – ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು – ಪುಟ. 9) ಅವರು ಈ ಚೌಕಗಳ ಕುರಿತು ವಿವರಿಸುತ್ತ "ವಾಸ್ತು ಶಾಸ್ತ್ರದಲ್ಲಿ ಈ ರೀತಿಯಾಗಿ 1,2,3,4, ಮುಂತಾಗಿ ಚೌಕಗಳು ಇರುವಂತೆ ಅನುಕ್ರಮಿಕ ಶ್ರೇಣಿಯಲ್ಲಿ ವಾಸ್ತು ಮಂಡಲದ ಚೌಕಗಳ ಸಂಖ್ಯೆ ಏರುತ್ತಾ ಸಾಗುತ್ತದೆ. ಇವುಗಳಲ್ಲಿ 64 ಚೌಕಗಳ ವಾಸ್ತು ಮಂಡಲವು ಬಹು ಶ್ರೇಷ್ಠವೆಂದು ಹೇಳುತ್ತಾರೆ. ವಾಸ್ತು ಪುರುಷ ಮಂಡಲವು ವಾಸ್ತು ಪುರುಷನ ರೂಪ ಹಾಗೂ ಯಂತ್ರ ವಾಸ್ತು ಪುರುಷನನ್ನು ಮಾನವಾಕಾದಲ್ಲಿ ಚಿತ್ರಿಸಲಾಗಿದೆಯೆಂದೂ 64 ಚೌಕಗಳ ಮಂಡಲದಲ್ಲಿ ಈತನ ಶಿರಸ್ಸು ಪೂರ್ವಾಭಿಮುಖವಾಗಿದ್ದು ಪಾದಗಳು ಪಶ್ಚಿಮ ದಿಕ್ಕಿಗಿರುವುದಾಗಿ ತಿಳಿಸಿ ವಾಸ್ತು ಮಂಡಲದ ಪರಿಧಿಯಲ್ಲಿನ ದೇವತೆ ಹಾಗೂ ಪರಿವಾರ ದೇವತೆಯರ ಸ್ಥಾನ ಕುರಿತು ವಾಸ್ತು ಶಾಸ್ತ್ರಜ್ಞರು ವಿವರಿಸುತ್ತಾರೆ.

ದೇವಾಲಯ ನಿರ್ಮಾಣದಲ್ಲಿ ಪ್ರಾಸಾದ ನಿರ್ಮಾಣ, ದೇವಾಲಯ ಪ್ರಬೇಧಗಳು, ಶೈಲಿಗಳು, ದೇವಾಲಯದ ಪ್ರಮುಖ ಅಂಗಗಳು, ತಿರ್ಯಙ್ಮುಖ ರಚನೆ ಹಾಗೂ ಇತರ ಭಾಗಗಳ ಕುರಿತಂತೆ ಹಲವು ಪ್ರಕಾರದ ವಾಸ್ತು ಶಾಸ್ತ್ರ ಗ್ರಂಥಗಳಲ್ಲಿ ವಿವರಣೆಯ ಆಧಾರದಲ್ಲಿಯೆ ನಮ್ಮ ನಾಡಿನ ದೇವಾಲಯಗಳ ನಿರ್ಮಾಣಗೊಂಡದ್ದು ಒಂದು ವಿಶೇಷ. ಪ್ರಾಚೀನ ವಾಸ್ತು ಶಾಸ್ತ್ರಗ್ರಂಥಗಳೆಲ್ಲವೂ ವೇದಕಾಲದಿಂದ, ಶಾಸ್ತ್ರಾಧಾರಗಳಿಂದ ರಚನೆಗೊಂಡಿರುವುದರಿಂದ ಈ ಗ್ರಂಥಗಳನ್ನು ದಕ್ಷಿಣಾತ್ಯ ಹಾಗೂ ಔತ್ತರೇಯ ಗ್ರಂಥಗಳೆಂದು ವಿಭಜಿಸಿದ ಉದಾಹರಣೆಗಳನ್ನು ಸಂಶೋಧಕರು ಈ ಕೆಳಗಿನಂತೆ ಪಟ್ಟಿ ಮಾಡಿದ್ದು ನಮ್ಮ ಗಮನಕ್ಕೆ ಬರುತ್ತದೆ. ಕ್ರಿ.ಶ. 11ನೇ ಶತಮಾನದ ಭುವನ ಪ್ರದೀಪನ "ಅಪರಾಜಿತ ಪೃಚ್ಛಾ", ಕ್ರಿ.ಶ. 10–11ನೇ ಶತಮಾನದೆನ್ನಲಾದ ಭೋಜನ "ಸಮರಾಂಗಣ ಸೂತ್ರಧಾರ", ಮತ್ಸ್ಯ ಪುರಾಣಕ್ಕೂ ಮೊದಲಿನ ಕಾಲದೆನ್ನಲಾದ ವಿಶ್ವಕರ್ಮನ "ವಿಶ್ವಕರ್ಮ ಪ್ರಕಾಶ", ಕ್ರಿ.ಶ. 11ನೇ ಶತಮಾನದ ಚಾಳುಕ್ಯ ಮೂರನೇ ಸೋಮೇಶ್ವರನ "ಮಾನಸೋಲ್ಲಾಸ", ಕ್ರಿ.ಶ. 12ನೇ ಶತಮಾನದ ಮಂಡನನ "ರೂಪಮಂಡನ" ಗ್ರಂಥಗಳು ಇವೆಲ್ಲ ಔತ್ತರೇಯ ಗ್ರಂಥಗಳು. ಅದರಂತೆ ಕ್ರಿ.ಶ. 9ನೇಯ ಶತಮಾನದ ಮಯಮತ, ಕ್ರಿ.ಶ. 5ನೇ ಶತಮಾನದ "ಮಾನಸಾರ", ಕ್ರಿ.ಶ. 15ನೇ ಶತಮಾನದ "ತಂತ್ರ ಸಮುಚ್ಚಯ", "ಕಾಶ್ಯಪಶಿಲ್ಪ", ವಿಮಾನಾರ್ಚನ ಕಲ್ಪ", "ಪದ್ಮ ಸಂಹಿತಾ", "ಪ್ರಯೋಗ ಮಂಜರಿ", ಕ್ರಿ.ಶ. 10ನೇ ಶತಮಾನದ "ವಾಸ್ತುವಿದ್ಯಾ", ಶ್ರೀಕುಮಾರನ "ಶಿಲ್ಪರತ್ನ" ಮುಂತಾದವು ದಕ್ಷಿಣಾತ್ಯ ಗ್ರಂಥಗಳೆಂದು ವಿದ್ವಾಂಸರು ಗುರುತಿಸಿದ್ದಾರೆ. (ಡಾ. ಡಿ.ಜಿ. ಕುಲಕರ್ಣಿ, ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು. ಪು.9).

**ಉಪಸಂಹಾರ:**

ಪ್ರಸ್ತುತ ಅಧ್ಯಯನದಿಂದ ನಾವು ಈ ಕೆಲವು ಮುಖ್ಯಾಂಶಗಳನ್ನು ನಾವು ತಿಳಿಯಬಹುದು.

ಭಾರತೀಯ ದೇವಾಲಯಗಳು ಬೆಳೆದು ಬಂದ ವಿಧಾನವನ್ನು ಅಧ್ಯಯನ ಮಾಡುವಾಗ ವಾಸ್ತುಶಿಲ್ಪಗಳು ರಚನೆಗೊಳ್ಳುವ ಪೂರ್ವದಲ್ಲಿ ತಲನಕ್ಷೆಯ ರೂಪುರೇಷೆ, ಅದರಲ್ಲಿ ನಡೆದಿರುವ ಪ್ರಯೋಗಗಳು, ವಾಸ್ತುಶಾಸ್ತ್ರಕ್ಕೆ ಸಂಬಂಧಪಟ್ಟ ಅಂಶಗಳು, ವಾಸ್ತುಶಿಲ್ಪಗಳ ರಚನಾ ಕೌಶಲ್ಯಗಳ ಪರಿಚಯವೂ ಇಲ್ಲಿ ಆಗಿರುವುದರಿಂದ ಚಾಲುಕ್ಯ ಅರಸರು ತಮ್ಮ ಆಡಳಿತಾವಧಿಯಲ್ಲಿ ನಿರ್ಮಿಸಿದ ವಾಸ್ತುಶಿಲ್ಪಗಳ ಮೂಲಕ ಅಭಿವ್ಯಕ್ತ ಪಡಿಸಿದ ಕಲಾಪ್ರೇಮದ ಔನ್ನತ್ಯ ಹೇರಳವಾದ ಸಾಮಗ್ರಿಗಳನ್ನೊದಗಿಸುತ್ತದೆ.

ಪ್ರತಿಯೊಂದು ವಾಶ್ತುಶಿಲ್ಪಗಳ ರಚನೆಯಲ್ಲಿ ಶಿಲ್ಪಿಗಳು ನಡೆಸಿದ ಕಲಾಪ್ರಯೋಗ, ಕಲ್ಪನಾಶಕ್ತಿ, ಅಂದಿನ ಕಾಲದ ಜನಜೀವನದ ಹಿನ್ನೆಲೆಯೊಂದಿಗೆ ಅವರಿಗಿದ್ದ ಅಪಾರವಾದ ಧಾರ್ಮಿಕ ಭಾವನೆಗಳೆಲ್ಲವೂ ಅವರ ಕಲೆಯಲ್ಲಿ ಮೂಡಿಬಂದಿರುವುದು ಒಂದು ವಿಶೇಷ. ತಮ್ಮ ವಾಸ್ತುಶಿಲ್ಪಶಾಸ್ತ್ರದ ಪರಿಜ್ಞಾನದ ಮೂಲಕ ಕಟ್ಟಡ ರಚನಾ ಕ್ರಮದಲ್ಲಿಯ ಪ್ರಯೋಗಗಳಂತೂ ಅವರ್ಣನೀಯ. ದೇವಾಲಯದ ವಿವಿಧ ಭಾಗಗಳಲ್ಲಿ ಶಿಲ್ಪಿಗಳು ಸಂಯೋಜಿಸಿದ ಶಿಲ್ಪಗಳು, ವಿಶೇಷವಾಗಿ ವಾಸ್ತು ಅಂಗಗಳು ಸ್ಥಪತಿಗಳ ಕೌಶಲ್ಯದ ಪರಿಚಯವನ್ನೂ ಮಾಡಿಕೊಡುತ್ತವೆ.

ಭಾರತೀಯ ಕಲಾಕ್ಷೇತ್ರಕ್ಕೆ ಅಮೋಘ ಕಾಣಿಕೆ ನೀಡಿದ ಚಾಲುಕ್ಯ ವಾಸ್ತುಶಿಲ್ಪಿಗಳು ತಮ್ಮ ಗುಹಾಂತರ ದೇವಾಲಯ, ರಾಚನಿಕ ದೇವಾಲಯಗಳಲ್ಲಿನ ಶಿಲ್ಪಾಲಂಕಾರ, ವಾಸ್ತು ಶಾಸ್ತ್ರಕ್ಕನುಸಾರವಾಗಿ ದೇವಾಲಯ ನಿರ್ಮಾಣ ಕಾರ್ಯದಲ್ಲಿನ ಚಾಣಾಕ್ಷತೆ, ಕಗ್ಗಲ್ಲಿನಲ್ಲೂ ಕಲಾಕಾವ್ಯದ ರಸಗಂಗೆಯನ್ನು ಹರಿಸಿದ ವಾಸ್ತುಶಿಲ್ಪಿಗಳು ಈ ಚಾಲುಕ್ಯ ದೇವಾಲಯಗಳಲ್ಲಿ ಇನ್ನೂ ಅಮರರಾಗಿದ್ದಾರೆಂಬುವ ಭಾವ ನೋಡುವವರ ಗಮನಕ್ಕೆ ಬರುತ್ತದೆ. ನಮ್ಮ ದೇಶದ ಕಲಾ ಇತಿಹಾಸ ಬಹು ವೈವಿಧ್ಯಪೂರ್ಣತೆಯನ್ನು ಹೊಂದಿದ್ದು ದೇಶದ ಉದ್ದಗಲದಲ್ಲಿ ಶಿಲ್ಪ ಕಲಾ ಕ್ಷೇತ್ರದಲ್ಲಿ ನಡೆದ ನೂರಾರು ಪ್ರಯೋಗಗಳು ಮಾನವ ಜೀವನಕ್ಕೆ ಹೊಂದಿಕೊಂಡಂತೆನಿಸುತ್ತವೆ. ಚಾಲುಕ್ಯ ದೇವಾಲಯಗಳಲ್ಲಿ ಕಂಡು ಬರುವ ಅಸಂಖ್ಯ ಶಿಲ್ಪಗಳು ಒಂದೊಂದು ಕಥೆ ಹೇಳುವುದರೊಂದಿಗೆ ನಮ್ಮ ಭಾರತೀಯ ವಿವಿಧ ಧರ್ಮಗಳ ಯಶೋಗಾಥೆಯನ್ನು ಪರಿಚಯಿಸಿ ಕೊಡುತ್ತವೆ. ನಮ್ಮ ಸಾಂಪ್ರದಾಯಿಕ ವಾಸ್ತುಕಲೆಯ ಬೆಡಗನ್ನು ಅದರ ಸ್ವಾರಸ್ಯವನ್ನು ನಾವು ಪೂರ್ತಿಯಾಗಿ ತಿಳಿದುಕೊಳ್ಳಬೇಕಿದ್ದರೆ ನಾವು ಕಣ್ಣಾರೆಯಾಗಿ ಚಾಲುಕ್ಯ ವಾಸ್ತುಕಲಾ ವೈಭವವನ್ನು ಕಾಣಲೇಬೇಕು. ಅಂಥ ವಾಸ್ತುಶಿಲ್ಪಗಳ ನಿರ್ಮಾಣದ ಈ ಕಥನ ಕಾವ್ಯ ಕಲಾಭ್ಯಾಸಿಗಳಿಗೆ ಉಪಯುಕ್ತವಾದರೆ ಈ ನಮ್ಮ ಪ್ರಯತ್ನ ಯಶಸ್ವಿಯಾಗಬಹುದಲ್ಲವೆ?

# ಗ್ರಂಥ ಋಣ

## ಕನ್ನಡ ಗ್ರಂಥಗಳು


| | | | |
|---|---|---|---|
| 1. | ಡಾ. ಜಿ. ಜ್ಞಾನಾನಂದ | ಬಾದಾಮಿ ಚಾಲುಕ್ಯ ಶಿಲ್ಪಕಲೆ | 2008 |
| 2. | ಡಾ. ಶೀಲಾಕಾಂತ ಪತ್ತಾರ | ಬಾದಾಮಿ ಚಾಲುಕ್ಯರು ಲೇಖನ ಸಂಪುಟ | 2009 |
| 3. | ಡಾ. ಎಸ್. ರಾಜಶೇಖರ | ಬಾದಾಮಿ ಚಾಲುಕ್ಯರು ಲೇಖನ ಸಂಪುಟ | 2009 |
| 4. | ಡಾ. ಜಿ. ಜ್ಞಾನಾನಂದ | ವಾಸ್ತು ಪುರುಷ ನೆಲೆ ಹಿನ್ನೆಲೆ | 2007 |
| 5. | ಡಾ. ಜಿ. ಜ್ಞಾನಾನಂದ | ಕಾಶ್ಯಪ ಶಿಲ್ಪ ಶಾಸ್ತ್ರಂ – ಪ್ರಥಮ ಹಾಗೂ ದ್ವಿತೀಯ ಸಂ. | 2004–06 |
| 6. | ಪ್ರೊ.ಎಸ್.ಕೆ.ರಾಮಚಂದ್ರರಾವ್ | ಭಾರತದ ದೇವಾಲಯ ನೆಲೆ ಹಿನ್ನೆಲೆ | 2010 |
| 7. | ಕೂ.ಸ. ಅಪರ್ಣ | ದೇವಾಲಯ ವಾಸ್ತುಶಿಲ್ಪ ಪರಿಚಯ | 1999 |
| 8. | ಎಂ.ಎನ್. ಪ್ರಭಾಕರ | ದೇವಾಲಯ ವಾಸ್ತು | 2011 |
| 9. | ಡಾ. ಸಿಂದಗಿ ರಾಜಶೇಖರ | ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ | 1988 |
| 10. | ಪ್ರೊ. ಶ್ರೀನಿವಾಸ ಪಾಡಿಗಾರ | ಬಾದಾಮಿ ಚಾಲುಕ್ಯರ ಶಾಸನಗಳು, ವಾಸ್ತು, ಶಿಲ್ಪಕಲೆ | 2008 |
| 11. | ಎ.ಎಂ. ಅಣ್ಣಿಗೇರಿ | ಐಹೊಳೆ – ಸಂಸ್ಕೃತಿ ಮತ್ತು ಕಲೆ | 1974 |
| 12. | ಡಾ. ಶೀಲಾಕಾಂತ ಪತ್ತಾರ | ಬಾದಾಮಿ ಸಾಂಸ್ಕೃತಿಕ ಅಧ್ಯಯನ | 2000 |
| 13. | ಬಿ. ವೆಂಕೋಬರಾಯರು | ಮೈಸೂರು ದೇಶದ ವಾಸ್ತುಶಿಲ್ಪ | |
| 14. | ಡಾ. ಎಸ್.ಕೆ. ಜೋಶಿ | ಉತ್ಖನನದ ಅನುಭವಗಳು | |
| 15. | ಡಾ. ಡಿ.ಜಿ. ಕುಲಕರ್ಣಿ | ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು | 2008 |
| 16. | ಬಿ.ವಿ. ಹಂಪನಗೌಡ್ರ | ಮಹಾಕೂಟ | 1982 |
| 17. | ಡಾ. ಶಿವರಾಮ ಕಾರಂತ | ಚಿತ್ರ, ಶಿಲ್ಪ, ವಾಸ್ತುಕಲೆಗಳು | 1975 |
| 18. | ಡಾ. ಎಚ್. ತಿಪ್ಪೇರುದ್ರಸ್ವಾಮಿ | ಕರ್ನಾಟಕದ ಸಂಸ್ಕೃತಿ ಸಮೀಕ್ಷೆ | 2007 |
| 19. | ಎ.ಎಂ. ಅಣ್ಣಿಗೇರಿ | ಪಟ್ಟದಕಲ್ಲಿನ ಶಿಲ್ಪವೈಭವ | 1982 |
| 20. | ಎ.ಎಸ್. ನಂಜುಂಡಸ್ವಾಮಿ | ಚಾಲುಕ್ಯರ ಇತಿಹಾಸ | 1976 |
| 21. | ಡಾ. ಶೀಲಾಕಾಂತ ಪತ್ತಾರ | ಪಟ್ಟದಕಲ್ಲು ದರ್ಶನ | 2008 |
| 22. | ಡಾ. ವಿರೂಪಾಕ್ಷ ಬಡಿಗೇರ | ಐಹೊಳೆ ಶಿಲ್ಪ ದರ್ಪಣ | 1984 |
| 23. | ಎ.ಎಂ. ಅಣ್ಣಿಗೇರಿ | ಬಾದಾಮಿ ಚಾಲುಕ್ಯ ಶಿಲ್ಪ ವೈಭವ | 1986 |
| 24. | ಡಾ. ಶೀಲಾಕಾಂತ ಪತ್ತಾರ | ಶಿಲ್ಪಕಾಶಿ ಬಾದಾಮಿ | 2002 |
| 25. | ಡಾ. ಜಿ. ಜ್ಞಾನಾನಂದ | ಶಿಲ್ಪಾದರ್ಶ ಸಂಪುಟ–2 | 2002 |
| 26. | ಡಾ. ಜಿ. ಜ್ಞಾನಾನಂದ | ಪಾರಂಪರಿಕ ಶಿಲ್ಪ–ನೆನ್ನೆ–ನಾಳೆ | 2008 |


## ಇಂಗ್ಲಿಷ್ ಗ್ರಂಥಗಳು


| | | | |
|---|---|---|---|
| 1. | Dr. S. Rajashekhar | Rashtrakuta Art in Karnataka | 1991 |
| 2. | George Michell | Badami-Aihole-Pattadakal | 2011 |
| 3. | Dr. R.S. Gupte | The Art and Architecture of Aihole | 1969 |
| 4. | Editor M.S. Nagaraj Rao | The Chalukyas of Badami | 1978 |
| 5. | D.K. Suresh | The Temples of Karnataka Vol. II | 2003 |
| 6. | Dr. S. Rajashekhar | Karnataka Architecture | 1985 |
| 7. | Gerod Fokima | Chalukya Architecture Vol.I | 2003 |

# "ಚಿತ್ರಾಂಕಣ"

## ಐಹೊಳೆ ದೇವಾಲಯಗಳು

ತಾರಾ ಬಸಪ್ಪ ದೇವಾಲಯ
ಹುಚ್ಚಿಮಲ್ಲಿ ದೇವಾಲಯ
ರಾವಲಪಡೆ ಗುಹಾಲಯ
ಲಾಡಖಾನ ದೇವಾಲಯ
ಗೌಡರ ದೇವಾಲಯ
ಮಲ್ಲಿಕಾರ್ಜುನ ದೇವಾಲಯ
ಹುಚ್ಚಪ್ಪಯ್ಯ ದೇವಾಲಯ
ಹುಚ್ಚಪ್ಪಯ್ಯ ಮಠ
ಮೇಗುತಿ ಜಿನಾಲಯ
ಮೀನಬಸದಿ
ಕೊಂತಿ ದೇವಾಲಯ
ದುರ್ಗಾ ದೇವಾಲಯ

## ಬಾದಾಮಿ ಗುಹಾಲಯಗಳು

1ನೇ ಗುಹಾಲಯ
2ನೇ ಗುಹಾಲಯ
3ನೇ ಗುಹಾಲಯ
4ನೇ ಗುಹಾಲಯ
1ನೇ ಗುಹಾಲಯದ ನಟರಾಜ
1ನೇ ಗುಹಾಲಯದ ಶಿವನ ಪರಿವಾರ
2ನೇ ಗುಹಾಲಯದ ವರಾಹ
2ನೇ ಗುಹಾಲಯದ ತ್ರಿವಿಕ್ರಮ
3ನೇ ಗುಹಾಲಯದ ನಾರಸಿಂಹ
3ನೇ ಗುಹಾಲಯದ ಮಹಾವಿಷ್ಣು
4ನೇ ಗುಹಾಲಯದ ಮಹಾವೀರ
4ನೇ ಗುಹಾಲಯದ ಪಾರ್ಶ್ವನಾಥ

## ಬಾದಾಮಿ ದೇವಾಲಯಗಳು

ಮಾಲೆಗಿತ್ತಿ ದೇವಾಲಯ
ಮೇಲಿನ ಶಿವಾಲಯ
ಭೂತನಾಥ ದೇವಾಲಯ
ಉತ್ತರ ಭೂತನಾಥ ದೇವಾಲಯ

## ಮಹಾಕೂಟ ದೇವಾಲಯಗಳು

ಬಾಣಂತಿಗುಡಿ
ಮಲ್ಲಿಕಾರ್ಜುನ ದೇವಾಲಯ
ಸಂಗಮೇಶ್ವರ ದೇವಾಲಯ
ಮಹಾಕೂಟೇಶ್ವರ ದೇವಾಲಯ

## ಪಟ್ಟದಕಲ್ಲು ದೇವಾಲಯಗಳು

ಸಂಗಮೇಶ್ವರ ಮತ್ತು ಗಳಗನಾಥ ದೇವಾಲಯ
ಮಲ್ಲಿಕಾರ್ಜುನ ಮತ್ತು ಕಾಶೀ ವಿಶ್ವನಾಥ ದೇವಾಲಯ
ವಿರೂಪಾಕ್ಷ ದೇವಾಲಯ
ನಂದಿ ಮಂಟಪ
ಪಾಪನಾಥ ದೇವಾಲಯ
ಪಟ್ಟದಕಲ್ಲು ವಾಸ್ತುಶಿಲ್ಪ ಸಮುಚ್ಚಯ

## ಪಟ್ಟದಕಲ್ಲು ವಿಶೇಷ ಶಿಲ್ಪಗಳು

ವಿರೂಪಾಕ್ಷ ದೇವಸ್ಥಾನದ ಗರ್ಭಗೃಹ
ವಿರೂಪಾಕ್ಷ ದೇವಸ್ಥಾನದ ಹೊರಗೋಡೆ ಅಲಂಕಾರ
ಹೊರಗೋಡೆಯ ಶಿಲ್ಪಾಲಂಕಾರ
ಹೊರಗೋಡೆಯ ಶಿಲ್ಪಾಲಂಕಾರ
ಕೈಲಾಸವನ್ನೆತ್ತಿದ ರಾವಣ
ಶಿವಪಾರ್ವತಿಯರು
ಕಂಬದ ಅಲಂಕಾರಿಕ ಕೆತ್ತನೆ
ಕಂಬದ ಮೋಹಕ ಭಂಗಿ

# ಐಹೊಳೆ ದೇವಾಲಯಗಳು

ತಾರಾ ಬಸಪ್ಪ ದೇವಾಲಯ



ಹುಚ್ಚಿಮಲ್ಲಿ ದೇವಾಲಯ

# ಐಹೊಳೆ ದೇವಾಲಯಗಳು

ಗೌಡರ ದೇವಾಲಯ

ಮಲ್ಲಿಕಾರ್ಜುನ ದೇವಾಲಯ

# ಐಹೊಳೆ ದೇವಾಲಯಗಳು

ಹುಚ್ಚಪ್ಪಯ್ಯ ದೇವಾಲಯ



ಹುಚ್ಚಪ್ಪಯ್ಯ ಮಠ

# ಐಹೊಳೆ ದೇವಾಲಯಗಳು

ಮೇಗುತಿ ಜಿನಾಲಯ



ಮೀನಬಸದಿ

# ಬಾದಾಮಿ ಗುಹಾಲಯದ ವಿಶೇಷ ಶಿಲ್ಪಗಳು



1ನೇ ಗುಹಾಲಯದ ನಟರಾಜ



1ನೇ ಗುಹಾಲಯದ ಶಿವನ ಪರಿವಾರ



2ನೇ ಗುಹಾಲಯದ ವರಾಹ



2ನೇ ಗುಹಾಲಯದ ತ್ರಿವಿಕ್ರಮ

## ಬಾದಾಮಿ ಗುಹಾಲಯದ ವಿಶೇಷ ಶಿಲ್ಪಗಳು



3ನೇ ಗುಹಾಲಯದ ನಾರಸಿಂಹ



3ನೇ ಗುಹಾಲಯದ ಮಹಾವಿಷ್ಣು



4ನೇ ಗುಹಾಲಯದ ಮಹಾವೀರ



4ನೇ ಗುಹಾಲಯದ ಪಾರ್ಶ್ವನಾಥ

# ಬಾದಾಮಿ ದೇವಾಲಯಗಳು

ಮಾಲೆಗಿತ್ತಿ ದೇವಾಲಯ

ಮೇಲಿನ ಶಿವಾಲಯ

# ಮಹಾಕೂಟ ದೇವಾಲಯಗಳು

ಬಾಣಂತಿಗುಡಿ



ಮಲ್ಲಿಕಾರ್ಜುನ ದೇವಾಲಯ

# ಮಹಾಕೂಟ ದೇವಾಲಯಗಳು

ಸಂಗಮೇಶ್ವರ ದೇವಾಲಯ



ಮಹಾಕೂಟೇಶ್ವರ ದೇವಾಲಯ

# ಪಟ್ಟದಕಲ್ಲು ದೇವಾಲಯಗಳು

ಸಂಗಮೇಶ್ವರ ಮತ್ತು ಗಳಗನಾಥ ದೇವಾಲಯ



ಮಲ್ಲಿಕಾರ್ಜುನ ಮತ್ತು ಕಾಶೀ ವಿಶ್ವನಾಥ ದೇವಾಲಯ

# ಪಟ್ಟದಕಲ್ಲು ದೇವಾಲಯಗಳು



ಪಾಪನಾಥ ದೇವಾಲಯ



ಪಟ್ಟದಕಲ್ಲು ವಾಸ್ತುಶಿಲ್ಪ ಸಮುಚ್ಚಯ

# ಪಟ್ಟದಕಲ್ಲು ವಿಶೇಷ ಶಿಲ್ಪಗಳು

ಹೊರಗೋಡೆಯ ಶಿಲ್ಪಾಲಂಕಾರ



ಹೊರಗೋಡೆಯ ಶಿಲ್ಪಾಲಂಕಾರ

# ಪಟ್ಟದಕಲ್ಲು ವಿಶೇಷ ಶಿಲ್ಪಗಳು



ಕೈಲಾಸವನ್ನೆತ್ತಿದ ರಾವಣ



ಶಿವಪಾರ್ವತಿಯರು



ಕಂಬದ ಅಲಂಕಾರಿಕ ಕೆತ್ತನೆ



ಕಂಬದ ಮೋಹಕ ಭಂಗಿ



# ಗ್ರಂಥ ಕರ್ತರ ಕುರಿತು

ಬಾದಾಮಿ ಚಲುಕ್ಯ ದೇವಾಲಯಗಳ ತಲವಿನ್ಯಾಸಗಳು ಇದೊಂದು ವಾಸ್ತುಶಾಸ್ತ್ರದ ನೆಡುಗಲ್ಲು. ಕಾವ್ಯಾತ್ಮಕ ಕೃತಿ ಸರಳ, ದಾಖಲಾತ್ಮಕ ಕೃತಿ ಕಠಿಣ. ಕಾವ್ಯಾತ್ಮಕ ಕೃತಿ ಸಾಹಿತ್ಯವಾಗುತ್ತದೆ, ದಾಖಲಾತ್ಮಕ ಕೃತಿ ಇತಿಹಾಸವಾಗುತ್ತದೆ. ಡಾ ವಿರೂಪಾಕ್ಷ ಬಡಿಗೇರ ಅವರು ತಮ್ಮ ಪ್ರಾಚ್ಯ ಸಂಶೋಧನೆಯ ಪ್ರಗಾಢ ಸೃಜನಾತ್ಮಕ ಪ್ರಯತ್ನದಲ್ಲಿ ಬಾದಾಮಿ ಚಾಲುಕ್ಯರ ದೇವಾಗಾರಗಳಲ್ಲಿ ಹಾಗೂ ಶಿಲ್ಪ ಸಾಮ್ರಾಜ್ಯದಲ್ಲಿ ಅಸೀಮರೂಪದ ವಿನ್ಯಾಸಗಳನ್ನೂ, ನಮ್ರ ನೂಪುರ ರಿಂಗಣದ ನೃತ್ಯಗಳನ್ನೂ ಕಂಡಿದ್ದಾರೆ, ದಾಖಲಾತ್ಮಕ ಶಿಲಾಕೃತಿಗಳನ್ನೂ ಕಂಡಿದ್ದಾರೆ, ಇತಿಹಾಸ ಬರೆದಿದ್ದಾರೆ.

ಚಾಲುಕ್ಯ ವಾಸ್ತುಶಿಲ್ಪದ ಸಾಮ್ರಾಜ್ಯದಲ್ಲಿ ಐಹೊಳೆ, ಬಾದಾಮಿ ಹಾಗೂ ಪಟ್ಟದಕಲ್ಲು – ರೇಖೆಗಳು ಹಾಗೂ ವರ್ತುಲಗಳು ಹೇಗೆ ತಾಲ ಮೇಲ ಹೊಂದಿ ಶಿಲಾಸೌಂದರ್ಯದ, ಅಪರೂಪದ, ಅನನ್ಯ ವೈಭವದ ವಿಸ್ತಾರವನ್ನು ಹರಡಿವೆ ಎಂಬುದನ್ನು ಡಾ. ವಿರೂಪಾಕ್ಷ ಅವರು ಕ್ಷೇತ್ರಕಾರ್ಯಮಾಡಿ ಇತಿಹಾಸ ಆಕರಗಳನ್ನು ಹುಡುಕಿ ಈ 'ಸಂಶೋಧನ' ಸಾರಸ್ವತರಿಗೆ ನೀಡಿದ್ದಾರೆ.

ಪ್ರಸ್ತುತ ಕೃತಿಯಲ್ಲಿ ಈ ವರೆಗಿನ ಇನ್ನುಳಿದ ಸಂಶೋಧಕರಿಗಿಂತ, ಬೇರೆಯಾಗಿ ವಾಸ್ತುಶಾಸ್ತ್ರದ ದರ್ಶನ ನೀಡಿದ್ದಾರೆ. ಬಹಳಷ್ಟು ದೇವಾಲಯಗಳ ನಂಬುಗೆಯ ದೈವಗಳು ಶಿಲ್ಪಸೌಂದರ್ಯ, ಊರ್ಧ್ವ ಶಿಖರಗಳ ಪ್ರಕಾರಗಳು, ಎಡ, ಬಲ ಹಾಗೂ ನೇರದರ್ಶನಗಳು ಅಲ್ಲದೇ ಬಹು ಪ್ರಾಮುಖ್ಯವಾಗಿ, ಅಯಾ ದೇವಾಲಯಗಳು ತಮ್ಮ ತಮ್ಮ ವಿವಿಧ ತಳಹದಿಯ ವಿನ್ಯಾಸಗಳ ಮೇಲೆ ಹೇಗೆ ಸ್ಥಾಯೀ ಹಾಗೂ ಸದೃಢ ಆಗಿವೆ ಎಂಬ 'ನವ್ಯ ಸಂಶೋಧನೆ'ಯನ್ನು ಈ ಗ್ರಂಥದಲ್ಲಿ ಮಂಡಿಸಿದ್ದಾರೆ. ಇದು ಡಾ. ಬಡಿಗೇರ ಅವರ ವಿನೂತನ, ಈ ವರೆಗೂ ಯಾರೂ ಚಿಂತಿಸದ ಮಹದ್ ಚಿಂತನೆಯಿದು, ಹಾಗಾಗಿ ಈ ವೈಶೇಷಕತೆಗೆ ಅವರ ತಪಸ್ಸು ವಾಲಿದೆ, ಹೊಸದಾಗಿದೆ.

ಲೇಖಕರು ತಮ್ಮ ಅಧ್ಯಯನದ ಹಾಗೂ ಸಂಶೋಧನೆಯ ತಪಸ್ಸಿನಲ್ಲಿ ಕಲ್ಲಿನಿಂದ ಕೆತ್ತಿ ಶಿಲ್ಪ ಸಾಹಿತ್ಯವನ್ನು ಅಕ್ಷರಗೊಳಿಸಿದ್ದಾರೆ. ಈ ಗ್ರಂಥದ ಎಂಟು ಅಧ್ಯಾಯಗಳಲ್ಲಿ – ಐತಿಹಾಸಿಕ ಹಿನ್ನೋಟ, ದೇವಾಲಯಗಳ ತಲವಿನ್ಯಾಸದ ಪ್ರಯೋಗಗಳು, ದೇವಾಲಯಗಳ ಪ್ರಕಾರಗಳು, ಬಾದಾಮಿ ಚಾಲುಕ್ಯರ ದೇವಾಲಯಗಳಲ್ಲಿ ತಲವಿನ್ಯಾಸಗಳು, ಬಾದಾಮಿ ಚಾಲುಕ್ಯರ ಗುಹಾಂತರ ದೇವಾಲಯಗಳು, ಬಾದಾಮಿ ಚಾಲುಕ್ಯರ ರಾಚನಿಕ ದೇವಾಲಯಗಳು, ಚಾಲುಕ್ಯ ದೇವಾಲಯಗಳ ವಿಮಾನಶೈಲಿಗಳು ಹಾಗೂ ಸಮಾರೋಪ ಹೀಗೆ ಮುಖಾಮುಖಿಯಾಗುವ ದರ್ಪಣ ಶಾಲೆ ತೆರೆದಿದ್ದಾರೆ. ಇಂಥ ಉತ್ಕೃಷ್ಟ ಗ್ರಂಥವನ್ನು ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಪ್ರಕಟಿಸುತ್ತಿರುವುದು ನಿಜಕ್ಕೂ ಸ್ವಾಗತಾರ್ಹವಾದ ಕಾರ್ಯವಾಗಿದೆ.

"ಶಿಲ್ಪಶಾಸ್ತ್ರದ ತೂಗು ತೊಟ್ಟಿಲೆಂಬ" ಪ್ರತೀತಿ ಪ್ರದರ್ಶಿಸಿದ ಈ ಚಾಲುಕ್ಯ ತಾಣಗಳಲ್ಲಿ ಶಿಲ್ಪಶಾಸ್ತ್ರ ತವನಿಧಿ ನೀಡಿ "ದೇವ ಹಾಗೂ ಮಾನವ" ಇವರಿಬ್ಬರ ಸಂಬಂಧಗಳನ್ನು ಕಲ್ಲುಗಳ ಮಾಧ್ಯಮದಿಂದ ಲಿಪ್ತತೆಯ ನಿಟ್ಟಿಗೆ ಕರೆದೊಯ್ದಿದ್ದಾರೆ. ಡಾ. ವಿರೂಪಾಕ್ಷ ಬಡಿಗೇರ. ಲೇಖಕರು ಈ ವರೆಗೆ ೩೨ ಇದೇ ತರಹದ ಸಾತ್ವಿಕ ಗ್ರಂಥಗಳನ್ನು ಸಾರಸ್ವತ ಲೋಕಕ್ಕೆ ನೀಡಿ ತಮ್ಮ ಬದುಕನ್ನು ಕೃತಾರ್ಥಗೊಳಿಸಿದ್ದಾರೆ.

ಪ್ರಾಗ್ರೂಪದ ಅವರ ಹೆಜ್ಜೆಗಳನ್ನು ಯುವ ಸಂಶೋಧಕರು ಗುರುತಿಸಬೇಕು. ಅವರದು ಆರದ ಬೆಳಕು. ಹಲವು ಹತ್ತಾರು ಬಗೆಯ ಪರಂಪರೆಯ ಅವರ ಹೆಜ್ಜೆಗಳು ಸಾತ್ವಿಕ ಸದಾಚಾರವನ್ನು, ಹಾಗೂ ಇತಿಹಾಸ ಪೂರ್ವಜರ ಸಂಪನ್ನತೆಯನ್ನು ಅವರ ಚಿಂತನೆಗಳಲ್ಲಿ ಕಾಣಬಹುದು. ವೃತ್ತಿ ಹಾಗೂ ಪ್ರವೃತ್ತಿಗಳ ಸೀಮೋಲ್ಲಂಘನ ಮಾಡಿದ ಡಾ. ಬಡಿಗೇರ ಅವರು ಪ್ರಾಚ್ಯ ಬದುಕನ್ನು ಇತ್ಯಾತ್ಮಕವಾಗಿ ಸ್ವೀಕರಿಸಿ ಅದನ್ನು ಮೃದುಲವಾಗಿ ಸತ್ಯಾತ್ಮಕ ದರ್ಶನದಲ್ಲಿ ತೋರಿದ್ದಾರೆ. ಅವರ ಬರಹ ಮನೆ ಮಾತಾಗಲಿ.

ವೃದ್ಧಿರಸ್ತು ಶುಭಂ .


ಡಾ. ಎಸ್.ಕೆ. ಜೋಶಿ
ಹಿರಿಯ ಪುರಾತತ್ವವಿದರು

೬೦, ಸಿಲ್ವರ್ ಆರ್ಚರ್ಡ
ಧಾರವಾಡ






**ಕರ್ನಾಟಕ ಶಿಲ್ಪಕಲಾ ಅಕಾಡೆಮಿ**

ಕನ್ನಡ ಭವನ, ಜೆ.ಸಿ. ರಸ್ತೆ, ಚಾಲುಕ್ಯ ವಿಭಾಗ, ಬೆಂಗಳೂರು-೫೬೦ ೦೦೨. ದೂರವಾಣಿ: ೦೮೦-೨೨೨೬೮೬೫